# ಹೊಸತು

ನೆಮ್ಮದಿಯ ನಾಳೆ ನಮ್ಮದು

ಮೇ ೨೦೧೬
ಬೆಲೆ : ₹ ೨೦

ISSN 2319-7307



# ನವಕರ್ನಾಟಕ ಪ್ರಕಾಶನದ

## 7ನೇ ಪುಸ್ತಕ ಮಳಿಗೆಯ ಶುಭಾರಂಭ
## ಹಾಗೂ 12 ಕೃತಿಗಳ ಲೋಕಾರ್ಪಣೆ





**ಮಳಿಗೆಯ ಉದ್ಘಾಟನೆ**
ಡಾ|| ಎಲ್. ಹನುಮಂತಯ್ಯ
ಕವಿ ಹಾಗೂ ಅಧ್ಯಕ್ಷರು
ಕನ್ನಡ ಅಭಿವೃದ್ಧಿ ಪ್ರಾಧಿಕಾರ
ಕರ್ನಾಟಕ ಸರ್ಕಾರ

**ಕೃತಿಗಳ ಲೋಕಾರ್ಪಣೆ**
ಪ್ರೊ|| ಮಾಲತಿ ಪಟ್ಟಣಶೆಟ್ಟಿ
ಸಾಹಿತಿ ಹಾಗೂ ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕರ್ನಾಟಕ ಸರ್ಕಾರ

ಸ್ಥಳ : ದೇವಾಂಗ ಟವರ್, ಕೆಂಪೇಗೌಡ ರಸ್ತೆ, ಬೆಂಗಳೂರು – 560 009
ದಿನಾಂಕ : 22 ಮೇ 2016, ಭಾನುವಾರ. ಸಮಯ : ಬೆಳಗ್ಗೆ 10 ಗಂಟೆಗೆ

### ಲೋಕಾರ್ಪಣೆಯಾಗಲಿರುವ ಕೃತಿಗಳು

1. ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ — ಡಾ|| ಜಿ. ರಾಮಕೃಷ್ಣ
2. ಭಗವದ್ಗೀತೆ : ಒಂದು ವಿಮರ್ಶೆ — ಎಂ. ಸಿ. ಡೋಂಗ್ರೆ
3. ರಾಮಾಯಣ, ಮಹಾಭಾರತ ಮತ್ತು ಧರ್ಮ — ಮರಾಠಿ ಮೂಲ : ಇರಾವತಿ ಕರ್ವೆ, ಅನುವಾದ : ಚಂದ್ರಕಾಂತ ಪೋಕಳೆ
4. ನಮ್ಮ ಸಂಸ್ಕೃತಿ — ಮರಾಠಿ ಮೂಲ : ಇರಾವತಿ ಕರ್ವೆ, ಅನುವಾದ : ಚಂದ್ರಕಾಂತ ಪೋಕಳೆ
5. ಅಲ್ಲಾಹ್‌ನಿಂದ ನಿರಾಕೃತರು — ಆಂಗ್ಲ ಮೂಲ : ನೂರ್ ಜ಼ಹೀರ್, ಅನುವಾದ : ಎಂ. ಅಬ್ದುಲ್ ರೆಹಮಾನ್ ಪಾಷ
6. ನಿವೇದನೆ (ಆತ್ಮಕಥನ) — ಮರಾಠಿ ಮೂಲ : ಧರ್ಮಾನಂದ ಕೊಸಾಂಬಿ, ಅನುವಾದ : ಡಾ|| ಗೀತಾ ಶೆಣೈ
7. ಖಿಲಾಸಾ ಮತ್ತು ಇತರ ಲೇಖನಗಳು — ಮರಾಠಿ ಮೂಲ : ಧರ್ಮಾನಂದ ಕೊಸಾಂಬಿ . ಅನುವಾದ : ಡಾ|| ಗೀತಾ ಶೆಣೈ
8. ಬೋಧಿಸತ್ವ (ನಾಟಕ) — ಮರಾಠಿ ಮೂಲ : ಧರ್ಮಾನಂದ ಕೊಸಾಂಬಿ, ಅನುವಾದ : ಡಾ|| ಗೀತಾ ಶೆಣೈ
9. ಚಂದನದ ಮರ (ಕಥಾ ಸಂಕಲನ) — ಕೊಂಕಣಿ ಮೂಲ : ಮೀನಾ ಕಾಕೊಡ್‌ಕಾರ್, ಅನುವಾದ : ಡಾ|| ಗೀತಾ ಶೆಣೈ
10. ಒಂಟಿ ಸೇತುವೆ (ಆತ್ಮಕಥನ) — ತೆಲುಗು ಮೂಲ : ಕೊಂಡಪಲ್ಲಿ ಕೋಟೇಶ್ವರಮ್ಮ, ಅನುವಾದ : ಸ. ರಘುನಾಥ
11. ಸ್ವಾತಂತ್ರ್ಯಾ ನಂತರದ ಭಾರತ — ಸಿ. ಆರ್. ಕೃಷ್ಣರಾವ್
12. ಆರೋಗ್ಯ ಆಶಯ (ವೈದ್ಯಕೀಯ ಲೇಖನಗಳು) — ಡಾ|| ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ

ಎಲ್ಲ ಪುಸ್ತಕ ಪ್ರಿಯರಿಗೂ ಆದರದ ಸ್ವಾಗತ

# ಹೊಸತು

## ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ವಿ. ಗೋಪಾಲ್, ತನು, ಗೋಪಿ ಹಿರೇಬೆಟ್ಟು

**ಮುಖಪುಟ :** ಕಾರ್ಮಿಕರು ಸಿಡಿದೆದ್ದಾಗ...

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು




ಗೆಲ್ಲ ಬಜರಂಗದಳ ಮತ್ತು ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತು (ಎಬಿವಿಪಿ) ಇವುಗಳ ಪುಂಡಾಟಿಕೆಯದೇ ಸುದ್ದಿ. ಆರೆಸ್ಸೆಸ್ ಯಾವ ಕಾಲಕ್ಕೆ ಯಾವ ಸಂಘಟನೆಯನ್ನು ಬಳಸಿಕೊಳ್ಳಬೇಕು ಎಂಬುದನ್ನು ಚೆನ್ನಾಗಿ ಮನದಟ್ಟು ಮಾಡಿಕೊಂಡಿದೆ. ಹಿಂದೂ ಜಾಗರಣ ಸಮಿತಿ, ವಿಶ್ವ ಹಿಂದೂ ಪರಿಷತ್ತು ಮುಂತಾದವುಗಳನ್ನು ಉಪಯೋಗಿಸಿಕೊಳ್ಳುವ ರೀತಿಯೇ ಬೇರೆ. ಜವಹರಲಾಲ್ ವಿಶ್ವವಿದ್ಯಾನಿಲಯದ ವಿಚಾರದಲ್ಲಿ ಮೋದಿ ಸರಕಾರ ತಳೆದ ನಿಲುವು, ಅನಂತರ ಹಿಂದುತ್ವವಾದಿಗಳು ಸೃಷ್ಟಿಸಿರುವ 'ರಾಷ್ಟ್ರಪ್ರೇಮ'ದ ವಿಚಾರ ಒಂದು ಕಡೆಯಾದರೆ, ಇನ್ನೊಂದು ಕಡೆ ಹಿಂಸಾಚಾರ ಮೇಲುಗೈ ಪಡೆದುಕೊಳ್ಳುತ್ತಿದೆ. ದೂರದ ದೆಹಲಿಯಲ್ಲಿ ನಡೆದ ಪ್ರಕರಣಗಳು ಒಂದು ಬಗೆ. ದಕ್ಷಿಣ ಭಾರತಕ್ಕೂ, ಅದರಲ್ಲೂ ನಮ್ಮ ರಾಜ್ಯಕ್ಕೂ ಅದು ಪಸರಿಸುತ್ತಿರುವುದೀಗ ಗಾಬರಿ ಉಂಟುಮಾಡುತ್ತಿದೆ.

ಈಚೆಗೆ ತುಮಕೂರಿನಲ್ಲಿ ಎಬಿವಿಪಿ ಕಾರ್ಯಕರ್ತರು ಬಜರಂಗ ದಳದವರು ತುಮಕೂರಿನಲ್ಲಿ ಎಡಪಕ್ಷದೊಂದಿಗೆ ಎಂದರೆ ಭಾರತ ಕಮ್ಯುನಿಸ್ಟ್ ಪಾರ್ಟಿಯೊಂದಿಗೆ ಗುರ್ತಿಸಿಕೊಂಡಿರುವ ವಿದ್ಯಾರ್ಥಿ ಫೆಡರೇಷನ್ ಸದಸ್ಯರ ಮೇಲೆ ಹಲ್ಲೆ ನಡೆಸಿದರು. ಜೆಎನ್‌ಯು ಪ್ರಕರಣ ಕುರಿತು ಪ್ರತಿಭಟನೆಯಲ್ಲಿ ತೊಡಗಿದ್ದ ವಿದ್ಯಾರ್ಥಿಗಳನ್ನು ಆರೆಸ್ಸೆಸ್ಸಿನ ಈ ಭಂಟರು ಹಿಗ್ಗಾಮುಗ್ಗಾ ಥಳಿಸಿದರು. ಅಧಿಕಾರದಲ್ಲಿರುವ ಕಾಂಗ್ರೆಸ್ ಆಡಳಿತದ ಪೊಲೀಸರು ಕೈಕಟ್ಟಿಕೊಂಡು ಸುಮ್ಮನಿದ್ದುದು ನಿಜಕ್ಕೂ ಆಶ್ಚರ್ಯಕರ. ಪೊಲೀಸರು ಸಕಾಲದಲ್ಲಿ ಎಚ್ಚರವಹಿಸಿ ಕ್ರಮ ಕೈಗೊಂಡಿದ್ದರೆ ಪುಂಡಾಟಿಕೆಯನ್ನು ತಡೆಗಟ್ಟಬಹುದಾಗಿತ್ತು. ಘಟನೆಯ ನಂತರ ಕೆಲವರ ಮೇಲೆ ಕೈಗೊಂಡಿರುವುದು ಕಣ್ಣೊರೆಸುವ ಕ್ರಮವೇ ಇರಬೇಕು.

ಇನ್ನು ಮಂಡ್ಯದ 'ಲವ್ ಜಿಹಾದ್' ಪ್ರಕರಣವನ್ನು ನೋಡೋಣ. ಇಲ್ಲೂ ಪೊಲೀಸರ ನಿಷ್ಕ್ರಿಯತೆ ಎದ್ದುಕಾಣುತ್ತದೆ. ಪ್ರೀತಿಸಿದ ಯುವಕ, ಯುವತಿ ಅನ್ಯಮತೀಯರಾಗಿದ್ದರೆ ಸಂಘಪರಿವಾರದ ಅವಕೃಪೆಗೆ ಒಳಗಾಗುತ್ತಾರೆ. ಮಂಡ್ಯ ಜಿಲ್ಲೆಯ ಹಿಂದೂ ಯುವತಿ ಮತ್ತು ಅದೇ ಜಿಲ್ಲೆಯ ಮುಸ್ಲಿಮ್ ಯುವಕ ಕೆಲ ವರ್ಷಗಳಿಂದ ಪರಸ್ಪರ ಪ್ರೀತಿಸುತ್ತಿದ್ದರು. ಎರಡೂ ಮನೆಯವರ ಸಮ್ಮತಿಯ ಮೇಲೆ ವಿವಾಹವೂ ನಿಶ್ಚಯವಾಗಿದೆ. ಆದರೆ ಈ ಜೋಡಿಯ ವಿವಾಹಕ್ಕೆ ಭಾಜಪದ ಸ್ಥಳೀಯರ ವಿರೋಧ ಬಂದಿದೆ. ಮನೆಯ ಮುಂದೆ ಧರಣಿ ನಡೆಸಿದ ಭಾಜಪ ಕಾರ್ಯಕರ್ತರು ಮಂಡ್ಯ ಬಂದ್‌ಗೂ ಕರೆ ನೀಡಿದ್ದಾಯಿತು. ಅಂದರೆ ವಿಷಯ ಯಾವ ಮಟ್ಟಕ್ಕೆ ಹೋಗಿದೆ ಎನ್ನುವುದು ಗೊತ್ತಾಗುತ್ತದೆ. ಸರಕಾರದ ನಿಷ್ಕ್ರಿಯತೆ ಇಲ್ಲಿ ಎದ್ದುಕಾಣುತ್ತಿದೆ. ಇದು ಖಾಸಗೀ ಪ್ರೇಮಪ್ರಕರಣವಲ್ಲ. ಪರಸ್ಪರ ಪ್ರೀತಿಸಿ ವಿವಾಹವಾಗುವುದಕ್ಕೂ ಇನ್ನು ಮುಂದೆ ಸಂಘಪರಿವಾರದ ಅಪ್ಪಣೆ ಬೇಕಾಗುವುದೇನೊ ?

ಇದಲ್ಲದೆ ನಮ್ಮ ರಾಜ್ಯದಲ್ಲಿ ಮರ್ಯಾದಾ ಹತ್ಯೆ ಪ್ರಕರಣವೂ ಕೂಡ ಈಚೆಗೆ ಬೆಳಕಿಗೆ ಬಂದಿದೆ. ನೆರೆಯ ತಮಿಳುನಾಡಿನಲ್ಲಿ ಹಾಡುಹಗಲೇ ಹರಿಜನ ಯುವಕನ ಹತ್ಯೆ ನಡೆದದ್ದು ಇನ್ನೂ ನೆನಪಿನಿಂದ ಮಾಸಿಲ್ಲ. ಆತ ದಲಿತ. ಉಚ್ಚ ವರ್ಗದ ಕನ್ಯೆಯನ್ನು ವರಿಸಿ ವಿವಾಹವಾಗಿದ್ದ. ಕೊನೆಯದಾಗಿ ನಾಗಪುರದ 'ಷೂ' ಎಸೆತ ಪ್ರಕರಣ ಗಮನಿಸೋಣ. ಮಹಾರಾಷ್ಟ್ರದ ನಾಗಪುರ, ಆರೆಸ್ಸೆಸ್ ಕೇಂದ್ರ ಇರುವ ಸ್ಥಳ. ಅಲ್ಲಿ 'ರಾಷ್ಟ್ರೀಯತೆ' ಕುರಿತು ಒಂದು ವಿಚಾರ ಸಂಕಿರಣ. ಜೆಎನ್‌ಯು ವಿದ್ಯಾರ್ಥಿ ಸಂಘದ ಅಧ್ಯಕ್ಷ ಕನ್ಹಯ್ಯ ಕುಮಾರ್ ಭಾಷಣ ಮಾಡುತ್ತಿರುವಾಗ ವೇದಿಕೆಯ ಮೇಲೇರಿದ ಬಜರಂಗದಳದ ಸದಸ್ಯ ಅವರತ್ತ ತನ್ನ 'ಷೂ' ಎಸೆದ. ಅದನ್ನು ಕೈಗೆತ್ತಿಕೊಂಡ ಕನ್ಹಯ್ಯ ಇನ್ನೊಂದನ್ನು ಎಸೆದಿದ್ದರೆ ಜೋಡಿ ಯಾರಿಗಾದರೂ ಬಡವರಿಗೆ ಉಪಯೋಗವಾಗುತ್ತಿತ್ತು ಎಂದು ಕಿಚಾಯಿಸಿದ. ದೆಹಲಿಯಲ್ಲಿ ಆಪ್ ಮುಖ್ಯಮಂತ್ರಿ ಅರವಿಂದ ಕೇಜ್ರಿವಾಲ್ ಮೇಲೆ ಈಗ ಎರಡು ಸಲ ಇಂಥದೇ ಪ್ರಯೋಗ ನಡೆದಿದೆ. ಇಂಥ ಪ್ರತಿರೋಧವನ್ನು 'ಸ್ಪೋರ್ಟಿವ್' ಆಗಿ ತೆಗೆದುಕೊಂಡರೆ ಫಲಿತಾಂಶ ಒಳ್ಳೆಯದಾದೀತು.

✶ ✶ ✶

(೭ನೇ ಪುಟಕ್ಕೆ )



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೭ ಸಂಚಿಕೆ–೧೦ ಮೇ ೨೦೧೬

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




## ಸಂಪಾದಕೀಯ

# ಅಂಬೇಡ್ಕರ್ ಅನುಶಾಸನದ ಪಾಲನೆಯೋ ಖಾಲಿ ಬೂಟಾಟಿಕೆಯೋ ?

**ಡಾ॥** ಬಾಬಾಸಾಹೇಬ್ ಅಂಬೇಡ್ಕರರ ೧೨೫ನೆಯ ಜನ್ಮದಿನವನ್ನು ನಮ್ಮ ರಾಜ್ಯದ ಎಡಪಕ್ಷಗಳು ವಿಶಿಷ್ಟ ರೀತಿಯಲ್ಲಿ ಆಚರಿಸಿವೆ. ಭಾರತ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಏಪ್ರಿಲ್ ೧೪ರಂದು ತುಮಕೂರಿನಲ್ಲಿ ರಾಜ್ಯಮಟ್ಟದ ಸಮಾವೇಶವೊಂದು ಜರುಗಿತು. "ಸಂವಿಧಾನವನ್ನು ರಕ್ಷಿಸಿ, ಫ್ಯಾಸಿಸಂ ತೊಲಗಿಸಿ" ಎಂಬುದು ಸಮಾವೇಶದ ಧ್ಯೇಯವಾಕ್ಯ. ಹಾಗೆ ನೋಡಿದರೆ ಅವೆರಡೂ ಪ್ರತ್ಯೇಕ ಆಶಯಗಳಲ್ಲ. ಫ್ಯಾಸಿಸಂ ಎಂಬ ರೌದ್ರಪಿಶಾಚಿಯು ಗವಾಕ್ಷಿಯಿಂದ ತೂರಿಬರುವಂತಾದರೆ ಸಂವಿಧಾನವು ಉಳಿಯಲಾರದು; ಪ್ರಭುತ್ವವು ಸಂವಿಧಾನವನ್ನು ನಿಜಾರ್ಥದಲ್ಲಿ ಮಾನ್ಯಮಾಡುವುದಾದರೆ ಫ್ಯಾಸಿಸಂಗೆ ನುಸುಳಿಬರುವ ಅವಕಾಶವಿರುವುದಿಲ್ಲ. ಸದ್ಯದಲ್ಲಿ ನಮ್ಮ ಕೇಂದ್ರ ಸರ್ಕಾರವು ಫ್ಯಾಸಿಸ್ಟ್ ಪದ್ಧತಿಗಳಿಗೆ ಜೀವ ತುಂಬುತ್ತಿದೆ; ಆದ್ದರಿಂದ ನಮ್ಮ ಸಂವಿಧಾನವು ಅಪ್ರಸ್ತುತವಾಗುವ ದಿಕ್ಕಿನಲ್ಲಿ ದೇಶವು ಸಾಗುತ್ತಿದೆಯೆಂಬ ಆತಂಕವು ಸಹಜವಾಗಿದೆ.

ಭಾಜಪದ ಮಾಜಿ ಮಂತ್ರಿ ಅರುಣ್ ಶೌರಿ ಅಂಬೇಡ್ಕರರನ್ನು ಕೆಲ ವರ್ಷಗಳ ಹಿಂದಷ್ಟೇ "ಸುಳ್ಳು ದೇವತೆಗಳ ಸರಮಾಲೆ"ಗೆ ಸೇರಿಸಿದ್ದುದು ಮರೆತ ವಿಷಯವಲ್ಲ. ದಲಿತ ವರ್ಗದ ಬೆಂಬಲ ಪಡೆಯಲು ಶೇ. ೩೧ರ ಮೋದಿ ಸರ್ಕಾರವು ಈಗ ಅಂಬೇಡ್ಕರರನ್ನು ವಿಜೃಂಭಿಸುತ್ತಿರುವುದು ಚರಿತ್ರೆಯ ಒಂದು ವ್ಯಂಗ್ಯ. ಅರುಣ್ ಶೌರಿಯ ಪುಸ್ತಕವನ್ನು ಇನ್ನಿಲ್ಲದಂತೆ ಶ್ಲಾಘಿಸಿದ್ದ ಆರೆಸ್ಸೆಸ್ ಪಾಕ್ಷಿಕಗಳು ಈಗ ಅಂಬೇಡ್ಕರ್ ವಿಶೇಷ ಸಂಚಿಕೆಗಳನ್ನು ಹೊರತಂದಿವೆ. ೧೨೫ ಅಡಿ ಎತ್ತರದ ಅಂಬೇಡ್ಕರ್ ಪ್ರತಿಮೆಯೊಂದನ್ನು ನಿಲ್ಲಿಸುವುದಾಗಿ ಒಂದು ರಾಜ್ಯ ಸರ್ಕಾರ ಹೇಳಿದೆ ಮತ್ತು ಈವರೆಗೆ ಕಾಂಗ್ರೆಸ್ ಸರ್ಕಾರವು ಅಂಬೇಡ್ಕರರ ಪ್ರತಿಮೆಯೊಂದನ್ನು ನಿರ್ಮಿಸಿಲ್ಲವೆಂದು ಮೋದಿ ದೂರಿದ್ದಾರೆ. ಯಾರಿಗಾದರೂ ಮಹತ್ವದ ಗೌರವ ನೀಡಬೇಕಾದರೆ ಅವರ ಪ್ರತಿಮೆಗಳನ್ನು ಕಡೆಯಬೇಕೋ ಅಥವಾ ಅವರ ಚಿಂತನೆ ಮತ್ತು ಕ್ರಿಯೆಗಳನ್ನು ಅನುಸರಿಸಬೇಕೋ ಎಂಬುದರಲ್ಲಿ ದ್ವಂದ್ವವು ಸಾಧ್ಯವಿಲ್ಲ. ಯಾವುದೇ ವ್ಯಕ್ತಿಯ ಆಂತರಿಕ ಗುಣಗಳು ಕಸಿಗೊಳ್ಳಬೇಕಾದರೆ ಎರಡು ಲಕ್ಷಣಗಳು ಅತ್ಯಗತ್ಯವೆಂದು ಅಂಬೇಡ್ಕರ್ ನಂಬಿದ್ದರು : (ಅ) ವ್ಯಕ್ತಿಯ ಪ್ರತಿಷ್ಠೆಗೆ ಧಕ್ಕೆ ಬಾರದಂತಹ ನಡತೆಯು ತನ್ನಲ್ಲಿ ಮತ್ತು ಇತರರಲ್ಲಿ ಶೋಭಿಸಬೇಕು, ಮತ್ತು (ಆ) ಪ್ರತಿಯೊಬ್ಬರ ಸುಪ್ತ ಚೈತನ್ಯಗಳ ಸ್ಫುರಣೆಗೆ ಅವಕಾಶವಿರುವಂತಹ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸನ್ನಿವೇಶದ ರಚನೆಯಾಗಬೇಕು. ಇವೆರಡೂ ನಮ್ಮಲ್ಲಿ ಇನ್ನೂ ಮರೀಚಿಕೆಯಾಗಿಯೇ ಉಳಿದಿವೆ. ಇಬ್ಬರು ಕೇಂದ್ರ ಮಂತ್ರಿಗಳ ಜಡ್ಡುತನದಿಂದಾಗಿ ಹೈದರಾಬಾದ್‌ನಲ್ಲಿ ರೋಹಿತ್ ವೇಮುಲ ಸಾವನ್ನು ಆವಾಹಿಸಿಕೊಂಡಿದ್ದು ಇದಕ್ಕೊಂದು ನಿದರ್ಶನ. ಸಾವಿರಾರು ಅಂತಹ ಜೀವಗಳಿಗೆ ಹೊಸಕಿಹಾಕಿಸಿಕೊಳ್ಳುವ ದುರಂತ ತಪ್ಪಿಲ್ಲ. ಸಂವಿಧಾನ ರಚಿಸಹೊರಟಾಗ ತಮ್ಮೆಲ್ಲ ಆಶಯಗಳನ್ನೂ, ಅವುಗಳ ಪೂರೈಕೆಗೆ ಬೇಕಾದ ವ್ಯವಸ್ಥೆ ಹಾಗೂ ನಿಯಮಗಳನ್ನೂ ಪೂರ್ತಿಯಾಗಿ ಅಳವಡಿಸಲು ಅಂಬೇಡ್ಕರ್ ಅವರಿಗೆ ಸಾಧ್ಯವಾಗಲಿಲ್ಲ. ಏಕೆಂದರೆ, ಹೆಜ್ಜೆಹೆಜ್ಜೆಗೂ ತೊಡಕುಗಳನ್ನುಂಟು ಮಾಡುತ್ತಿದ್ದ ಹಳಸಲು ಮಿದುಳುಗಳು ಸಂವಿಧಾನ ರಚನಾಸಭೆಯಲ್ಲಿದ್ದವು. ಪುರುಷೋತ್ತಮದಾಸ್ ಟಂಡನ್, ಕೆ. ಎಂ. ಮುನ್ಶಿ ಮುಂತಾದವರು ಹಳೆಯ ಕಟ್ಟುಪಾಡುಗಳನ್ನು ಹೇರುವ ಆತುರದಲ್ಲಿದ್ದರು. ಪ್ರಸ್ತುತ, ಸುಸಂಸ್ಕೃತರನ್ನು ವಿಕಾಸಗೊಳಿಸುವುದಾಗಿ ಕೊಚ್ಚಿಕೊಳ್ಳುವ ಆರೆಸ್ಸೆಸ್ ಸೃಜಿಸಿರುವುದು ತುಮಕೂರಿನಲ್ಲಿ ಜ್ಯೋತಿಯ ಹೊಟ್ಟೆಗೆ ಒದೆಯುವಂತಹ ದುರುಳರನ್ನು; ಇಲ್ಲವೇ ಕನ್ಹಯ್ಯನಿಗೆ ಚಪ್ಪಲಿ ಒಗೆಯುವಂತಹ ತಿಪ್ಪೆ ಮಾದರಿ ವ್ಯಕ್ತಿಗಳನ್ನು. ಇದೆಲ್ಲಾ ರಾಷ್ಟ್ರೀಯತೆಯ ಹೆಸರಿನಲ್ಲಿ ನಡೆಯುತ್ತಿದೆಯೆಂಬುದು ಸಂವಿಧಾನವನ್ನು ನಮ್ಮ ಚೌಕಟ್ಟಿನಲ್ಲಿ ಗೌಣವಾಗಿಸಿರುವುದರ ಸಂಕೇತ. ಚಲಿಸುತ್ತಿದ್ದ ರೈಲಿನಿಂದ ಒಬ್ಬ ಮುಸಲ್ಮಾನ ಮಹಿಳೆಯನ್ನು ಹೊರದಬ್ಬಿದರೂ ಕಾನೂನಿನ ಕಕ್ಷೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವಂತಹ ಆರಕ್ಷಣಾ ವ್ಯವಸ್ಥೆ ನಮ್ಮಲ್ಲಿದೆ.

ಭಗತ್ ಸಿಂಗ್‌ನಂಥವರು ರಾಷ್ಟ್ರೀಯತೆಯ ಬಗ್ಗೆ ಉದ್ದುದ್ದ ಭಾಷಣಗಳನ್ನು ಬಿಗಿಯಲಿಲ್ಲ, ಘೋಷಣೆಗಳನ್ನು ಕೂಗಿಸಲಿಲ್ಲ. ವಸಾಹತುಶಾಹಿ ಅಥವಾ ಆ ಮಾದರಿಯ ಬೇರಾವುದೇ ವ್ಯವಸ್ಥೆಯಲ್ಲಿ ತಾಂಡವವಾಡುವ ದೇಶದ ಸಂಪತ್ತಿನ ಲೂಟಿಯನ್ನು ಅಂತ್ಯಗೊಳಿಸುವುದು, ನಮ್ಮದೇ ದೇಶದ ನಯವಂಚಕರು ಜನತೆಯ ಶೋಷಣೆ ಮಾಡುವುದರ ನಿಯಂತ್ರಣ, ಮತ್ತು ದೇಶದ ನೈಸರ್ಗಿಕ ಹಾಗೂ ಮಾನವಿಕ ಸಂಪನ್ಮೂಲಗಳು ಜನತೆಯ ಹಿತಕ್ಕಾಗಿ ಬಳಸಬೇಕು, ಎಂಬ ಮೂರು ಸೂತ್ರಗಳು ರಾಷ್ಟ್ರೀಯತೆಯ ಮೂಲಭೂತ ಲಕ್ಷಣಗಳೆಂದು ಆ ಹುತಾತ್ಮರೆಲ್ಲಾ ಭಾವಿಸಿದ್ದರು. ಅಂಬೇಡ್ಕರ್ ಅವರ ನೇತೃತ್ವದಲ್ಲಿ ಸಿದ್ಧವಾದ ನಮ್ಮ ಸಂವಿಧಾನದ ಮೂಲಭೂತ ಹಕ್ಕುಗಳು ಹಾಗೂ ಪ್ರಭುತ್ವಕ್ಕೆ ನೀಡಲಾಗಿರುವ ನಿರ್ದೇಶಕ ಸೂತ್ರಗಳು ಇದೇ ಸ್ವರೂಪದ ರಾಷ್ಟ್ರೀಯತೆ ಮತ್ತು ರಾಷ್ಟ್ರಪ್ರಜ್ಞೆಗೆ ಒತ್ತು ನೀಡಿವೆ. ಆದರೆ ಯಾವ ಮನೆಯಲ್ಲಿ ಎಂತಹ

ಮಾಂಸವನ್ನಿರಿಸಲಾಗಿದೆಯೆಂದು ಅನಧಿಕೃತವಾಗಿ ತನಿಖೆ ನಡೆಸಿ ಹಿಂಸಿಸುವ ಗೂಂಡಾಪಡೆಗಳು ಯಥೇಚ್ಛವಾಗಿ ವಿಹರಿಸುತ್ತಿದ್ದರೆ ಯಾವ ಮೂಲಭೂತ ಹಕ್ಕು ಮತ್ತು ನಿರ್ದೇಶಕ ಸೂತ್ರ ಜೀವಂತವಾಗಿದ್ದೀತು ! ನಮ್ಮ ನೆಲ, ಜಲ, ಖನಿಜಗಳು, ಎಲ್ಲವನ್ನೂ ತಮ್ಮದಾಗಿಸಿಕೊಳ್ಳುವ ಸ್ವದೇಶಿ ಮತ್ತು ವಿದೇಶಿ ಕಂಪನಿಗಳಿಗೆ ಮುಕ್ತ ಅವಕಾಶ ನೀಡುವ ಆರ್ಥಿಕ ನೀತಿಗಳನ್ನು ಪಾಲಿಸುತ್ತಿರುವ ಕೇಂದ್ರ ಸರ್ಕಾರವು ಸಂವಿಧಾನಕ್ಕೆಷ್ಟು ಮಾನ್ಯತೆ ನೀಡಿದೆ ? ಇರುವ ಸಾರ್ವಜನಿಕ ವಲಯದ ಉದ್ಯಮಗಳನ್ನು ಮುಚ್ಚಿ ಸಂವಿಧಾನದ ಯಾವ ನಿರ್ದೇಶಕ ಸೂತ್ರಗಳಿಗೆ ಬದ್ಧವಾಗಿದೆ ? ಅವನ್ನೆಲ್ಲಾ ಮೂಲೆಗೆ ತಳ್ಳಿ ಅಂಬೇಡ್ಕರ್ ಅವರ ಪುತ್ಥಳಿ ಕಡೆಯುವುದಾದರೆ ಅದಕ್ಕಿಂತ ದೊಡ್ಡ ವಿಪರ್ಯಾಸವುಂಟೆ, ಅಪರಾಧವುಂಟೆ ? ಅಂಬೇಡ್ಕರ್ ಅವರ ರಾಷ್ಟ್ರೀಯತೆಯಲ್ಲಿ ರಾಷ್ಟ್ರದ ಜನತೆಗೆ ಆದ್ಯಸ್ಥಾನವಿರುತ್ತದೆ. ಜನತೆಯ ಹಿತ, ಸ್ವಾತಂತ್ರ್ಯ, ಸಾಂಸ್ಕೃತಿಕ ಏಳಿಗೆ, ಆರ್ಥಿಕ ಸ್ವಾವಲಂಬನೆ, ಸಾಮಾಜಿಕ ಸಾಮರಸ್ಯ, ಇವೆಲ್ಲಾ ರಾಷ್ಟ್ರೀಯತೆಯ ಅವಿಚ್ಛಿನ್ನ ಕುರುಹುಗಳು; ಸಂವಿಧಾನದಲ್ಲಿ ಅವಕ್ಕೆ ಪೂರಕವಾದ ಹಲವು ನಿಬಂಧನೆಗಳಿವೆ. ಕೇಂದ್ರದ ಮೋದಿ ಸರ್ಕಾರ ಇವೆಲ್ಲಕ್ಕೂ ಕುತ್ತು ತರುತ್ತಿದೆ. ಅದರೊಟ್ಟಿಗೆ ಫ್ಯಾಸಿಸ್ಟ್ ಧೋರಣೆ ಮತ್ತು ಆಚರಣೆ ವಿಷಾನಿಲದಂತೆ ಹರಡುತ್ತಿವೆ. "ಸಂವಿಧಾನವನ್ನು ರಕ್ಷಿಸೋಣ" ಎಂಬ ಕಾತುರಕ್ಕೆ ಇವೆಲ್ಲಾ ಕಾರಣಗಳು. ಅಂಬೇಡ್ಕರ್ ಅವರ ಆರಾಧನೆ ಮಾಡುತ್ತಾ ಅವರ ಆಶಯಗಳನ್ನು ಹೂತುಹಾಕುವ ಅಧಿಕಪ್ರಸಂಗಿಗಳ ಬಗ್ಗೆ ಎಚ್ಚರದಿಂದಿರಬೇಕಾಗಿದೆ.

ಅಂಬೇಡ್ಕರ್ ಭಾರತದ ಬಹುತ್ವವನ್ನು ಗುರುತಿಸಿ ಅದನ್ನು ರಾಷ್ಟ್ರೀಯತೆಯ ಒಂದು ಭಾಗವೆಂದು ಪರಿಗಣಿಸಿದರು. ಭಾಷೆ, ಆಹಾರ ಪದ್ಧತಿ, ಆಚರಣೆಗಳು, ಧಾರ್ಮಿಕ ನಂಬಿಕೆಗಳು, ಇವೆಲ್ಲಾ ಭಿನ್ನವಾಗಿರುವ ದೇಶದಲ್ಲಿ ಒಂದು ಸಂಸ್ಕೃತಿ, ಒಂದು ಧಾರ್ಮಿಕ ಆಚರಣೆ, ಒಂದು ಭಾಷೆ, ಒಬ್ಬ ನಾಯಕ, ಎಂಬ ಮಾತುಗಳು ಫ್ಯಾಸಿಸ್ಟ್ ದೌರ್ಜನ್ಯಗಳಿಗೆ ಎಡೆಮಾಡಿಕೊಡುತ್ತವೆ. ವಸ್ತುತಃ ಬಹುತ್ವವನ್ನು ಆದರಿಸದಿದ್ದರೆ ಅಂಬೇಡ್ಕರ್ ಅವರಿಗೆ ಮಾನ್ಯತೆ ನೀಡಿದಂತಾಗುವುದಿಲ್ಲ.

ಇನ್ನು ಆರ್ಥಿಕ ನೀತಿಗಳನ್ನು ಪರಾಮರ್ಶಿಸುವುದಾದರೆ ಆಗಸ್ಟ್ ೧೯೩೬ರಲ್ಲಿ ತಮ್ಮ 'ಸ್ವತಂತ್ರ ದುಡಿಮೆಗಾರರ ಪಕ್ಷ'ದ ವತಿಯಿಂದ ಡಾ॥ ಅಂಬೇಡ್ಕರ್ ಪ್ರತಿಪಾದಿಸಿದ ನೀತಿಗಳನ್ನು ಗಮನಿಸಬೇಕು. ಅವರು ಹಿರಿಯ ಅರ್ಥಶಾಸ್ತ್ರಜ್ಞರೆಂಬುದನ್ನು ಮರೆಯಲಾಗದು. ಕೃಷಿಗೆ ಸಂಬಂಧಿಸಿದಂತೆ ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯು ಪ್ರಮುಖವಾಗಿ ಮೂರು ಅಂಶಗಳನ್ನು ಒತ್ತಿ ಹೇಳಿದೆ: ಕೃಷಿ ಭೂಮಿಯು ಕ್ರಮೇಣ ಛಿದ್ರಗೊಳ್ಳುತ್ತಾ ಹೋಗಕೂಡದು (ಮತ್ತು ಅದಕ್ಕಾಗಿ ಕೃಷಿಯನ್ನು ಸಹಕಾರಿ ತತ್ವದಡಿ ಸಂಘಟಿಸಬೇಕು); ಕೃಷಿಯನ್ನು ಒಂದು ಉದ್ಯಮದಂತೆ ಬೆಳೆಸಬೇಕು; ಮತ್ತು ರೈತರು ಲೇವಾದೇವಿ ಮಾಡುವವರ ಇಕ್ಕುಳಕ್ಕೆ ಸಿಕ್ಕಿ ನಲುಗಿಹೋಗುವಂತಿರಕೂಡದು. ಇಂದು ಡಾ॥ ಅಂಬೇಡ್ಕರರನ್ನು ಸ್ತುತಿಸ ಹೊರಟಿರುವ ಪ್ರಧಾನಿ ಮೋದಿ ತಮ್ಮ ಸರ್ಕಾರದ ಕೃಷಿ ಕುನೀತಿಗಳನ್ನು ಈ ಆಶಯಗಳ ನಿಟ್ಟಿನಲ್ಲಿ ವಿಶ್ಲೇಷಿಸಿಕೊಳ್ಳಬೇಕು. ಅಂಬೇಡ್ಕರರ ನಿಲುವಿನಿಂದ ತಾವೆಷ್ಟು ಗಾವುದ ದೂರವಿದ್ದಾರೆಂದು ಆಗ ಅವರಿಗೆ ತಿಳಿಯಬಹುದು.

ಭಾರತದ ರಾಜಕೀಯ ಸ್ವಾತಂತ್ರ್ಯವು ಆಗಸ್ಟ್ ೧೯೪೭ರಲ್ಲಿ ಎಂಬುದು ಖಾತ್ರಿಯಾದ ಸಂದರ್ಭದಲ್ಲಿ ಭವಿಷ್ಯ ಭಾರತದ ಸಂವಿಧಾನದ ರಚನೆಯ ಬಗ್ಗೆ ಆಲೋಚನೆ ಆರಂಭವಾಯಿತು. ಇಚ್ಛೆಯುಳ್ಳವರು ತಮ್ಮ ಸಲಹೆಗಳನ್ನು ನೀಡಬಹುದೆಂದು ತಿಳಿಸಲಾಯಿತು. ಆಗ್ಗೆ ಡಾ॥ ಅಂಬೇಡ್ಕರ್ 'ಶೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಶನ್ ಪಾರ್ಟಿ' (ಪರಿಶಿಷ್ಟ ಜಾತಿಗಳ ಒಕ್ಕೂಟವಾದ ಪಕ್ಷ) ರಚಿಸಿದ್ದರು. ೧೫.೨.೧೯೪೭ರಂದು ಪಕ್ಷದ ಪರವಾಗಿ ಒಂದು ಜ್ಞಾಪನಾ ಪತ್ರವನ್ನು ಅವರು ಸಲ್ಲಿಸಿದರು. ಸಂವಿಧಾನ ರಚನಾ ಸಭೆಯ ಅವಗಾಹನೆಗೆಂದು ಕೆಲವು ಸೂತ್ರಗಳನ್ನು ಅದರಲ್ಲಿ ನಿರ್ದಿಷ್ಟವಾಗಿ ನಮೂದಿಸಲಾಗಿತ್ತು. ಅವುಗಳಲ್ಲಿ ಕೆಲವು ಹೀಗಿವೆ: (ಅ) ದೇಶದ ಪ್ರಮುಖ ಉದ್ಯಮಗಳೆಲ್ಲಾ ಸರ್ಕಾರದ್ದೇ ಆಗಿರಬೇಕು. (ನಮ್ಮ ರೈಲ್ವೆ ಮತ್ತು ದೂರಸಂಪರ್ಕ ಇಲಾಖೆಗಳ ಮಂತ್ರಿಗಳು ಎಲ್ಲವನ್ನೂ ಖಾಸಗಿಗೆ ಹಸ್ತಾಂತರಿಸಲು ಷಡ್ಯಂತ್ರಗಳನ್ನು ರಚಿಸುತ್ತಿದ್ದಾರೆ.) (ಆ) ಮಿಕ್ಕ ಉದ್ಯಮಗಳು ಸಹ ಸರ್ಕಾರದ ಉಸ್ತುವಾರಿಯಲ್ಲಿರಬೇಕು. (ಅಂಬಾನಿ, ಅದಾನಿ, ಮಲ್ಯ, ಅಂಥವರ ಮೇಲಿಂದು ಯಾವ ನಿಯಂತ್ರಣವೂ ಇಲ್ಲ.) (ಇ) ಜೀವವಿಮೆಯು ಸರ್ಕಾರದ ಉದ್ದಿಮೆಯಾಗಿರಬೇಕು. (ಅದನ್ನು ಇಲ್ಲವಾಗಿಸಲು ವಿದೇಶಿ ಸಂಸ್ಥೆಗಳಿಗೆ ಆಹ್ವಾನ ನೀಡಲಾಗುತ್ತಿದೆ.) (ಈ) ಕೃಷಿ ಉದ್ದಿಮೆಯು ಸರ್ಕಾರದ ನೇತೃತ್ವದಲ್ಲಿ ಸಹಕಾರಿ ತತ್ವದ ಆಧಾರದಿಂದ ಮುನ್ನಡೆಯಬೇಕು. (ಈಗ ಕೃಷಿಯನ್ನು ಕಾರ್ಪೊರೇಟ್ ವಲಯದ ಕೈಗೊಂಬೆಯನ್ನಾಗಿಸಲಾಗುತ್ತಿದೆ.) (ಉ) ಭೂಮಿ ಮತ್ತು ಅಸ್ತಿತ್ವದಲ್ಲಿರುವ ಉದ್ದಿಮೆಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಬೇಕು. (ಈಗ ಭೂಮಿಯನ್ನು ರೈತರಿಂದ ಕಸಿಯಲಾಗುತ್ತಿದೆ ಮತ್ತು ಸರ್ಕಾರಿ ಉದ್ದಿಮೆಗಳನ್ನು ಕವಡೆಕಾಸಿಗೆ ಹರಾಜು ಮಾಡಲಾಗುತ್ತಿದೆ.)

ಇವೆಲ್ಲಾ ಸಂವಿಧಾನದಲ್ಲಿ ಅವೇ ರೂಪಗಳಲ್ಲಿ ನಮೂದಾಗಲು ಸಾಧ್ಯವಾಗಲಿಲ್ಲ, ಆದರೆ ಆ ಆಶಯಗಳನ್ನು ಅಂಬೇಡ್ಕರ್ ತಮ್ಮದೇ ರೀತಿಯಲ್ಲಿ ಪ್ರತಿಫಲಿಸಿದ್ದಾರೆ. ಹೀಗಿರುವಾಗ ಎಲ್ಲಿಯ ಅಂಬೇಡ್ಕರ್ ಮತ್ತು ಎಲ್ಲಿಯ ಆರೆಸ್ಸೆಸ್–ಭಾಜಪ–ಮೋದಿ ! ಜನರಿಗೆ ಒಂಟೆ ಸವಾರಿ ಮಾಡಿಸುವುದೊಂದೇ ಭಾಜಪದ ಭರ್ಜರಿ ಪರಿಣತಿ ! ಕಾನೂನು ಎಲ್ಲರಿಗೂ ಸಮಾನ, ಆದರೆ ಸ್ಮೃತಿ ಇರಾನಿ ಬಿ.ಕಾಂ. ಪದವೀಧರೆ ಹೌದೋ ಅಲ್ಲವೋ ಎಂದು ತೀರ್ಮಾನಿಸಲು ಐದು ವರ್ಷ ಬೇಕು. ಮಾತಾಡಿದರೆ ದೇಶದ್ರೋಹದ ಆಪಾದನೆ ಕಾದಿರುತ್ತದೆ. ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಿಗೆ ಮೂರು ದಿನ






■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೮೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸತತವಾಗಿ ನೀರು, ವಿದ್ಯುತ್ ಮತ್ತು ಅಡಿಗೆಶಾಲೆ ಬಂದಾಗಿತ್ತು. ನಮ್ಮ ದೇಶದಲ್ಲಿ ಸಂವಿಧಾನಾತ್ಮಕ ಆಳ್ವಿಕೆ ಮತ್ತು ವರ್ತನೆ ಇಲ್ಲವಾಗುತ್ತಿದೆ, ಆದರೆ ಅಂಬೇಡ್ಕರ್ ಪೂಜೆ ಭರ್ಜರಿಯಾಗಿ ನಡೆಯುತ್ತದೆ.

ಅಂಬೇಡ್ಕರ್ ಅವರು ಮುಸಲ್ಮಾನರನ್ನು ಮತ್ತು ಕಮ್ಯುನಿಸ್ಟರನ್ನು ಬಹಳ ಗುಮಾನಿಯಿಂದ ನೋಡುತ್ತಿದ್ದರೆಂದು ಮೋಹನ ಭಾಗವತ್ ಸಂಶೋಧನೆ ನಡೆಸಿದ್ದಾರೆ. ಹಲವು ಹೋರಾಟಗಳಲ್ಲಿ ಅಂಬೇಡ್ಕರರು ಕಮ್ಯುನಿಸ್ಟರನ್ನು ತೊಡಗಿಸಿಕೊಂಡಿದ್ದರು. "ನಾವೆಲ್ಲಾ ಒಟ್ಟಾಗಿ ಹೋರಾಡಿ ದೇಶವನ್ನು ಕ್ರಾಂತಿಕಾರಕವಾಗಿ ಬದಲಿಸಬೇಕು" ಎಂದು ಅಂಬೇಡ್ಕರ್ ೧೯೩೮ರ ಜನವರಿ ೧೪ರಂದು ಮುಂಬೈನಲ್ಲಿ ಕಮ್ಯುನಿಸ್ಟರೂ ಭಾಗವಹಿಸಿದ್ದ ಸಾರ್ವಜನಿಕ ಸಭೆಯಲ್ಲಿ ತಿಳಿಸಿದ್ದರು. ಅವರು ಸಂವಿಧಾನ ರಚನಾ ಸಭೆಗೆ ೧೯೪೬ರಲ್ಲಿ ಚುನಾಯಿತರಾದದ್ದು ಬಂಗಾಳದಿಂದ. ಅದೂ ಮುಸ್ಲಿಂ ಲೀಗಿನ ಬೆಂಬಲದಿಂದ. ಜೋಗೇಂದ್ರನಾಥ ಮಂಡಲ್ ಮೊದಲೇ ಚುನಾಯಿತರಾಗಿದ್ದರು, ಅವರು ರಾಜಿನಾಮೆ ನೀಡಿ ಅಂಬೇಡ್ಕರರ ಚುನಾವಣೆಗೆ ಹಾದಿ ಮಾಡಿಕೊಟ್ಟರು. ಮುಸ್ಲಿಮರನ್ನು ದ್ವೇಷಿಸುತ್ತಾ ಮುಸ್ಲಿಂ ಲೀಗಿನ ಬೆಂಬಲ ಪಡೆಯಲು ಡಾ॥ ಅಂಬೇಡ್ಕರ್ ಭಾಜಪ ಮುತ್ಸದ್ದಿಗಳ ಛಾಯೆಯನ್ನು ಹೊಂದಿರಲಿಲ್ಲ ಎಂಬ ತಿಳಿವಳಿಕೆ ಇರಲಿ.

**ಅಭಿನಂದನೆ ....**

ಕರ್ನಾಟಕ ಸಾಹಿತ್ಯ ಅಕಾಡೆಮಿಯ ೨೦೧೫ನೇ ವರ್ಷದ ಪುಸ್ತಕ ಬಹುಮಾನ ಪ್ರಶಸ್ತಿಯು ನವಕರ್ನಾಟಕ ಪ್ರಕಾಶನದ ಮೂರು ಕೃತಿಗಳಿಗೆ ಲಭಿಸಿದೆ.

ಶ್ರೀ ಕುಪ್ಪೆ ನಾಗರಾಜ ರಚಿಸಿರುವ 'ಅಲೆಮಾರಿಯ ಅಂತರಂಗ' ಮತ್ತು ಶ್ರೀ ಟಿ. ಎಸ್. ಗೋಪಾಲ ಅವರ 'ಕಾಡು ಕಲಿಸುವ ಪಾಠ' ಕೃತಿಗಳಿಗೆ ಪುಸ್ತಕ ಬಹುಮಾನ ಹಾಗೂ ಎನ್. ಎಲ್. ಆನಂದ್ ಮತ್ತು ಗುಂಡಪ್ಪ ದೇವಿಕೇರಿ ಅವರ 'ನೆಲದೊಡಲ ಚಿಗುರು' (ನಾಡೋಜ ಡಾ॥ ಎಲ್. ನಾರಾಯಣ ರೆಡ್ಡಿ ಅವರ ಬದುಕು, ಚಿಂತನೆ) ಕೃತಿಗೆ ಸಿಂಪಿ ಲಿಂಗಣ್ಣ ದತ್ತಿನಿಧಿ ಪ್ರಶಸ್ತಿಯು ಲಭಿಸಿದೆ.

ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದಿಂದ ಹಾರ್ದಿಕ ಅಭಿನಂದನೆಗಳು.

## ಕೇರಳ ದೇವಾಲಯ ದುರಂತ – ಇನ್ನೂ ಕಲಿಯಲಿಲ್ಲ ಪಾಠ

ದೇವರ ಹೆಸರಿನಲ್ಲಿ ಏನೇ ಮಾಡಿದರೂ ನ್ಯಾಯಾಲಯಗಳಿಗು ಕೂಡ ಏನೂ ಮಾಡಲಾಗುವುದಿಲ್ಲ. ಹಾಗಾಗಿ ದೇವರು ಕಾಪಾಡಿದರೆ ಉಂಟು ಇಲ್ಲದಿದ್ದರೆ ಇಲ್ಲ. ಕೇರಳ ರಾಜ್ಯದ ಕೊಲ್ಲಮ್ ಎಂಬ ದೇವಾಲಯದ ಸಮಾರಂಭದ ಸಂದರ್ಭದಲ್ಲಿ ಕ್ಷಣ ಮಾತ್ರದಲ್ಲಿ ನಡೆದುಹೋದ ದುರಂತವೇ ಅದಕ್ಕೆ ಸಾಕ್ಷಿ. ಸುಮಾರು ೧೨೦ ಜೀವಗಳನ್ನು ಆಹುತಿ ತೆಗೆದುಕೊಂಡ ಈ ದುರ್ಘಟನೆಯನ್ನು ಅಧಿಕಾರಿಗಳು, ಪೊಲೀಸರು ಕಾನೂನು ಪರಿಪಾಲನೆ ಮಾಡಿದ್ದಲ್ಲಿ, ಸೂಕ್ತಕ್ರಮ ಕೈಗೊಂಡಿದ್ದಲ್ಲಿ ತಪ್ಪಿಸಬಹುದಾಗಿತ್ತು. ದೇವರ ಮೇಲೆ ಭಾರ ಹಾಕಿ ಅಲಕ್ಷ್ಯ ಮಾಡಿದ್ದೇ ದುರಂತಕ್ಕೆ ಕಾರಣ. ದುರಂತದಲ್ಲಿ ಸಾವನ್ನಪ್ಪಿದವರಿಗೆ 'ಹೊಸತು' ನಮನ ಸಲ್ಲಿಸುತ್ತದೆ. ಕುಟುಂಬದವರಿಗೆ ಸಂತಾಪ ಸೂಚಿಸುತ್ತದೆ. ಇಂಥ ದುರ್ಘಟನೆಗಳು, ಅದರಲ್ಲೂ ದೇವರ ಉತ್ಸವದ ಸಮಯದಲ್ಲಿ ನಡೆಯುವ ವಿಶಿಷ್ಟವಾದ ಕಾರ್ಯಕ್ರಮಗಳ ಸಂದರ್ಭದಲ್ಲಿ ಸಂಭವಿಸುವುದು ಅಪರೂಪವೇನಲ್ಲ. ಘಟನೆ ನಡೆದ ಕೆಲ ದಿನಗಳಾದ ಮೇಲೆ ಅದನ್ನು ಮರೆತುಹೋಗುತ್ತಾರೆ ಜನ. ಮತ್ತೊಂದು ಸಂಭವಿಸಿದಾಗಲೇ ಅದು ನೆನಪಾಗುವುದು. ಎಲ್ಲವೂ ದೇವರ ಮಹಿಮೆಯೋ ಏನೋ! ಪ್ರತಿಯೊಂದು ಕಾಯಿದೆಯನ್ನೂ ಉಲ್ಲಂಘಿಸುವಾಗ ಕೂಡ ದೈವದ ಮೇಲೆ ಭಾರ ಹಾಕಿಯೇ ಮುಂದುವರಿಯುವುದು ಪರಿಪಾಠವಾಗಿಬಿಟ್ಟಿದೆ ನಮ್ಮ ಜನಕ್ಕೆ. ಹಾಗಾಗಿಯೇ ಇಲ್ಲಿ ಕಾನೂನಿಗಾಗಲೀ, ಮನುಷ್ಯ ಜೀವಕ್ಕಾಗಲಿ ಬೆಲೆಯೇ ಇಲ್ಲವೇನೋ ಎಂದು ಒಮ್ಮೊಮ್ಮೆ ಎನಿಸುತ್ತದೆ.

ದುರ್ಘಟನೆಯೋ ಅನಾಹುತವೋ ಸಂಭವಿಸಿದಾಗ ಎಚ್ಚೆತ್ತುಕೊಳ್ಳುವ ಸರಕಾರ ಮತ್ತು ಅಧಿಕಾರಿಗಳು ಯಾರನ್ನೋ ಬಲಿಪಶು ಮಾಡಿ ಹೊಣೆಗಾರಿಕೆಯನ್ನು ಕೊಡವಿಕೊಳ್ಳುವುದು ಜಾಯಮಾನವಾಗಿಬಿಟ್ಟಿದೆ. ಕೇರಳದ ಕೊಲ್ಲಮ್ ದುರಂತದಲ್ಲೂ ಆಗಿರುವುದು ಹಾಗೆಯೆ. ಅಕ್ರಮವಾಗಿ ದಾಸ್ತಾನಿರಿಸಿದ್ದ ಸಿಡಿಮದ್ದುಗಳ (ಪಟಾಕಿಗಳ) ವಿಚಾರ ಪೊಲೀಸರಿಗೆ ತಿಳಿದಿತ್ತು. ದೇವಾಲಯದ ಸಮೀಪದಲ್ಲೇ ಇದ್ದ ಮನೆಯೊಂದರಲ್ಲಿ ಅದನ್ನು ಶೇಖರಿಸಿಡಲಾಗಿತ್ತು. ಮತ್ತೆ ಈ ದೇವಾಲಯದ ಉತ್ಸವದ ಸಮಯದಲ್ಲಿ ಭಕ್ತಿಗಿಂತ ಭಕ್ತರಿಗೆ ಅಲ್ಲಿ ನಡೆಯುವ ಬಾಣ ಬಿರುಸುಗಳ ಪೈಪೋಟಿ, ಪಟಾಕಿಗಳ ಆರ್ಭಟವೇ ಮುಖ್ಯವೇನೋ. ಕೇರಳದಲ್ಲಿ ಇಂಥ ಆಚರಣೆಗಳು ಹೆಚ್ಚು. ಹಾಗೆಂದ ಮಾತ್ರಕ್ಕೆ ಇತರ ಕಡೆಗಳಲ್ಲಿ ಇಲ್ಲವೆಂದಲ್ಲ. ಪ್ರಾಯಶಃ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸಲು ಇಂಥ ಅಪಾಯಕಾರಿ ಪೈಪೋಟಿಗಳನ್ನು ನಡೆಸುತ್ತಾರೋ ಏನೋ, ಅದು ಪುರೋಹಿತಶಾಹಿಗಳಿಗೇ ಗೊತ್ತು.

ಕೇರಳದ ಕೊಲ್ಲಮ್ ದೇವಾಲಯ ದುರಂತವಾದ ಮೇಲೆ ಚುನಾವಣೆಯ ಭರಾಟೆ ಬೇರೆ ಇರುವುದರಿಂದ ಪ್ರಧಾನಿ ನರೇಂದ್ರ ಮೋದಿ, ಕಾಂಗ್ರೆಸ್ ನಾಯಕ ರಾಹುಲ್ ಗಾಂಧಿ ಖುದ್ದಾಗಿ ಸ್ಥಳಕ್ಕೆ ಭೇಟಿ ನೀಡಿ ಸಾಂತ್ವನ ಹೇಳಿ ವಾಪಸ್ಸಾದರು. ಎಲ್ಲವೂ ಮತಗಳಿಸುವ ಲೆಕ್ಕಾಚಾರವಾದಾಗ ಹಾಗಾಗುವುದು ಸಹಜ. ಕೇರಳದ ಮುಖ್ಯಮಂತ್ರಿ ಒಡನೆಯೇ ಇಂಥ ಅಪಾಯಕಾರಿ ಆಚರಣೆಗಳನ್ನು ನಿಷೇಧಿಸುವ ಗೋಜಿಗೆ ಹೋಗಲಿಲ್ಲ. ದೇವಾಲಯದ ಧರ್ಮದರ್ಶಿಗಳನ್ನೇನೋ ಬಂಧಿಸಲಾಗಿದೆ. ಕೆಲವು ಅಧಿಕಾರಿಗಳ ವರ್ಗಾವಣೆ ಆದಿತೇನೊ. ಜಿಲ್ಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ಫೈರ್ ವರ್ಕ್ಸ್ ಕಾರ್ಯಕ್ರಮ ನಡೆಸಿದರೆಂಬುದು ಗೊತ್ತಾಗಿದೆ. ದೊಡ್ಡ ಪ್ರಮಾಣದಲ್ಲಿ ಸ್ಫೋಟಕಗಳ ದಾಸ್ತಾನೇ ಇಂಥ ದೊಡ್ಡ ಅನಾಹುತಕ್ಕೆ ಕಾರಣ. ಕಾನೂನು ಪರಿಪಾಲನೆ ಮಾಡುವುದು ಸಾಧ್ಯವಿಲ್ಲದಾಗ ಇಂಥ ಆಚರಣೆಗಳನ್ನು ನಿಷೇಧಿಸ ಬೇಕಾದ್ದು ಸೂಕ್ತ ಮಾರ್ಗ. ಆದರೆ ನಂಬಿಕೆ, ಹಿಂದಿನಿಂದ ರೂಢಿಯಲ್ಲಿರುವುದು, ಭಕ್ತ ಸಮೂಹದ ಇಚ್ಛೆ ಹೆಸರಿನಲ್ಲಿ ಅವಕಾಶ ನೀಡುವುದೇ ದುರಂತಕ್ಕೆ ಕಾರಣ. ಈ ಕೊಲ್ಲಮ್ ಘಟನೆ ಸಂಭವಿಸಿದ ನಂತರ ಕೇರಳ ಹೈಕೋರ್ಟ್ ನೀಡಿರುವ ಆದೇಶಗಳೂ ಕೂಡ ವಿಚಿತ್ರವಾಗಿವೆ. ಸೂಕ್ತ ಸುರಕ್ಷತಾ ಕ್ರಮಗಳಿಗೆ ಒಳಪಡಿಸಿ ಇಂಥ ಆಚರಣೆಗಳಿಗೆ ಅವಕಾಶ ನೀಡಬಹುದು ಎಂದು ನ್ಯಾಯಾಲಯ ಹೇಳಿದೆ. ಏಕೆ ನೇರವಾಗಿ ನಿಷೇಧಿಸಲಿಲ್ಲವೋ, ಗೊತ್ತಾಗುತ್ತಿಲ್ಲ. ಅಂದರೆ, ನ್ಯಾಯಾಲಯಗಳೂ ಕೂಡ ಸೂಕ್ತ ನಿರ್ಧಾರ ತೆಗೆದುಕೊಳ್ಳಲು ಹಿಂಜರಿಯುತ್ತವೆ ಎಂದಾಯಿತು. ನಮ್ಮ ರಾಜ್ಯದಲ್ಲಿ ಮಡೆಸ್ನಾನದಂಥ ಕೆಟ್ಟ ಆಚರಣೆಯ ವಿಷಯದಲ್ಲೂ ಹೀಗೇ ಆಗಿರುವುದನ್ನು ನೋಡಿದ್ದೇವೆ. ಕೇರಳದ ಪ್ರಖ್ಯಾತ ಶಬರಿಮಲೈ ಅಯ್ಯಪ್ಪ ದೇವಾಲಯದಲ್ಲಿ ಪ್ರತಿವರ್ಷ ಜನವರಿ ೧೪ರಂದು ದೂರದ ಬೆಟ್ಟದಲ್ಲಿ ಮಕರ ಜ್ಯೋತಿ ದರ್ಶನದ ನಂಬಿಕೆ ಭಕ್ತವೃಂದದಲ್ಲಿ. ದೇವಾಲಯದವರೂ ಆ ನಂಬಿಕೆಗೆ ಪ್ರೋತ್ಸಾಹ ನೀಡುತ್ತಿದ್ದರು. ಅದು ವಿಸ್ಮಯವೂ ಅಲ್ಲ, ದೈವದತ್ತವಾದ್ದೂ ಅಲ್ಲ, ಮಾನವನಿರ್ಮಿತ ಎನ್ನುವುದನ್ನು ಕೇರಳದ ವಿಚಾರವಾದಿಗಳು ಬಹಿರಂಗಪಡಿಸಿದರು. ಸರಿಯಾದ ಸಮಯಕ್ಕೆ ಅಲ್ಲಿ ದೇವಾಲಯದ ದೂತರು ಕರ್ಪೂರದ ರಾಶಿಗೆ ಇಲ್ಲವೇ ಹುಲ್ಲಿನ ಮೆದೆಗೆ ಬೆಂಕಿ ಹಚ್ಚುತ್ತಾರೆ ಎನ್ನುವುದು ಬಹಿರಂಗವಾದರೂ ಆಚರಣೆ ಮಾತ್ರ ಮುಂದುವರಿಯುತ್ತಲೇ ಇದೆ. ಹೇಗಿದೆ ನೋಡಿ ನಂಬಿಕೆ ಎನ್ನುವುದು. ಹಿಂದುತ್ವವಾದಿಗಳು ದೊಡ್ಡ ಬಂಡವಾಳವನ್ನಾಗಿಸಿಕೊಂಡಿರುವುದು ಇದನ್ನೇ.

***(ಈ ತಿಂಗಳು : ೩ನೇ ಪುಟದಿಂದ)***

ಪರೀಕ್ಷೆ ಕಾಲದಲ್ಲಿ ಒಳ್ಳೆ ಬಿಸಿಲು ಸುಡುತ್ತಿರುವಂತೆಯೇ ಪ್ರತಿವರ್ಷ ಪ್ರಶ್ನೆಪತ್ರಿಕೆ ಸೋರಿಕೆ, ಮೌಲ್ಯಮಾಪನಕ್ಕೆ ಅಧ್ಯಾಪಕರ ಬಹಿಷ್ಕಾರ ಇವು ಕೂಡ ಇರುತ್ತವೆ. ಸರಕಾರ ಏನೋ ಕಸರತ್ತು ಮಾಡಿ ಅವನ್ನು ಸುಧಾರಿಸುತ್ತದೆ. ಅಧ್ಯಾಪಕರಿಗೆ ಅಷ್ಟೋ ಇಷ್ಟೋ ನೀಡಿ ತಲೆ ಸವರಿಬಿಡುತ್ತಾರೆ. ಈ ವರ್ಷ ಮಾತ್ರ ವಿದ್ಯಾರ್ಥಿಗಳು ಪರದಾಡಬೇಕಾಯಿತು. ಎರಡೆರಡು ಸಲ ರಸಾಯನ ವಿಜ್ಞಾನದ ಪ್ರಶ್ನೆಗಳಿಗೆ ಉತ್ತರ ಬರೆಯಬೇಕಾಯಿತು. ಇದು ಒಂದು ಕಡೆಯಾದರೆ ಉತ್ತರ ಪತ್ರಿಕೆಗಳ ಮೌಲ್ಯಮಾಪಕರು ಮಾತ್ರ ಪಟ್ಟು ಹಿಡಿದು ಬೇಡಿಕೆ ಈಡೇರಿಸುವವರೆಗೆ ಏಳುವುದಿಲ್ಲ ಎಂದು ಕೂತಿದ್ದರು ಬಿಸಿಲಿನ ಬೇಗೆಯಲ್ಲಿ.

ಇದೆಲ್ಲ ಆಗುತ್ತಿರುವುದು ವಿದ್ಯಾರ್ಥಿಗಳ ಜೀವನದಲ್ಲಿ ಭವಿಷ್ಯವನ್ನು ನಿರ್ಧರಿಸುವಂಥದ್ದು ಎನ್ನುವ ಪದವಿ ಪೂರ್ವ ಶಿಕ್ಷಣದ ವ್ಯವಸ್ಥೆಯಲ್ಲಿ. ಅಂದರೆ ಎರಡನೇ ವರ್ಷದ ಪಿಯುಸಿ ಪರೀಕ್ಷೆಗಳ ಸಮಯದಲ್ಲಿ. ಗಣಿತ ವಿಜ್ಞಾನದ ಪ್ರಶ್ನೆಪತ್ರಿಕೆ ತುಂಬ ಕಠಿಣವಾಗಿತ್ತು, ಪಠ್ಯಕ್ರಮದ ಆಚೆ ಪ್ರಶ್ನೆಗಳನ್ನು ಕೇಳಿದ್ದರು ಎಂಬ ಕೂಗು ಒಂದು ಕಡೆಯಾದರೆ ರಸಾಯನ ವಿಜ್ಞಾನ ಪ್ರಶ್ನೆಪತ್ರಿಕೆ ಸೋರಿಕೆ ಇನ್ನೊಂದು ಕಡೆ. ಮತ್ತೆ ಪರೀಕ್ಷೆ ನಡೆಸಲು ವಿದ್ಯಾ ಸಚಿವರು, ಪಿಯುಸಿ ಬೋರ್ಡು ನಿರ್ಧರಿಸಿದಾಗ ವಿದ್ಯಾರ್ಥಿಗಳು ಪರೀಕ್ಷೆ ಬರೆಯುವುದಿಲ್ಲ ಎಂದು ಪ್ರತಿಭಟಿಸಿದರು. ಆದರೂ ಎರಡು ಸಲ ಪ್ರಶ್ನೆಪತ್ರಿಕೆ ಸೋರಿ, ಸಚಿವ ಕಿಮ್ಮನೆ ರತ್ನಾಕರ ಇವರ ಖುದ್ದು ಆಶ್ವಾಸನೆ ಮೇಲೆ ಪರೀಕ್ಷೆಯಂತೂ ಮುಗಿಯಿತು. ಸರಕಾರದವರು ಸೋರಿಕೆಗೆ ಕಾರಣರಾದ ಖಳರನ್ನು, ಅವರಲ್ಲೊಬ್ಬರು ಒಬ್ಬ ಸಚಿವರ ಆಪ್ತಕಾರ್ಯದರ್ಶಿ, ಮೂರು ದಿನ ಆದಮೇಲೆ ಬಂಧಿಸಿದ್ದಾರೆ. ಈಗ ಇನ್ನೂ ಹಲವು 'ಕಿಂಗ್ ಪಿನ್' ಗಳನ್ನು ಸೆರೆಹಿಡಿದಿದ್ದಾರೆ. ಪಿಯುಸಿ ಬೋರ್ಡಿನ ಕಾರ್ಯನಿರ್ವಾಹಕರನ್ನು ಮಾಮೂಲಿನಂತೆ ವರ್ಗಾವಣೆ ಮಾಡಿದ್ದಾರೆ. ಅಲ್ಲಿಗೆ ಈ ವರ್ಷಕ್ಕೆ ಪ್ರಕರಣ ಮುಗಿಯಿತು.

ಇನ್ನು ಮೌಲ್ಯಮಾಪಕರು ಬೇಡಿಕೆ ಈಡೇರುವವರೆಗೆ ಕದಲುವುದಿಲ್ಲ ಎಂದು ಬೆಂಗಳೂರಿನ ಫ್ರೀಡಂ ಪಾರ್ಕ್‌ನಲ್ಲಿ, ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಪ್ರತಿಭಟನೆ ನಡೆಸುತ್ತಿದ್ದರು. ಸರಕಾರ ತಿಣುಕಾಡುತ್ತಿತ್ತು, ಸಂಧಾನ ನಡೆಸಿದ್ದಾಯಿತು, 'ಎಸ್ಮಾ' ಬೆದರಿಕೆ ಹಾಕಿದ್ದಾಯಿತು. ಖಾಸಗಿ ಕಾಲೇಜುಗಳ ಅಧ್ಯಾಪಕರನ್ನು ಕರೆತರುವ ಪ್ರಯತ್ನವೂ ಆಯಿತು. ಆದರೂ ಹೋರಾಟಕ್ಕಿಳಿದಿದ್ದ ಅಧ್ಯಾಪಕರು ಗಟ್ಟಿಯಾಗಿ ಕುಳಿತಿದ್ದರು. ಈ ಸಲವಾದರೂ ಸರಕಾರ ಮುಂದೆ ಇಂಥ ಪ್ರತಿಭಟನೆಗಳು ನಡೆಯದ ಹಾಗೆ ಖಾಯಂ ಪರಿಹಾರ ಮಾರ್ಗ ಅನುಸರಿಸಲಿ. ಇದೀಗ ಎಸ್ಸೆಸ್ಸೆಲ್ಸಿ ಅಧ್ಯಾಪಕರೂ ಮೌಲ್ಯಮಾಪನ ನಡೆಸದಿರಲು ಮುಂದಾಗಿರುವುದು ನೋಡಿದರೆ ಸರಕಾರದ ವ್ಯವಸ್ಥೆಯಲ್ಲಿ ಏನೋ ಎಡವಟ್ಟಾಗಿರುವುದು ಗೊತ್ತಾಗುತ್ತದೆ. ನಾನಾ ಬಗೆಯ ತೊಂದರೆಗಳಲ್ಲಿ ಸಿಕ್ಕಿಬಿದ್ದಿರುವ ಸಿದ್ದು ಸರಕಾರ ಏನು ಮಾಡುತ್ತದೋ ನೋಡೋಣ.

✶ ✶ ✶

ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಸರಕಾರ ದಿನೇ ದಿನೇ ಕಂಗೆಡುತ್ತಿದೆ. ದಕ್ಷಿಣ ಭಾರತದಲ್ಲಿ ರಾಜ್ಯಭಾರ ನಡೆಸುತ್ತಿರುವ ಏಕೈಕ ರಾಜ್ಯ ಕರ್ನಾಟಕದಲ್ಲೂ ಕಾಂಗ್ರೆಸ್ ಅಧಿಕಾರ ಕಳೆದುಕೊಳ್ಳುವ ಸೂಚನೆ ದಟ್ಟವಾಗಿದೆ. ಕೈಗಡಿಯಾರದಿಂದ ಪ್ರಾರಂಭವಾದ ಭ್ರಷ್ಟಾಚಾರದ ಆಪಾದನೆ ಈಗ ಪುತ್ರ ವ್ಯಾಮೋಹಕ್ಕೂ ಚಾಚಿಕೊಂಡಿದೆ ಸಿದ್ದರಾಮಯ್ಯಗೆ. ಇದರ ಮೇಲೆ ರಾಜ್ಯದ ಹಲವು ಜಿಲ್ಲೆಗಳಲ್ಲಿ ಬರದ ಬರೆ ಬೇರೆ. ಸಚಿವ ಸಂಪುಟದ ಪುನಾರಚನೆ ಕಸರತ್ತು ಒಂದು ವರ್ಷದಿಂದ ನಡೆಯುತ್ತಲೇ ಇದೆ.

ಕಾಂಗ್ರೆಸ್ ಫಜೀತಿಯಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದರೆ ಭಾಜಪ ಇನ್ನೆರಡು ವರ್ಷಗಳ ನಂತರ ಅಧಿಕಾರಗ್ರಹಣ ಮಾಡುವ ಕನಸು ಕಾಣುತ್ತಿದೆ. ಕಾಂಗ್ರೆಸ್ ಸರಕಾರ ಇದೇ ರೀತಿ ಮುಂದುವರಿದರೆ ಅದೇನೂ ಕಷ್ಟಸಾಧ್ಯ ಎನಿಸುವುದಿಲ್ಲ. ಅದಕ್ಕಾಗಿಯೇ ಉಗಾದಿಯ ದಿನದಂದೇ ಯಡಿಯೂರಪ್ಪನವರನ್ನು ಪಟ್ಟಕ್ಕೆ ತರಲು ಭಾಜಪ ಹೈಕಮಾಂಡ್ ನಿರ್ಧರಿಸಿತು ಎಂದು ತೋರುತ್ತದೆ. ಭ್ರಷ್ಟಾಚಾರದ ಆಪಾದನೆ ಮೇಲೆ ಕಾರಾಗೃಹದ ಕಂಬಿ ಎಣಿಸಿದ ಮೊದಲ ಮುಖ್ಯಮಂತ್ರಿ ಯಡಿಯೂರಪ್ಪ. ಮೋದಿ-ಅಮಿತ್ ಷಾ ಬರುತ್ತಿದ್ದ ಹಾಗೆ ಅವರು ಭಾಜಪ ಕೇಂದ್ರ ಕಾರ್ಯಕಾರಿಣಿಯಲ್ಲಿ ಉಪಾಧ್ಯಕ್ಷ ಸ್ಥಾನ ಗಿಟ್ಟಿಸಿಕೊಂಡಿದ್ದವರು ಈಗ ಭಾಜಪ ಕರ್ನಾಟಕ ರಾಜ್ಯದ ಅಧ್ಯಕ್ಷರಾಗಿ ನೇಮಕಗೊಂಡಿದ್ದಾರೆ. ಅಂಬೇಡ್ಕರ್ ಜಯಂತಿಯ ದಿನ ಪಟ್ಟಾಭಿಷೇಕ ಮಾಡಿಕೊಂಡ ಯಡಿಯೂರಪ್ಪ ಈಗಾಗಲೇ ಮುಖ್ಯಮಂತ್ರಿಯ ಮಂದಹಾಸ ಬೀರುತ್ತಿದ್ದಾರೆ.

ಈಗಾಗಲೇ ಬರಪೀಡಿತ ಪ್ರದೇಶಗಳಿಗೆ ಪ್ರವಾಸ ಹೊರಟಿರುವ ಯಡಿಯೂರಪ್ಪಗೆ ಏರ್‌ಕಂಡೀಷನ್ಡ್ ಬಿಎಂಡಬ್ಲ್ಯು ಕಾರು ನೀಡಿದ್ದವರು ಸಕ್ಕರೆ ಕಾರ್ಖಾನೆ ಮಾಲಿಕ ನಿರಾನಿ ಎಂಬ ಭಾರಿ ಕುಳ. ಈ ಕಾರಿನ ಬೆಲೆ ಒಂದು ಕೋಟಿ ರೂಪಾಯಿ. ಈತ ರೈತರಿಗೆ ಕಬ್ಬು ಸರಬರಾಜಿಗಾಗಿ ನೀಡಬೇಕಾಗಿರುವ ಬಾಕಿ ೧೦೦ ಕೋಟಿ ರೂಪಾಯಿಗಳು. ಕಾರು ಉಪಯೋಗಿಸದಿರಲು ಯಡಿಯೂರಪ್ಪ ನಿರ್ಧರಿಸಿದ್ದಾರೆ. ಭಾಜಪ ಅಧ್ಯಕ್ಷಗಿರಿಗೇ ಇಂಥ ಉಡುಗೊರೆ ನೀಡುವವರು ಮುಖ್ಯಮಂತ್ರಿ ಗಾದಿ ಏರಿದರೆ ಇನ್ನು ಏನುತಾನೆ ಮಾಡಲಾರರು ? ಬಹುಶಃ ಇಂಥ ವಶೀಲಿ ಬಾಜಿಯವರಿಗೇ ಕಾಲ ಎಂದು ತೋರುತ್ತದೆ. 'ಸತ್ಯವಂತರಿಗೆ ಇದು ಕಾಲವಲ್ಲ' ಎನ್ನುವ ಪುರಂದರದಾಸರ ಕೀರ್ತನೆ ನೆನಪಿಗೆ ಬರುತ್ತದೆ.

✶ ✶ ✶

ಇಂಡಿಯನ್ ಪ್ರೀಮಿಯರ್ ಲೀಗ್ (ಐಪಿಎಲ್) ಎಂಬ ಕ್ರಿಕೆಟ್ ಜೂಜುಕಟ್ಟೆಯನ್ನು ಹುಟ್ಟುಹಾಕಿದ ಲಲಿತ ಮೋದಿ ಎನ್ನುವ ಚಾಣಾಕ್ಷ ಖದೀಮ ಈಗ ಲಂಡನ್ನಿನಲ್ಲಿ ಹಾಯಾಗಿದ್ದಾನೆ. ಒಂದು ಕಾಲದಲ್ಲಿ ಕಾರ್ಲ್ ಮಾರ್ಕ್ಸ್ ಅಂಥವರಿಗೆ ಆಶ್ರಯ ನೀಡಿದ್ದ ಬ್ರಿಟನ್ ಈಗ ಮೋದಿ, ಮಲ್ಯರಂಥವರಿಗೆ ಅಡಗುತಾಣವಾಗಿದೆ. ಕಾಲ ಬದಲಾಗಿದೆ ಅನ್ನೋಣ. ಹೆಚ್ಚು ಕಡಿಮೆ ಒಂದೂವರೆ ತಿಂಗಳು ಸಂಜೆ ತಂಪಾಗಿರುವಾಗ ನಡೆಯುವ ಈ ಪಂದ್ಯಗಳು ಉಳ್ಳವರಿಗೆ ಮನೋರಂಜನೆ ನೀಡುವುದಲ್ಲದೆ ಕೋಟಿಗಟ್ಟಲೆ ಹಣವನ್ನೂ ತರುತ್ತದೆ. ಕುದುರೆ ಜೂಜಿಗೂ ಇದಕ್ಕೂ ಹೆಚ್ಚು ವ್ಯತ್ಯಾಸವೇನಿಲ್ಲ. ಕುದುರೆ ಜೂಜು ಹೆಚ್ಚು ಎಂದರೆ ಐದು ನಿಮಿಷದಲ್ಲಿ ಸಾವಿರಾರು ಕೋಟಿ ರೂ.ಗಳನ್ನು ಗುಳುಂ ಮಾಡಿದರೆ ಕ್ರಿಕೆಟ್ ಪಂದ್ಯಗಳು ಎರಡು ಮೂರು ಗಂಟೆ ಎಳೆಯುತ್ತವೆ. ಮಳೆ ಇರಲಿ ಬಿಸಿಲಿರಲಿ, ಬರವಿರಲಿ, ಬಡಬಗ್ಗರ ಬವಣೆ ಇರಲಿ ಮೋಜಿನ ಕ್ರಿಕೆಟ್ ಮಾತ್ರ ಇರಬೇಕು. ನೆರೆಯ ಮಹಾರಾಷ್ಟ್ರದಲ್ಲಿ ಕುಡಿಯುವ ನೀರಿಗೂ ಪರದಾಟ ಇರುವಾಗ ಐಪಿಎಲ್ ಪಂದ್ಯಗಳಿಗೆ ಸಾವಿರಗಟ್ಟಲೆ ಲೀಟರುಗಳು ನೀರಿನ ಚೆಲ್ಲಾಟ. ವಾಂಕಡೆ ಸ್ಟೇಡಿಯಮ್ ಮೈದಾನ ಒಂದನ್ನು ಸಿದ್ಧಗೊಳಿಸುವುದಕ್ಕೆ ಸಾಕಷ್ಟು ನೀರಿನ ಪೋಲಾಯಿತು. ಕೋರ್ಟು ಮೆಟ್ಟಿಲೇರಿ ಮಹಾರಾಷ್ಟ್ರದಲ್ಲಿ ನಡೆಯಬೇಕಿದ್ದ ಹತ್ತಿಪ್ಪತ್ತು ಪಂದ್ಯಗಳು ಈಗ ಬೇರೆ ರಾಜ್ಯಗಳಿಗೆ ವರ್ಗಾವಣೆಯಾಗಿವೆ. ಬೆಂಗಳೂರಿನಲ್ಲಿ ಫೈನಲ್ ಪಂದ್ಯ ನಡೆಯುತ್ತದೆ. ಈಗಲೇ ಬೆಂಗಳೂರಿನಲ್ಲಿ ಅನೇಕ ಬಡಾವಣೆಗಳಲ್ಲಿ ನೀರಿಗೆ ಪರದಾಡುತ್ತಿದ್ದಾರೆ ಜನ. ಖಾಲಿ ಕೊಡಗಳ ಮೆರವಣಿಗೆಯೇ ಆಗುತ್ತಿದೆ ಪ್ರತಿನಿತ್ಯ. ಕೋಟಿ ಕೋಟಿ ವ್ಯವಹಾರದ ಕ್ರಿಕೆಟ್ ಉಳಿಸಲು ಬಡಜನರ ಪಾಡು ನಿರ್ಲಕ್ಷಿಸಲಾಗುತ್ತದೆ. ಮಹಾರಾಷ್ಟ್ರದ ಪರಿಸ್ಥಿತಿಗಿಂತ ನಮ್ಮ ರಾಜ್ಯದ ಪರಿಸ್ಥಿತಿ ಭಿನ್ನವಾಗೇನಿಲ್ಲ. ಹಾಗಿರುವಾಗ ಈ ಪಂದ್ಯಗಳೂ ನಮಗೇಕೆ ಬೇಕು. ನ್ಯಾಯಾಲಯ ಈ ಪಂದ್ಯಗಳನ್ನು ನಿಷೇಧಿಸಿದ್ದರೆ ಚೆನ್ನಾಗಿರುತ್ತಿತ್ತು. ಸರಕಾರ ಕಣ್ಣು ಮುಚ್ಚಿಕೊಂಡು ಐಪಿಎಲ್ ಪೋಷಿಸುತ್ತಿರುವುದೀಗ ಖಂಡನಾರ್ಹ. ಜನಸಾಮಾನ್ಯರಿಗೆ ಕುಡಿಯುವ ನೀರನ್ನು ಒದಗಿಸಲು ಅಸಮರ್ಥವಾಗಿರುವ ಸರಕಾರ ಕ್ರಿಕೆಟ್ಟಿಗೆ ನೀರು ಚೆಲ್ಲುತ್ತಿರುವುದೀಗ ಸೋಜಿಗದ ಸಂಗತಿ.

✶ ✶ ✶

ನಮ್ಮ ದೇಶದಲ್ಲಿ ವಿಚಿತ್ರಗಳಿಗೆ ಮತ್ತು ವೈರುಧ್ಯಗಳಿಗೆ ಎಂದೂ ಕೊರತೆಯಿಲ್ಲ. ಹೊಯ್ಸಳರು ನೊಣಂಬರನ್ನು ಯುದ್ಧದಲ್ಲಿ ಸೋಲಿಸಿ ಪತಾಕೆ ಹಾರಿಸುವುದು, ಏನೋ ದೊಡ್ಡ ಪರಾಕ್ರಮ ಸಾಧಿಸಿದಂತಾಯಿತೆಂದು ಸಂಭ್ರಮಿಸುವುದು, ಮತ್ತು ಇಂದು ನಾವು ಆ ಇತಿಹಾಸದ ಪುಟಗಳನ್ನು ತಿರುವಿಹಾಕುವಾಗ ಹೊಯ್ಸಳರನ್ನು ಶ್ಲಾಘಿಸಬೇಕೋ ಅಥವಾ ತೆಗಳಬೇಕೋ ಎಂದು ವಿಸ್ಮಿತರಾಗುವುದು ಅಂತಹ ಒಂದು ವಿಚಿತ್ರ. ಪುಲಿಕೇಶಿಯು ಹರ್ಷವರ್ಧನನನ್ನು ಸೋಲಿಸಿದ್ದು ಇದಕ್ಕಿಂತಲೂ ಸ್ವಲ್ಪ ದೊಡ್ಡ ಸಮಾಚಾರ, ಆದರೆ ಅದೂ ಒಂದು ವಿಚಿತ್ರವೇ. ಅಂದರೆ, ಆ ಹಿಂದಿನ ಶತಮಾನಗಳಲ್ಲಿ ನಾವೀಗ ಹೊಂದಿರುವ 'ರಾಷ್ಟ್ರ' ಎಂಬ ಸತ್ತ್ವವು ಇರಲಿಲ್ಲ. ವಸಾಹತುಶಾಹಿಯ ವಿರುದ್ಧದ ಹೋರಾಟದಲ್ಲಿ ಮತ್ತು ನಂತರ ನಾವು ಸ್ವತಂತ್ರ ಗಣರಾಜ್ಯವಾದ ಸಂದರ್ಭದಲ್ಲಿ ವಿಶಾಲವಾದ ರಾಷ್ಟ್ರವನ್ನು ನಾವು ಕಟ್ಟಿಕೊಂಡೆವು. ಅದರ ವಿಘಟನೆಯಾಗದಂತೆ ಸದಾ ಎಚ್ಚರದಿಂದಿರಬೇಕಾದ್ದು ನಮ್ಮ ಕರ್ತವ್ಯ. ಆದರೆ ಇಂದು ರಾಷ್ಟ್ರೀಯತೆಯ ಬಗ್ಗೆ ಹುಸಿ ಕೂಗುಗಳು ವ್ಯಾಕುಲವುಂಟುಮಾಡುವಂಥವು. ಬೆಂಗಳೂರಿನ ಒಬ್ಬ ನಾಗರಿಕರು ಇತ್ತೀಚೆಗೆ ಹೇಳುತ್ತಿದ್ದರು, "ನನ್ನ ಮಗಳ ಹೆಸರನ್ನು ಬದಲಾಯಿಸಿ

ಅವಳಿಗೆ ಭಾರತ ಮಾತಾಕೀ ಜೈ ಎಂಬ ಹೆಸರನ್ನಿಡುತ್ತೇನೆ," ಎಂದು. ಜೊತೆಯಲ್ಲಿದ್ದವರು "ಇದೇನು, ಕನ್ನಡದ ಮಗಳಿಗೆ 'ಕೀ' ಎಂದು ಹಿಂದಿ ಹೆಸರಿಡುತ್ತೀರಾ ?" ಎಂದರು. "ಕ್ರಾಂತಿ ಚಿರಾಯು (ಇನ್‌ಕ್ವಿಲಾಬ್ ಝಿಂದಾಬಾದ್) ಎಂದು ಕರೆಯುತ್ತೇನೆ ಬಿಡಿ" ಎಂದು ಮೊದಲಾತ ಇತಿಶ್ರೀ ಹಾಡಿದರು. ನಮ್ಮ ಸಂಪ್ರದಾಯಗಳಲ್ಲಿ ಆಡಂಬರದ ಪೂಜೆಗಿಂತಲೂ ಮಾನಸಿಕ ಪೂಜೆ ಹೆಚ್ಚು ಶ್ರೇಷ್ಠವೆಂದು ಹೇಳಲಾಗಿದೆ, ನಂಬಲಾಗಿದೆ. ಭಗವದ್ಗೀತೆಯಲ್ಲೂ ಅಂತಹ ಅರ್ಥ ಬರುವ ಪದ್ಯಗಳಿವೆ ಎನ್ನುತ್ತಾರೆ. ಆದರೆ ವಿಚಿತ್ರ ನೋಡಿ, ಹೇಗಿದೆ ? ಗಂಟಲು ಹರಿದುಕೊಂಡು ಜೋರಾಗಿ ಜೈ ಹೇಳದಿದ್ದರೆ ನಾವು ಅಪ್ಪಟ ದೇಶಭಕ್ತರಾಗಲು ಸಾಧ್ಯವಿಲ್ಲವಂತೆ. ಗೌರವವಿದ್ದು ಜೈ ಹೇಳುತ್ತೇವೋ, ತೋರಿಕೆಗೆ ಹೇಳುತ್ತೇವೋ, ಹೇಗೆ ತೀರ್ಮಾನಿಸುವುದು? ಏನೂ ಹೇಳದೆ ಮನಸಾ ಭಾರತ ಮತ್ತು ಭಾರತೀಯರ ಬಗ್ಗೆ ಗೌರವ ಮತ್ತು ಐಕ್ಯತೆಯ ಭಾವವನ್ನು ಅನುಭವಿಸಲು ನಾವು ಅಶಕ್ತರಾಗಿಹೋದೆವೆ ? ಹಾಗಿದ್ದರೆ ಅದು ವಿಚಿತ್ರವಲ್ಲ, ಬದಲಾಗಿ ಅದು ದುರಂತ. ಪ್ರದರ್ಶನ ಕಲೆಗಳಿಗೆ ಪ್ರೋತ್ಸಾಹ ನೀಡಬೇಕೆಂದು ಕೆಲವು "ಸಂಸ್ಕೃತಿ ಚಿಂತಕರು" ಹೇಳುತ್ತಾರೆ. ಅದರ ಅಂಗವಾಗಿ ದೇಶಭಕ್ತಿಯನ್ನು ಪ್ರದರ್ಶಿಸಲು ಘೋಷಣೆ ಕೂಗ ಬೇಕೆಂದು ಅನೌಪಚಾರಿಕ ಆಣತಿ ನೀಡಲಾಗುತ್ತಿದೆ ಎನ್ನುತ್ತಾರೆ, ಎಂತಹ ವಿಚಿತ್ರ.

ಇನ್ನೊಂದು ವಿಚಿತ್ರ (ಅಥವಾ ದುರಂತ) ಯೋಗಿ ರಾಮದೇವ ಬಾಬಾ ಎಂಬ ಪ್ರಾಣಿಯದು. 'ಪ್ರಾಣಿ' ಏಕೆಂದರೆ ಮನುಷ್ಯ ಮಾತ್ರರು ಹೇಳದಂತಹ ಕ್ರೌರ್ಯ ಮತ್ತು ಅಸಹನೆಯ ಬೀಭತ್ಸ ಮಾತುಗಳನ್ನು ಆತ ನಿರರ್ಗಳವಾಗಿ ಹೇಳುವ "ಕೆಚ್ಚೆದೆ" ಪ್ರದರ್ಶಿಸುತ್ತಾನೆ. ಆದರೂ ಆತನನ್ನು "ಯೋಗಿ" ಎಂದು ಕರೆಯುತ್ತೇವೆಂಬುದು ವಿಚಿತ್ರ. ಸ್ಥಿತಪ್ರಜ್ಞ ನಾಗಲು ಯೋಗಿಯು ಶಾಂತವಾಗಿ ಹೆಜ್ಜೆ ಹಾಕುತ್ತಾನೆ ಎಂದು ಗೀತೆ ಹೇಳುತ್ತದೆ, ಆದರೆ ನಮ್ಮ ಯೋಗಿ ರಾಮದೇವನು ಕತ್ತಿ ಝಳಪಿಸುತ್ತಾನೆ. ಅಂತಹ ಅಮಾನವೀಯ ವಿಕ್ಷಿಪ್ತತೆ ಆತನದು. ಭಾರತಮಾತಾ ಕೀ ಜೈ ಎಂದು ಘೋಷಿಸದಿರುವ ಲಕ್ಷಾಂತರ ಜನರ ತಲೆ ಕಡಿದುಹಾಕುತ್ತಿದ್ದರಂತೆ, ಆದರೆ ಸಂವಿಧಾನ ಮತ್ತು ಪೋಲೀಸರು ಅದಕ್ಕೆ ಅಡ್ಡಗಾಲು ಹಾಕಿದ್ದಾರಂತೆ ! ಹಾಗೆಂದು ಅವರು "ಯೋಗಾತ್ಮಕ" ಹೇಳಿಕೆ ನೀಡಿದ್ದಾರೆ. ಕಪಾಲಭಾತಿ ಚೆನ್ನಾಗಿ ಮಾಡಿದರೂ ತಲೆ ನೆಟ್ಟಗಾಗದಿರಬಹುದು ಎಂಬುದಕ್ಕೆ ಇದೊಂದು ನಿದರ್ಶನ. ಭಾಜಪದ ಸರ್ವಾಧ್ಯಕ್ಷ ಅಮಿತ್ ಷಾ ಅವರ ಗಮನವನ್ನು ಈ ಹೇಳಿಕೆಯತ್ತ ಸೆಳೆದಾಗ ಅವರೆಂದರು, "ಅವರಿಗೆ ಅಭಿವ್ಯಕ್ತಿ ಸ್ವಾತಂತ್ರ್ಯ ಕೂಡದೇನು ?" ಎಂದು. ಗುಜರಾತಿನ ಗೃಹಮಂತ್ರಿ ಆಗಿ ಹಲವು ಆಪಾದನೆಗಳನ್ನು ಹೊತ್ತಿದ್ದ ಈ ಮಾನ್ಯರು ತಮ್ಮ ಪಕ್ಷದ ವರ್ಚಸ್ಸಿನಿಂದಾಗಿ ಇತ್ತೀಚೆಗೆ "ಅಪರಾಧಿಯಲ್ಲ" ಎಂಬ ತೀರ್ಪು ಪಡೆದಿದ್ದಾರೆ. "ಲಕ್ಷ ಜನರನ್ನು ಕೊಲ್ಲುತ್ತೇನೆ" ಎಂಬುದಕ್ಕೂ "ಮೋದಿ ಸರ್ಕಾರವು ಪ್ರಜಾಪ್ರಭುತ್ವವನ್ನು ಹಾಳುಮಾಡುತ್ತಿದೆ" ಎಂಬುದಕ್ಕೂ ವ್ಯತ್ಯಾಸವನ್ನು ಅರಿತುಕೊಳ್ಳಲಾರದಷ್ಟು ಅವರು ಮೂಢರಲ್ಲ. ಬಾಬಾ ರಾಮದೇವ ಮತ್ತು ಮುತ್ಸದ್ದಿ ಅಮಿತ್ ಷಾ ನೀಡಿರುವ ಹೇಳಿಕೆಗಳು ಸಹ ವಿಚಿತ್ರ ಎಂಬ ಹಣೆಪಟ್ಟಿಗೆ ಯೋಗ್ಯವಾಗಿವೆ. ರಾಮದೇವ್ ಅಲ್ಲದೆ "ಮಿಯಾ ಮುಲಾಯಂ" ಲಕ್ಷ ತಲೆಗಳನ್ನುರುಳಿಸುವ ಮಾತನ್ನೇನಾದರೂ ಆಡಿದ್ದರೆ ಮಾನ್ಯ ಅಮಿತ್ ಷಾ ಆಗಲೂ ಇದನ್ನೇ ಹೇಳುತ್ತಿದ್ದರೆ ? ಅಯ್ಯೋ ವಿಚಿತ್ರವೆ !

✶ ✶ ✶

ಜಗದೀಶ ಶೆಟ್ಟರ್ ಕೆಲಕಾಲ ನಮ್ಮ ರಾಜ್ಯದ ಮುಖ್ಯಮಂತ್ರಿಯಾಗಿದ್ದವರು. ಆ ಸ್ಥಾನದಲ್ಲಿದ್ದು ಅವರು ಸಾಧಿಸಿದ್ದೇನೆಂದು ಬಹುಶಃ ಅವರಿಗೂ ತಿಳಿಯದು. ಆದರೆ ರಾಜಕೀಯದಲ್ಲಿ ಯಾವಾಗ ಏನು ಹೇಳಬೇಕೆಂದು ಬೇರೆಯವರಿಗೂ ಮಾರ್ಗದರ್ಶಿ ಆಗಬಲ್ಲವರೆನಿಸುತ್ತದೆ. ಇತ್ತೀಚೆಗೆ ಅವರು ರಾಜ್ಯದ ವಿಧಾನಸಭೆಯಲ್ಲಿ ಯಥಾರ್ಥವಾದ ಸಂಗತಿ ಯೊಂದನ್ನು ವಿವರಿಸಿ ಹೇಳಿದರು. ಮುಖ್ಯಮಂತ್ರಿ ಸಿದ್ದರಾಮಯ್ಯನವರಿಗೆ ತಿಳಿಹೇಳಲು ಅವರು ಸತ್ಯವನ್ನು ಬಿಚ್ಚಿಟ್ಟದ್ದು ಹೀಗೆ : "ನಿಮ್ಮ ಪಕ್ಷಕ್ಕೆ ಸಾಕಷ್ಟು ಬಹುಮತವಿಲ್ಲ. ಅದನ್ನು ಮರೆಯಬೇಡಿ. ನಿಮ್ಮ ವಿರುದ್ಧವಾಗಿ ನಾವೂ ಸೇರಿದಂತೆ ಬೇರೆಲ್ಲ ಪಕ್ಷಗಳೂ ಒಂದಾದರೆ ನೀವು ಚಿಂದಿಯಾಗುತ್ತೀರಿ, ತೂರಿ ಹೋಗುತ್ತೀರಿ, ಜೋಕೆ." ನಮ್ಮ ರಾಜ್ಯದಲ್ಲಿ ಭಾಜಪ ಬಿಟ್ಟರೆ ಬೇರೆಲ್ಲ ಪಕ್ಷಗಳು ಯಾವುವು ? ದೇವೇಗೌಡರ ಪಕ್ಷ , ಮೂರೋ ನಾಲ್ಕೋ ಎಡಪಕ್ಷಗಳು, ಬಹುಜನ ಸಮಾಜ ಪಕ್ಷ , ಮತ್ತು ಪುಟ್ಟಣ್ಣಯ್ಯನವರ ಪಕ್ಷ . ದೇವೇಗೌಡರ ಪಕ್ಷ ಬಹಳ ಉದಾರವಾದಿ ಪಕ್ಷವಾದ್ದರಿಂದ ಅದು ಅಧಿಕಾರಕ್ಕೆ ಬರುವ ಸಾಧ್ಯತೆ ಇರುವ ಬೇರೆ ಯಾವ ಪಕ್ಷಗಳ ಜೊತೆ ಬೇಕಾದರೂ ಸೇರಲು ಸಿದ್ಧವೆಂಬುದು ಸಾಬೀತಾಗಿದೆ. ಮಿಕ್ಕ ಯಾವ ಪಕ್ಷ ಶೆಟ್ಟರ್ ಅವರ ಪಕ್ಷದ ಜೊತೆ ಹೋಗಲು ಸಾಧ್ಯ ? ಆದ್ದರಿಂದ ಅವರ ಪಕ್ಷವು ಏಕಾಂಗಿಯಾಗಿ "ಹೋರಾಡಿ" ಅಧಿಕಾರಕ್ಕೆ ಬರಬೇಕು. ಜೈಲಿಗೆ ಹೋಗಿಬಂದಿರುವ ನಾಯಕರ ನಾಯಕತ್ವದಲ್ಲಿ ಅದು ಸಾಧ್ಯವೆಂದು ಬಗೆಯಲಾಗಿದೆ. ಮಾನ್ಯ ಶೆಟ್ಟರ್ ಅವರು ತಮ್ಮ ಯಥಾರ್ಥ ತಿಳುವಳಿಕೆಯನ್ನು ಅವರ ಮಹಾನ್ ನಾಯಕ ಶ್ರೀ. ಮೋದಿಯವರಿಗೆ ಮುಟ್ಟಿಸ ಬೇಕು. ಏಕೆಂದರೆ, ಚುನಾವಣಾ ಆಯೋಗವು ಘೋಷಿಸಿರುವಂತೆ ಅವರದು ಶೇ. ೩೧ರ ಪಕ್ಷದ ಅಧಿಕಾರ. ಚುನಾವಣೆಯಲ್ಲಿ ಆ ಪಕ್ಷದ ಮತಗಳು ಅಷ್ಟಕ್ಕೆ ಸೀಮಿತ. ಶೆಟ್ಟರ್ ಅವರು ಹೇಳುವಂತೆ ಬೇರೆಲ್ಲರೂ ಚುನಾವಣೆಯಲ್ಲಿ ಒಂದಾದರೆ ಭಾಜಪ ಪಾತಾಳಕ್ಕಿಳಿದುಹೋಗುತ್ತದೆ. ಏಕೆಂದರೆ ಈಗಿನ ೩೧ ನಾಳೆ ೫೧ ಆಗುವ ಸಾಧ್ಯತೆ ಬಹಳ ಕಡಿಮೆ. ಬಿಹಾರವು ಅದನ್ನು ತೋರಿಸಿಕೊಟ್ಟಿದೆ. ಪಶ್ಚಿಮ ಬಂಗಾಳದಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷವು ಸೋನಿಯಾ ಕಾಂಗ್ರೆಸ್ ಪಕ್ಷದ ಜೊತೆ ಸೇರಿರುವಾಗ ಎಲ್ಲ ಭಾಜಪೇತರ ಪಕ್ಷಗಳೂ ಜೊತೆಯಾಗಿ ಚುನಾವಣಾ ರಂಗಕ್ಕಿಳಿಯುವುದು ಅಸಾಧ್ಯವೇನಲ್ಲ. ದೇವೇಗೌಡರ ಪಕ್ಷವು ಅಡ್ಡಂಬುಡಿಕೆಯಾದರೂ ಬಾಧಕವಿರುವುದಿಲ್ಲ. ಆವರೆಗೆ ಶೆಟ್ಟರ್ ಅವರ ನಾಯಕ ಶ್ರೀ. ಮೋದಿ ಅವರ ಸರ್ಕಾರವನ್ನು ಶೇ. ೩೧ರ ಸರ್ಕಾರ ಎಂದು ಕರೆಯುವುದರಲ್ಲಿ ತಪ್ಪೇನೂ ಇಲ್ಲ.

✶ ✶ ✶

ಜಗಮೋಹನ್ ಜಮ್ಮು–ಕಾಶ್ಮೀರದ ರಾಜ್ಯಪಾಲ ನಾಗಿದ್ದಾಗ ಕಾಶ್ಮೀರದಲ್ಲಿ ಪಂಡಿತ ಸಮುದಾಯದ ದುಸ್ಥಿತಿಯನ್ನು ಜಗಜ್ಜಾಹೀರು ಮಾಡಿ ಅದನ್ನು ಅಂತರ ರಾಷ್ಟ್ರೀಯ ಪ್ರಶ್ನೆಯನ್ನಾಗಿ ಮಾಡ ಹೊರಟಿದ್ದುದು ಈಗ ಇತಿಹಾಸ. ಹಾಗೆ ಅಂತರರಾಷ್ಟ್ರೀಯ ಮನಸ್ಸನ್ನು ಹೊಕ್ಕರೆ ಪಂಡಿತರ ಮತ್ತು ಕಾಶ್ಮೀರದ ಪ್ರಶ್ನೆ ಸದಾಕಾಲಕ್ಕೂ ಪರಿಹಾರವಾಗುತ್ತದೆಂದು ಜಗಮೋಹನ್‌ನ ಲೆಕ್ಕಾಚಾರವಾಗಿತ್ತು. ಕಾಶ್ಮೀರದ ರಾಜಕೀಯ ಪರಿಸ್ಥಿತಿಯಲ್ಲಿ ಆಗಲೇ ಹೈರಾಣರಾಗಿದ್ದ ಪಂಡಿತರು ಜಗಮೋಹನ್‌ನ ಹೊಸ ರಾಜಕೀಯ ದಾಳಗಳಾದರು. ಅದರ ಪರಿಣಾಮವಾಗಿ ದೆಹಲಿ, ಬೆಂಗಳೂರು, ಮುಂತಾದೆಡೆಗಳಲ್ಲಿ ಪಂಡಿತರು ಕಡುಜೀವನ ನಡೆಸು ವಂತಾಗಿದೆ. ಭಾಜಪ ಮತ್ತು ಪಿಡಿಪಿ ಜಂಟಿಯಾಗಿ ಸರ್ಕಾರ ನಡೆಸುತ್ತಿರುವ ಇಂದಿನ ಸಂದರ್ಭದಲ್ಲಿ ಕೇಂದ್ರ ಮತ್ತು ಭಾಜಪ–ಪಿಡಿಪಿ ಸರ್ಕಾರಗಳು ಪಂಡಿತರ ಜೀವನವನ್ನು ಸುಧಾರಿಸುವ ಹೊಣೆಯನ್ನು ಹೊರಬೇಕು. ಕಾಶ್ಮೀರದಲ್ಲಿ ತೀವ್ರ ಭಿನ್ನಮತೀಯರಿದ್ದಾರೆ ಎಂಬುದನ್ನು ತಳ್ಳಿಹಾಕಲಾಗುವುದಿಲ್ಲ ಮತ್ತು ಅವರನ್ನು ಕಡೆಗಣಿಸಿ ಕಾಶ್ಮೀರದ ಪ್ರಶ್ನೆಯನ್ನು ಪರಿಹರಿಸಿ ಕೊಳ್ಳಲು ಸಹ ಆಗುವುದಿಲ್ಲ. ಅಂದರೆ, ಇದು ಬಹಳ ಸಂದಿಗ್ಧವಾದ ವಿಚಾರ. ಭಾವೋದ್ರೇಕದ ಪ್ರದರ್ಶನವು ಸನ್ನಿವೇಶವನ್ನು ತಿಳಿಯಾಗಿಸುವ ಬದಲು ಮತ್ತಷ್ಟು ಗೋಜಲುಗಳನ್ನು ಸೃಷ್ಟಿಸುತ್ತದೆ. ಹೀಗಿರುವಾಗ ಶ್ರೀನಗರದಲ್ಲಿರುವ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯನ್ನು ಕಾಶ್ಮೀರದಿಂದ ಜಮ್ಮುವಿಗೋ ಅಥವಾ ದೇಶದ ಬೇರಾವುದಾದರೂ ಜಾಗಕ್ಕೋ ಸ್ಥಳಾಂತರಿಸುವುದು ತಪ್ಪಾಗುತ್ತದೆ. ಕೇಂದ್ರ ಸರ್ಕಾರ ದಲ್ಲಿರುವ ಕೆಲವು ಮುತ್ಸದ್ದಿಗಳು ಸ್ಥಳಾಂತರಿಸಲು ಕಾತುರತೆ ತೋರುತ್ತಿದ್ದಾರೆಂಬ ಗುಮಾನಿ ಈಗಾಗಲೇ ವ್ಯಕ್ತವಾಗಿದೆ. ಒಂದು ಕ್ರಿಕೆಟ್ ಪಂದ್ಯದ ಫಲಿತಾಂಶವು ಎಷ್ಟೊಂದು ಉದ್ವಿಗ್ನತೆಯನ್ನು ಸೃಷ್ಟಿ ಮಾಡಿದೆ ಎಂಬುದನ್ನು ನೋಡಿದರೆ ಕ್ರಿಕೆಟ್ ಪಂದ್ಯಗಳು ಆಟವಾಗಿರುವುದರ ಬದಲು ರಾಷ್ಟ್ರಪ್ರಜ್ಞೆಯ ಕುರುಹು ಎಂಬಂತೆ ತಪ್ಪಾಗಿ ಅರ್ಥೈಸಲಾಗಿದೆ ಎಂಬುದು ತಿಳಿಯುತ್ತದೆ. ಭಾರತ ತಂಡವೆಂದು ಕರೆಯಲಾಗುವ ತಂಡವು ನಿಜಕ್ಕೂ ಬಿ.ಸಿ.ಸಿ.ಐ. ತಂಡ, ಅಷ್ಟೆ. ತಂಡದ ರಚನೆಯಲ್ಲಿ ಭಾರತ ಸರ್ಕಾರದ ಪಾತ್ರವೇನೂ ಇಲ್ಲ. ಈವರೆವಿಗೂ ಬಿಸಿಸಿಐ ಮಾಹಿತಿ ಹಕ್ಕು ಕಾಯಿದೆಯಡಿ ಬರಲು ಸಹ ನಿರಾಕರಿಸಿದೆ. ಆದ್ದರಿಂದ ಅದನ್ನು ಟೀಂ ಬಿಸಿಸಿಐ ಎನ್ನಬಹುದೇ ವಿನಾ ಟೀಂ ಇಂಡಿಯ ಎನ್ನುವಂತಿಲ್ಲ. ಕಾಶ್ಮೀರದ ಕೆಲವು ಭಾಗಗಳ ಜನರಿಗೆ ನಮ್ಮ ದೇಶದ ಬಗೆಗೆ ಒಲವಿಲ್ಲವೆಂಬುದು ಜಗತ್ತಿಗೇ ತಿಳಿದಿದೆ. ಆ ಜನರು ಹೇಗಾದರೂ ಸರಿ ಜ್ವಾಲೆಯನ್ನು ಆರಲು ಬಿಡಬಾರದೆಂದು ನಂಬಿರುವವರು. ಅವರು ಇಡೀ ಕಾಶ್ಮೀರದ ಜನತೆಯ ಪ್ರತಿನಿಧಿಗಳೇನೂ ಅಲ್ಲ.

*(೧೧ನೇ ಪುಟಕ್ಕೆ )*




### ಮತ್ತೆ ಆಗಬೇಕಿದೆ ಬಾರ್ಕೋಲು ಚಳುವಳಿ

⊠ 'ರೈತ ದೇಶದ ಬೆನ್ನೆಲುಬು, ಆಧಾರಸ್ತಂಭ', 'ರೈತ ಬಿತ್ತದಿದ್ದರೆ ಜಗವೆಲ್ಲ ಬಿಕ್ಕುವದು' ಎನ್ನುವ ಮಾತುಗಳನ್ನು ಕೇಳಿದಾಗ ನಮಗೆ ತಿಳಿಯುತ್ತದೆ ರೈತನ ಮಹತ್ವ ಎಷ್ಟು? ಅವನ ಅವಶ್ಯಕತೆ ಎಷ್ಟಿದೆ? ಎನ್ನುವುದು. ಅದಕ್ಕೆಂದೇ ಭಾರತದ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಯ ಅಭಿವೃದ್ಧಿಗಾಗಿ ಒತ್ತುಕೊಟ್ಟು ಭಾರತ ಕೃಷಿಯಾಧಾರಿತ ದೇಶ ಎಂಬುದನ್ನು ಪ್ರಪಂಚಕ್ಕೆ ತಿಳಿಸಿತು.

ಆದರೆ ಇಂದು ಕರ್ನಾಟಕದಲ್ಲಿ ರೈತರ ಮಾರಣಹೋಮ ನಡೆಯುತ್ತಿದೆ. ಶಾಶ್ವತ ನೀರಾವರಿ ಮತ್ತು ಕುಡಿಯುವ ನೀರಿಗಾಗಿ ಚಿಕ್ಕಬಳ್ಳಾಪುರ ಮತ್ತು ಕೋಲಾರದ ರೈತರು ಹೋರಾಟ ಮಾಡಿದರೆ ಈ ನಮ್ಮ ಘನ ಸರಕಾರ ಪ್ರತಿಭಟನಾ ನಿರತ ರೈತರ ಮೇಲೆ ಏಕಾಏಕಿ ಲಾಠಿ ಪ್ರಹಾರ ಮಾಡುವದರ ಮೂಲಕ ತನ್ನ ಅಹಂಕಾರವನ್ನು ಪ್ರದರ್ಶಿಸಿದೆ. ಬೆಂಗಳೂರಿನ ಮೇಕ್ರಿ ಸರ್ಕಲ್ಲಿನ ಬಳಿ ರಣರಂಗವನ್ನೇ ಸೃಷ್ಟಿಮಾಡಿ ಮುಗ್ಧ ರೈತರ ಮೇಲೆ ಹಲ್ಲೆ ಮಾಡಿ ರಕ್ತ ಬರುವಂತೆ ಥಳಿಸಿದ್ದಾರೆಂದರೆ ಈ ಸರಕಾರದ ದಮನಕಾರಿ ಪ್ರವೃತ್ತಿ ಎಷ್ಟಿದೆ ಎಂಬುದು ತಿಳಿಯುತ್ತದೆ.

ಇಡೀ ದೇಶಕ್ಕೆ ಅನ್ನ ನೀಡುವ ಅನ್ನದಾತನ ಸಮಸ್ಯೆಗಳನ್ನು ಬಗೆಹರಿಸುವದಕ್ಕಿಂತ ದೊಡ್ಡ ಕೆಲಸ ಈ ಸರಕಾರಕ್ಕೆ ಬೇರೆ ಏನಿತ್ತು? ಬೆಂಗಳೂರಿನ ಒಳಗೆ ಬಿಡುವುದಿಲ್ಲ ಎಂದು ಟ್ರ್ಯಾಕ್ಟರುಗಳನ್ನು ತಡೆದಿರಲ್ಲಾ, ಆ ಟ್ರ್ಯಾಕ್ಟರ್‌ಗಳು ಹೊಲದಲ್ಲಿ ಶಬ್ದ ಮಾಡದಿದ್ದರೆ ನೀವೆಲ್ಲ ಬದುಕಲಾಗುತ್ತಿತ್ತಾ? ಅಷ್ಟಕ್ಕೂ ಬೆಂಗಳೂರಿನ ಒಳಗೆ ಬರಬೇಡಿ, ವಿಧಾನ ಸೌಧಕ್ಕೆ ಬರಬೇಡಿ ಅಂತೀರಲ್ಲಾ, ಅವೆಲ್ಲಾ ನಿಮ್ಮ ಪಿತ್ರಾರ್ಜಿತ ಆಸ್ತೀನಾ? ನಮ್ಮ ದುಡ್ಡಿನಲ್ಲಿ ಕಟ್ಟಿಸಿಕೊಂಡ ಸೌಧಗಳು. "ಮೂಗು ಮಾಡಿದವರನ್ನು ಬಿಟ್ಟು ಮೂಗುತಿ ಮಾಡಿದವರನ್ನು ನೆನೆಸಿದರು" ಎನ್ನುವಂತೆ ನಾವು ಹಾಕಿದ ಭಿಕ್ಷೆಯಲ್ಲಿ ಬದುಕುವ ನೀವು ನಮ್ಮನ್ನೇ ತಡಿಯುವಿರಾ? ನಾವೇನು ನಿಮ್ಮ ಮನೆಯ ಆಸ್ತಿಯನ್ನು ಕೇಳಿದಿವೇನು? ದೇಶಕ್ಕೆ ಅನ್ನ ಹಾಕುವದಕ್ಕೆ ನೀರು ಕೇಳಿದೆವು. ಅದೇ ತಪ್ಪಾ? ರೈತರ ಮೇಲೆ ಕೈಮಾಡಿದ ಯಾವ ಸರಕಾರವೂ ಉಳಿದಿಲ್ಲಾ. ಕಬ್ಬಿನ ಬೆಂಬಲ ಬೆಲೆ – ಬಾಕಿ ಹಣ ನೀಡಲಾಗದ ನೀವು ರೈತರ ಬಗ್ಗೆ ಮಾತನಾಡಲು ಅನರ್ಹರು.

ಸುಮಾರು ವರ್ಷಗಳ ಹಿಂದೆ ರಾಜ್ಯದಲ್ಲಿ ರೈತರ ಹೋರಾಟವನ್ನು ಹತ್ತಿಕ್ಕುವದಕ್ಕೆ ಇದೇ ರೀತಿ ಸರಕಾರ ಲಾಠಿ ಚಾರ್ಜ್ ಮಾಡಿಸಿತ್ತು. ಆಗ ಪ್ರೊ॥ ನಂಜುಂಡಸ್ವಾಮಿ ರೈತ ಸಂಘದ ಅಧ್ಯಕ್ಷರಾಗಿದ್ದರು. ಲಾಠಿ ಚಾರ್ಜ್ ಮಾಡಿಸಿದ ಸರಕಾರದ ವಿರುದ್ಧ ಬಾರ್ಕೋಲ್ ಚಳುವಳಿಯನ್ನು ಪ್ರಾರಂಭಿಸಿದರು, ಬಂಡಿಗಳನ್ನೇರಿ ಬಾರ್ಕೋಲ್‌ಗಳನ್ನು ಹೆಗಲಿಗೆ ಹಾಕಿಕೊಂಡು ರೋಡಿಗಿಳಿದರು. ಯಾರು ತಡೆಯಲು ಬರುತ್ತಾರೋ ಅವರಿಗೆ ಬಾರ್ಕೋಲಿನಿಂದ ಹೊಡೆದಾಗ ಪೊಲೀಸರೆಲ್ಲ ದಿಕ್ಕಾಪಾಲಾದರು, ರೈತರ ಬಾರ್ಕೋಲಿನ ರುಚಿ ಉಂಡ ಪೊಲೀಸರು. ರೈತರ ಸಮೀಪ ಬರಲೇ ಇಲ್ಲ. ಅಂತಹ ಚಳುವಳಿ ಮತ್ತೆ ಈಗ ಆಗಬೇಕಿದೆ. ರೈತ ಹಗಲಿರುಳು ಚಳಿ, ಗಾಳಿ, ಮಳೆ, ಬಿಸಿಲುಗಳಿಗೆ ಮೈಯೊಡ್ಡಿ ರಕ್ತವನ್ನು ಬಸಿದು ತನ್ನ ಕೈ ಕೆಸರು ಮಾಡಿಕೊಂಡು ದೇಶದ ಬಾಯಿಗೆ ಮೊಸರನ್ನು ನೀಡುವ ನೇಗಿಲ ಯೋಗಿಗೆ ಸರಕಾರ ಈ ರೀತಿ ಅನ್ಯಾಯ ಮಾಡುತ್ತಿರುವುದು ಶೋಚನೀಯವಾದ ಸಂಗತಿಯಾಗಿದೆ.

ಸಿಂಧನೂರು **ಸುರೇಶ ಹಡಪದ ಬಳಗಾನೂರು**




### ಚ್ಯೂವಿಂಗ್

⊠ ಬಹಳಷ್ಟು ಸೀರಿಯಲ್ಲುಗಳನ್ನು ನೀಡುವ ನಿಮ್ಮ ಚಾನಲು ಹಿಂದೆ ಬಹಳ ಪ್ರಸಿದ್ಧಿ ಪಡೆದಿತ್ತು. ಆದರೆ ಬೇಸರವೆಂದರೆ ಹಿಂದೆ ಐವತ್ತು ಅರವತ್ತು ಎಪಿಸೋಡ್‌ಗಳಲ್ಲಿ ಮುಗಿಯುತ್ತಿತ್ತು, ಬಲ್ಲಿರಷ್ಟೆ.

ಈಗಿನ ಸೀರಿಯಲ್ಲುಗಳ ಕತೆ ಬೇರೆ, ಅದು ಮುಗಿಯುವುದೇ ಇಲ್ಲ ವರ್ಷಗಟ್ಟಳೆ ಆದರೂ, ಸೀರಿಯಲ್ಲಿನ ಕತೆ? ಒಂದು ಸಂಜೆಯ ಘಟನೆಯನ್ನು ಹದಿನೈದು ದಿನಗಳವರೆಗೆ ಚ್ಯೂವಿಂಗ್ ಗಮ್‌ನಂತೆ ಎಳೆಯುತ್ತಾರೆ. ಅಷ್ಟೇ ಅಲ್ಲ, ಹದಿನೈದು ದಿನಗಳ ನಂತರ ನಡೆಯುವ ಒಂದು ಕ್ಲೈಮಾಕ್ಸ್ ದೃಶ್ಯದ ತುಣುಕನ್ನು ಪ್ರತಿ ದಿನವೂ "ಮುಂದಿನ ಸಂಚಿಕೆಯಲ್ಲಿ" ಎಂದು ಸೀರಿಯಲ್ಲಿನ ಕೊನೆಯಲ್ಲಿ ತೋರಿಸುತ್ತಾರೆ.

ಇನ್ನು ಸೀರಿಯಲ್ಲುಗಳ ವಿಚಾರ. 'ಸಂತೆ' ಎಂದು ಅವರೇ ಬೆನ್ನುತಟ್ಟಿಕೊಂಡದ್ದು ತಪ್ಪಲ್ಲ. ಏಕೆಂದರೆ ಅದು ವರುಷಗಟ್ಟಲೆಯ ದಿನನಿತ್ಯದ ಸಂತೆ. ಸೀರಿಯಲ್ಲಿನ ಆರಂಭದ ಒಂದೂವರೆ ನಿಮಿಷ "ಕಳೆದ ಸಂಚಿಕೆಯಲ್ಲಿ" ಮುಗಿದು ಹೋಗುತ್ತದೆ. ಆಮೇಲೆ ಐದು ನಿಮಿಷದ ಸೀರಿಯಲ್ಲು, ಮತ್ತೆ ಮೂರು ನಿಮಿಷದ ಆ್ಯಡುಗಳು. ನಂತರದ ಐದು ನಿಮಿಷದ ಸೀರಿಯಲ್ಲು, ಮೂರು ನಿಮಿಷದ ಆ್ಯಡುಗಳು. ಮತ್ತೆ ಮೂರೇ ನಿಮಿಷದ ಸೀರಿಯಲ್ಲು, ಮತ್ತೆ ಒಂದು ನಿಮಿಷ "ಮುಂದಿನ ಸಂಚಿಕೆಯಲ್ಲಿ" ತುಣುಕು! ಹಾಗಾಗಿ ಒಟ್ಟಾರೆ ಅರ್ಧ ಗಂಟೆಯ ಸೀರಿಯಲ್ಲಿನಲ್ಲಿ ಸಿಗುವ ಆಮೆ ಗತಿಯ ಕತೆ ಕೇವಲ ಹದಿಮೂರು ನಿಮಿಷ ಮಾತ್ರ. ನನ್ನ ಮೊಮ್ಮಗ ಹೇಳ್ತಾನೆ, "ಆ್ಯಡುಗಳನ್ನು ಒಮ್ಮೆಲೇ ತೋರಿಸಿಬಿಡಲಿ ನಾನು ನೋಡ್ತೇನೆ. ಆಮೇಲೆ ಹದಿಮೂರು ನಿಮಿಷದ ಕತೆ ನೀವು ನೋಡಿ" ಅಂತಾನೆ!

ಮತ್ತೊಂದು ಮುಖ್ಯ ವಿಚಾರ ಸ್ವಾಮೀ. ಸೀರಿಯಲ್ಲಿಗೆ ಒಂದು ಸಮಯ ಮಿತಿ ಇರಬೇಕು. ನೋಡಿ ಸ್ವಾಮೀ ಸಿನೇಮಾ ಎರಡೂವರೆ ಗಂಟೆಯಲ್ಲಿ ಪೂರ್ತಿಯಾಗಿ ತೋರಿಸ್ತಾರಲ್ಲ. ಆದರೆ ಈ ಸೀರಿಯಲ್ಲುಗಳು ಎರಡು ಎರಡೂವರೆ ಸಾವಿರ ಕಂತುಗಳಾದರೆ ಒಂದು ಸಾವಿರಕ್ಕೂ ಮಿಕ್ಕಿ ಗಂಟೆಗಳಾಗುತ್ತವೆ. ಅಂದರೆ ಎಷ್ಟು ದಿನಗಳಾಗುತ್ತವೆ? ನೀವೇ ಲೆಕ್ಕ ಮಾಡಿ ಇಪ್ಪತ್ತ ನಾಲ್ಕು ಗಂಟೆಗೆ ಒಂದು ಪೂರ್ತಿ ದಿನ. ಆ ರೀತಿಯಾದರೆ ಒಂದು ಸಾವಿರ ಗಂಟೆಗೆ ಎಷ್ಟು ದಿನಗಳಾಗುತ್ತವೆ? ಇಷ್ಟೆಲ್ಲವನ್ನೂ ತೋರಿಸುವುದು ಒಂದು ಚಿಕ್ಕ ಚಿತ್ರಕತೆಯ ವಿಚಾರವಾಗಿ. ಹಾಗಿರುವಾಗ ಇದನ್ನು ಹೀಗೆ ಅರ್ಥ ಮಾಡಿಕೊಂಡರೆ ಪ್ರೇಕ್ಷಕ ನೋಡಲಿಕ್ಕೆ ಹೆದರಬಹುದು.

ಉಡುಪಿ **ರಾಘವೇಂದ್ರ**

### ಮೇ ದಿನ : ಕಾರ್ಮಿಕರ ಮುಂದಿರುವ ಸವಾಲುಗಳು

⊠ ೧೯೯೧ರ ನಂತರ ಜಾಗತೀಕರಣದ ನೀತಿಯಿಂದ ಕಾರ್ಮಿಕರ ಮೇಲೆ ಅತ್ಯಂತ ಗಂಭೀರವಾದ ದುಷ್ಪರಿಣಾಮ ಉಂಟಾಗಿದೆ. ಇಂತಹ ಜಾಗತೀಕರಣದ ನೀತಿಗಳ ವಿರುದ್ಧ ೧೬ ಬಾರಿ ಸಾರ್ವತ್ರಿಕ ಮುಷ್ಕರವನ್ನು ಕಾರ್ಮಿಕರು ದೇಶವ್ಯಾಪಿ ನಡೆಸಿದ್ದಾರೆ. ಅದೇ ರೀತಿಯಲ್ಲಿ ಹಲವಾರು ಬಾರಿ ಬ್ಯಾಂಕ್, ವಿಮಾ, ರೈಲ್ವೇ, ಪೋಸ್ಟಲ್, ಟೆಲಿಕಾಂ ಮುಂತಾದ ಉದ್ಯಮಗಳ ನೌಕರರೂ ಕೂಡ ದೀರ್ಘ ಕಾಲಿಕ ಹೋರಾಟಗಳನ್ನು ನಡೆಸಿದ್ದಾರೆ. ಇಷ್ಟೆಲ್ಲಾ ಹೋರಾಟಗಳು ನಡೆದರೂ ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಜಾಗತೀಕರಣದ ದುಷ್ಪರಿಣಾಮಗಳನ್ನು ನಿವಾರಿಸಿಕೊಳ್ಳಲು ಸಾಧ್ಯವಾಗಿದೆ. ಆದರೆ ಜಾಗತೀಕರಣದ ಕಾರ್ಮಿಕ ವಿರೋಧಿ ನೀತಿಗಳನ್ನು ಹಿಮ್ಮೆಟ್ಟಿಸಲು, ಕಿತ್ತುಹಾಕಲು ಸಾಧ್ಯವಾಗಲಿಲ್ಲ. ಹೀಗಾಗಿಯೇ ಖಾಯಂ ಉದ್ಯೋಗದ ಬದಲು ಸರ್ಕಾರಿ ಮತ್ತು ಖಾಸಗಿ ವಲಯದಲ್ಲೂ ಗುತ್ತಿಗೆ, ಹೊರ ಗುತ್ತಿಗೆ ಕಾರ್ಮಿಕರ ಸಂಖ್ಯೆ ಹೆಚ್ಚುತ್ತಿರುವುದು.

ಕಾರ್ಮಿಕರ ಬೇಡಿಕೆಗಳ ಈಡೇರಿಕೆಗಾಗಿ, ಸಾರ್ವತ್ರಿಕ ಮುಷ್ಕರ ಮಾಡುವಾಗ ಐಕ್ಯತೆಯಿಂದ ಹೋರಾಟ ಮಾಡಿದರೂ, ಚುನಾವಣೆ ಬಂದಾಗ ಜಾತಿವಾದದ ಹಿನ್ನೆಲೆಯಲ್ಲಿ ಮತ ಚಲಾಯಿಸುವುದರಿಂದ ಇಲ್ಲಿ ಕಾರ್ಮಿಕರ ಐಕ್ಯತೆ ಒಡೆದು ಹೋಗುತ್ತದೆ. ಏಕೆಂದರೆ ಜಾತಿವಾದ ಕಾರ್ಮಿಕರ ಐಕ್ಯತೆಯನ್ನು 'ಒಡೆಯುವ ಸಾಧನ'ವಾಗಿದೆ. ಇದೇ ಸಂದರ್ಭದಲ್ಲಿ ಜಾತಿ ಸಂಘಗಳು ನಮ್ಮ ಸಮಾಜದಲ್ಲಿ ವಿಜೃಂಭಿಸುತ್ತಿವೆ. ಜಾತಿ ಸಂಘಗಳನ್ನು ರಾಜಕಾರಣಿಗಳು ಬೆಳೆಸುತ್ತಿದ್ದಾರೆ. ಜಾತಿಗೊಂದು ಸಂಘ, ಜಾತಿಗೊಂದು ಮಠಗಳು ಹುಟ್ಟಿಕೊಂಡಿವೆ. ಇದರ ಪರಿಣಾಮವಾಗಿಯೇ ಕಾರ್ಖಾನೆಗಳ ಒಳಗೂ ಜಾತಿ ಸಂಘ–ಸಂಸ್ಥೆಗಳು ಹುಟ್ಟಿಕೊಂಡಿವೆ. ಈ ಜಾತಿ ಸಂಘಗಳ ಹೆಸರಿನಲ್ಲಿ ಕಾರ್ಯಕ್ರಮಗಳನ್ನು ನಡೆಸುವುದು. ಈ ಕಾರ್ಯಕ್ರಮಗಳಿಗೆ ಹಣವನ್ನು ರಾಜಕಾರಣಿಗಳೂ ನೀಡುತ್ತಾರೆ. ಇಂತಹ ಜಾತಿ ಹೆಸರಿನ ಕಾರ್ಯಕ್ರಮಗಳಲ್ಲಿ ಕಾರ್ಮಿಕರು ಭಾಗವಹಿಸುತ್ತಿರುವುದರಿಂದ ಕಾರ್ಮಿಕರಲ್ಲಿ ಸ್ವಜಾತಿ ಪ್ರಜ್ಞೆ ತೀವ್ರವಾಗಿ ಬೆಳೆಯುತ್ತದೆ.

ಹೀಗೆ ಕಾರ್ಮಿಕರ ಒಗ್ಗಟ್ಟನ್ನು ಒಡೆದು ಹೋರಾಟದ ಬಲವನ್ನು ಜಾತಿವಾದದಿಂದ ಕುಂದಿಸಲಾಗುತ್ತಿದೆ. ಕಾರ್ಮಿಕರ ವೇತನವನ್ನು ಹೆಚ್ಚಿಸಿಕೊಳ್ಳುವುದಕ್ಕಿಂತ ಪಾತಾಳಕ್ಕೆ ತುಳಿಯಬೇಕೆಂಬುದೇ ಜಾತಿವಾದದ ಮುಖ್ಯ ಉದ್ದೇಶವಾಗಿದೆ. ಹಾಗೂ ಅತಿ ಹೆಚ್ಚು ದುಡಿಸಿಕೊಳ್ಳುವುದೇ ಜಾತಿವಾದದ ಮುಖ್ಯ ಉದ್ದೇಶವಾಗಿದೆ. ಇದಕ್ಕಾಗಿ ಎಲ್ಲ ಕಾರ್ಮಿಕ ಕಾನೂನುಗಳನ್ನು ಕಿತ್ತುಹಾಕಲಾಗುತ್ತಿದೆ. ಇಂತಹ ಎಲ್ಲ ದುರುದ್ದೇಶಗಳೇ ಜಾತಿವಾದದ ಹಿಂದಿರುವುದು.

ಜಾತಿ ವ್ಯವಸ್ಥೆಯನ್ನು ರೂಪಿಸಿದ್ದು ಕೂಡ ಅತ್ಯಂತ ಅಗ್ಗವಾಗಿ ದುಡಿಸಿಕೊಳ್ಳುವ ಉದ್ದೇಶದಿಂದ. ಅಂದರೆ ಅತ್ಯಂತ ಅಗ್ಗವಾಗಿ, ಹೆಚ್ಚು ಕಾಲ ದುಡಿಸಿಕೊಳ್ಳುವುದು. ಮನೆಯಾಳುಗಳಾಗಿ ದಲಿತರನ್ನು ಸಾವಿರಾರು ವರ್ಷಗಳಿಂದ ದುಡಿಸಿಕೊಂಡು ಬರಲಾಗಿತ್ತು. ಇದು ಇವತ್ತಿಗೂ ಹಳ್ಳಿಗಳಲ್ಲಿ ಮುಂದುವರಿದಿದೆಯಾದ್ದರಿಂದ ಅತ್ಯಂತ ಕೀಳು ಕೆಲಸಗಳನ್ನು ಮಾಡಿಸುತ್ತಿದ್ದಾರೆ. ಇಂತಹ ಕೆಲಸಗಳಲ್ಲಿ ದಲಿತರೇ ಹೆಚ್ಚು. ಇಂಥವರನ್ನು ಅತ್ಯಂತ ಕೀಳಾಗಿ ನೋಡಲಾಗುತ್ತಿದೆ. ಇವರನ್ನು ಊರಿನ ಹೊರಗಡೆ ಇಡಲಾಗಿದೆ.

ಇಂತಹ ಜಾತಿವಾದ ಮತ್ತು ಕೋಮುವಾದಕ್ಕೆ ಕಾರ್ಮಿಕರು ಬಲಿಯಾಗದೇ, ಮಾನವರೆಲ್ಲಾ ಒಂದೇ ಎಂಬ ಬಗ್ಗೆ ಭಾವನೆಯನ್ನು ಮೂಡಿಸಿಕೊಳ್ಳಬೇಕು. ನಿಜವಾದ ಕಾರ್ಮಿಕರ ಶೋಷಣೆಗಾರರು ಯಾರೆಂದು ಅರಿಯುವಂತಾಗಬೇಕು. "ವಿಶ್ವ ಕಾರ್ಮಿಕರೇ ಒಂದಾಗಿ" ಎಂಬ ಘೋಷಣೆಯನ್ನು ಸಾಧಿಸಲು ಜಾತಿವಾದ ಮತ್ತು ಕೋಮುವಾದದ ವಿರುದ್ಧ ಸಮರ ಸಾರಬೇಕಿದೆ.

*ಬೆಂಗಳೂರು* **ಬಿ. ರಾಜಶೇಖರಮೂರ್ತಿ**

**ವಾಚ್ ಉಡುಗೊರೆ !**

ಇಂದು ನಮ್ಮ ಮುಖ್ಯಮಂತ್ರಿ ಎಷ್ಟೋ ಲಕ್ಷ ಬೆಲೆ ಬಾಳುವ ವಾಚನ್ನು ಉಡುಗೊರೆಯಾಗಿ ಪಡೆದು ಅದನ್ನು (ಲೀಗಲ್) ಎಂದು ಸಮರ್ಥಿಸಿಕೊಳ್ಳುವ ಧಾಟಿ, ನಮ್ಮ ವಿರೋಧ ಪಕ್ಷದವರು ಇದನ್ನೇ ಒಂದು ಅಸ್ತ್ರವಾಗಿಸಿ ಅವರ ಮೇಲೆ ಮುಗಿಬಿದ್ದಿದ್ದು, ಮುಖ್ಯಮಂತ್ರಿಗಳು ನಿಮ್ಮಿಂದ ನಾವು ಪಾಠ ಕಲಿಯಬೇಕಾಗಿಲ್ಲ ನೀವೇನು ಭ್ರಷ್ಟಾಚಾರಿಗಳಲ್ಲವೆಂದು ಕೊಂಡಿದ್ದಿರಾ ! ಭ್ರಷ್ಟಾಚಾರಿಗಳಿಂದ ಪಾಠ ಹೇಳಿಸಿಕೊಳ್ಳಬೇಕಾಗಿಲ್ಲ ಎಂದಿದ್ದಾರೆ. ಅಷ್ಟಕ್ಕೂ ಈ ವಾಚ್ ಹಗರಣದಲ್ಲಿ ಅಷ್ಟೊಂದು ದುಬಾರಿ ವಾಚ್ ನಮ್ಮ ಮುಖ್ಯಮಂತ್ರಿಗೆ ಏಕೆ ಕೊಟ್ಟಿದ್ದಾರೆ, ಅದರಿಂದ ಕೊಟ್ಟವರಿಗೇನಾದರೂ ಲಾಭ ಇದೆಯಾ ಇವೆಲ್ಲವೂ ಸಾಮಾನ್ಯ ಜನರನ್ನು ವಿಚಿತ್ರ ಸಂಕಟದಲ್ಲಿ ಬೀಳುವಂತೆ ಮಾಡಿವೆ.

ಇಂದಿನ ಯುಗದಲ್ಲಿ (ಮತ್‌ಲಬಿ ದುನಿಯಾ)ದಲ್ಲಿ ಯಾರು ಅಷ್ಟು ಸರಳವಾಗಿ ಅಷ್ಟೊಂದು ದುಬಾರಿ ವಾಚನ್ನು ಉಡುಗೊರೆಯಾಗಿ ಕೊಡುತ್ತಾರೆಂದರೆ, ನಂಬಬೇಕೋ ಬಿಡಬೇಕೋ ತಿಳಿಯುತ್ತಿಲ್ಲ.

ರಾಯಚೂರು **ವಿಜಯಕುಮಾರ ಪಿ.**

**ತರಕಾರಿಗಳಿಗೆ ಕನಿಷ್ಠ ಬೆಂಬಲ ಬೆಲೆ**

ಟೊಮ್ಯಾಟೊ ಕೆ.ಜಿ.ಗೆ ೫೦ ಪೈಸೆಗೆ ಇಳಿಯಿತೆಂದು ತಮ್ಮ ಬೆವರಿನ ಫಲವನ್ನು ಅಸಹಾಯಕರಾಗಿ ಬೀದಿಗೆ ಸುರಿದುಹೋದ ರೈತರ ಕಷ್ಟಗಳನ್ನು, ವಾಚು–ಕಾರುಗಳ ಆರೋಪ–ಸಮರ್ಥನೆಗಳ ಕ್ಷುಲ್ಲಕ ಪ್ರಾದೇಶಿಕ ರಾಜಕೀಯದಲ್ಲಿ ಮತ್ತು ದೇಶದ್ರೋಹ–ದೇಶಭಕ್ತಿಗಳ ಹುಸಿ ವ್ಯಾಖ್ಯಾನಗಳ ಸಂವೇದನಾರಹಿತ ರಾಷ್ಟ್ರೀಯ ರಾಜಕೀಯದಲ್ಲಿ ಕೇಳುವವರೇ ಇಲ್ಲವಾಗಿದೆ. ಮಾರುಕಟ್ಟೆ ಆರ್ಥಿಕತೆಯ ಈ ಕಷ್ಟದ ದಿನಗಳಲ್ಲಿ ಎಲ್ಲ ಜನಸಾಮಾನ್ಯರಂತೆ ಜೀವನದ ವೆಚ್ಚಗಳನ್ನು ಸರಿದೂಗಿಸಲು ಸಾಲಸೋಲಗಳಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ರೈತರು ಕೇವಲ ಸುದ್ದಿಯ ತುಣುಕಾಗಿ ಮರೆಯಾಗುತ್ತಿದ್ದಾರೆ. ಶ್ರಮಿಕರ ಸಂಕಷ್ಟಗಳಿಗೆ ನಿಜವಾದ ಪರಿಹಾರ ಜನಪರವಾದ ರಾಜಕೀಯದಿಂದ ಮಾತ್ರ ಬರುವುದು ಸಾಧ್ಯ, ನಿಜ. ಹಾಗೆಂದು ಸುಮ್ಮನೆ ಕೂರದೆ ರೈತರು ಮಾರುಕಟ್ಟೆಗೆ ತರುವ ಟೊಮ್ಯಾಟೊ ಸೇರಿದಂತೆ ಎಲ್ಲ ತರಕಾರಿಗಳಿಗೆ ಚುನಾಯಿತ ಸರ್ಕಾರಗಳು ಸೂಕ್ತ ಬೆಂಬಲ ಬೆಲೆ ಘೋಷಿಸುವುದು ಇಂದಿನ ತುರ್ತು ಅಗತ್ಯ. ಹಣ–ಜಾತಿಗಳ ಇಂದಿನ ಪಕ್ಷ ರಾಜಕೀಯದ ಹಾವು–ಏಣಿ ಆಟದಲ್ಲಿ ಸಿಕ್ಕಿಹಾಕಿಕೊಂಡಿರುವ ರೈತ ನಾಯಕರು ತರಕಾರಿಗಳ ಕನಿಷ್ಠ ಬೆಂಬಲ ಬೆಲೆಯ ಬಗ್ಗೆ ಸರ್ಕಾರವನ್ನು ಒತ್ತಾಯಿಸಬೇಕು. ಗ್ರಾಹಕರಾದರೂ ರೈತರು ಬೆಳೆದ ತರಕಾರಿಗಳು ಅಗ್ಗದ ಬೆಲೆಗೆ ಸಿಕ್ಕಿತೆಂದು ಸಂಭ್ರಮಿಸದೆ, ಸಾಧ್ಯವಿರುವ ಕಡೆಗಳಲ್ಲೆಲ್ಲಾ ಕನಿಷ್ಠ ಬೆಂಬಲ ಬೆಲೆ ಕೊಟ್ಟೇ ನೇರವಾಗಿ ರೈತರಿಂದ ಕೊಂಡುಕೊಳ್ಳುವ ಮಾನವೀಯತೆಯನ್ನು ತೋರಲಿ. ಉದಾಹರಣೆಗೆ, ಒಂದು ಕೆ.ಜಿ. ಟೊಮ್ಯಾಟೊಗೆ ಕನಿಷ್ಠ ೧೦ ರೂ.ಗಳನ್ನಾದರೂ ಸ್ವಯಂ ಇಚ್ಛೆಯಿಂದ ಕೊಡಲಿ. ಬೇಳೆ–ಕಾಳುಗಳನ್ನು ಕೆ.ಜಿ.ಗೆ ನೂರು, ಇನ್ನೂರು ಕೊಟ್ಟಾದರೂ ಕೊಳ್ಳುವ ಮಧ್ಯಮ ವರ್ಗದವರಿಗೆ ಇಂಥ ಕ್ರಮ ಅಸಾಧುವೂ ಅಲ್ಲ, ಅಸಾಧ್ಯವೂ ಅಲ್ಲ.

ಮೈಸೂರು **ವಿ. ಎನ್. ಲಕ್ಷ್ಮೀನಾರಾಯಣ**

---

*(ಈ ತಿಂಗಳು ೮ನೇ ಪುಟದಿಂದ)*

ಆದ್ದರಿಂದ ಅಂಥವರು ಉಂಟುಮಾಡುವ ಕಿರಿಕಿರಿಯನ್ನು ಸಹಿಸಲಾಗದೆ ಎನ್.ಐ.ಟಿ.ಯನ್ನು ಕಾಶ್ಮೀರದಿಂದ ಸ್ಥಳಾಂತರಿಸಿದರೆ ಕಾಶ್ಮೀರದ ಬೇರೆಲ್ಲ ಜನರ ಅಸಮಾಧಾನಕ್ಕೆ ನಾವೇ ಕಾರಣರಾಗಿಬಿಡುತ್ತೇವೆ. ಹಾಗೆ ಮಾಡುವುದು ಬೇಡವೆಂದು ಜನತೆ ಒಕ್ಕೊರಲಿನಿಂದ ಹೇಳುತ್ತಿದೆ.

* * *

ಅಮೆರಿಕಾ ಎಂದಾಕ್ಷಣ ತ್ಯಾಗಬುದ್ಧಿ ಒಸರುತ್ತದೆ ನಮ್ಮ ದೇಶದ ಕೇಂದ್ರ ಸರ್ಕಾರಕ್ಕೆ. ವಿಶೇಷತಃ ತ್ಯಾಗ ಮಾಡುವುದು ನಮ್ಮ ಸಾರ್ವಭೌಮತ್ವ ಮತ್ತು ಘನತೆಗಳನ್ನು. ಯಾವ ದೇಶದ ಜೊತೆಯಲ್ಲೂ ಶಾಶ್ವತ ಮತ್ತು ಶಾಸನಬದ್ಧ ಮಿಲಿಟರಿ ಒಪ್ಪಂದ ಮಾಡಿಕೊಳ್ಳದೆ ಅಲಿಪ್ತ ನೀತಿಯನ್ನು ಅನೇಕ ವರ್ಷಗಳ ಕಾಲ ಪಾಲಿಸಿದ ಹೆಮ್ಮೆ ನಮ್ಮ ದೇಶದ್ದು. ಮೋದಿ ಸರ್ಕಾರವು "ಭಾರತದಲ್ಲಿ ಮಾಡಿ" ಎಂಬ ಅಪಕ್ವ ನೀತಿಯನ್ನು ಅನುಸರಿಸ ಹೊರಟು ವ್ರತ ಮತ್ತು ಸುಖ ಎರಡನ್ನೂ ಮಲಿನಗೊಳಿಸಿದೆ. ಅದರ ಮುಂದುವರಿದ ಭಾಗವನ್ನು ರಕ್ಷಣಾ ಮಂತ್ರಿ ಪಾರಿಕ್ಕರ್ ಪೂರೈಸಿ ದೇಶದ ತಲೆಯ ಮೇಲೆ ಸಗಣಿ ಸುರಿದಿದ್ದಾರೆ. ಅಮೆರಿಕಾದ ರಕ್ಷಣಾ ಸಚಿವಾಲಯದ ಕಾರ್ಟರ್ ಭಾರತಕ್ಕೆ ಭೇಟಿ ನೀಡಿದ ಈ ತಿಂಗಳಲ್ಲಿ "ಪರಸ್ಪರ ಹೊಂದಾಣಿಕೆ" ಎಂಬ ಹೆಸರಿನಲ್ಲಿ ನಮ್ಮ ದೇಶದ ರಕ್ಷಣಾ ನೆಲೆಗಳನ್ನು ಬಳಸಿಕೊಳ್ಳಲು ಅಮೆರಿಕಾಕ್ಕೆ ಅನುಮತಿ ನೀಡಲಾಗಿದೆ. ನಮ್ಮ ವಾಯುನೆಲೆ ಮತ್ತು ನೌಕಾನೆಲೆಗಳು ಆ ದೇಶಕ್ಕೆ ತೆರೆದುಕೊಳ್ಳುತ್ತವೆ. ಅಲ್ಲಿ ನೆಲೆ ನಿಂತು ನಮ್ಮ ದೇಶದ ಸುತ್ತಮುತ್ತಲಿನ ದೇಶಗಳಲ್ಲಿ ರಕ್ತವೆಂಬ ರಾಡಿಯನ್ನು ಹರಿಸಲು ಅಮೆರಿಕಾ ಹವಣಿಸಬಹುದು. ಚೀಣಾಕ್ಕೆ ಪ್ರತ್ಯುತ್ತರ ಎನ್ನುವಂತೆ ಇದನ್ನು ವ್ಯಾಖ್ಯಾನಿಸಲಾಗಿದೆ. ಚೀಣಾ ತನ್ನದೆಂದು ಹೇಳುವ ಕೆಲವು ದ್ವೀಪಗಳಿಂದ ಕಾಲ್ತೆಗೆಯಬೇಕೆಂದು ಅಮೆರಿಕಾ ಆಗ್ರಹಿಸುತ್ತಿದೆ. ಆ ಹಿನ್ನೆಲೆಯಲ್ಲಿ ನಮ್ಮ ಸೇನೆಯ ನೆಲೆಗಳನ್ನು ಹದ್ದಿನ ಕಣ್ಣಿನಿಂದ ನೋಡುತ್ತಿದ್ದ ಅಮೆರಿಕಾ ಈಗ ಅವನ್ನು ಪಡೆದುಕೊಂಡಿದೆ. ನಮ್ಮ ದೇಶವು ಅಮೆರಿಕಾದ ಇಂತಹ ನೆಲೆಗಳನ್ನು ಅಮೆರಿಕಾದಲ್ಲಿ ಬಳಸಲು ಅವಕಾಶ ವಿರುವಂತೆ ಒಪ್ಪಂದ ಮಾಡಿಕೊಳ್ಳಲಾಗಿದೆ ಎಂದು ಹೇಳಲಾಗುತ್ತಿದೆ. ಅಷ್ಟು ದೂರಕ್ಕೆ ಹೋಗಿ ಅಮೆರಿಕಾದ ವಾಯು ಮತ್ತು ನೌಕಾ ನೆಲೆಗಳನ್ನು ನಾವು ಬಳಸಬೇಕಾಗಿ ಬರುವ ಸಂಭವ ಅತ್ಯಲ್ಪ, ಆದರೆ ಅಮೆರಿಕ ತಕ್ಷಣದಲ್ಲೇ ನಮ್ಮ ನೆಲೆಗಳಲ್ಲಿ ತುಂಬಿಕೊಳ್ಳುತ್ತದೆ. ನೆರೆರಾಷ್ಟ್ರಗಳ ಕೆಂಗಣ್ಣಿಗೆ ಪಾತ್ರವಾಗುವ ಇಂತಹ ಘೋರ ಒಪ್ಪಂದವು ನಮ್ಮ ಸಾರ್ವಭೌಮತ್ವಕ್ಕೆ ಧಕ್ಕೆ ಉಂಟುಮಾಡುತ್ತದೆ. ಆದರೆ ಪಾರಿಕ್ಕರ್‌ಗೆ ಆ ಪ್ರಜ್ಞೆ ಇಲ್ಲ. ಅವರು ಒಪ್ಪಂದ ಮಾಡಿಕೊಳ್ಳಲು ಅಂಗೀಕಾರ ನೀಡಿರುವುದು ಖಂಡನೀಯ. ನಾವದನ್ನು ತೀವ್ರವಾಗಿ ಪ್ರತಿಭಟಿಸುತ್ತೇವೆ. ಅಮೆರಿಕಾದ ಶತ್ರುಗಳು ನಮ್ಮ ಶತ್ರುಗಳೂ ಆಗುತ್ತಾರೆ ಎಂಬುದು ಈ ಅಸಹ್ಯ ಒಪ್ಪಂದದ ತಿರುಳು. ಅಂತಹ ಒಪ್ಪಂದವನ್ನು ನಾವು ತಿರಸ್ಕರಿಸಬೇಕು. ■

# ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ

○ ಎಸ್. ಆರ್. ಭಟ್











ದಿವಂಗತ ಎಸ್. ರಾಮಚಂದ್ರ ಭಟ್ಟರು ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕರಲ್ಲೊಬ್ಬರು ಹಾಗೂ ಸ್ಥಾಪಕ ಕಾರ್ಯದರ್ಶಿ. ಸಂಸ್ಥೆಯಲ್ಲಿ ಹಲವಾರು ವರ್ಷಗಳು ಕಾರ್ಯ ನಿರ್ವಹಿಸಿ ಭದ್ರವಾದ ನೆಲೆ ಸೃಷ್ಟಿಸಿದವರು. ಕೆಲಕಾಲ 'ಕೆಂಬಾವುಟ' ಪತ್ರಿಕೆಯ ಸಂಪಾದಕರಾಗಿದ್ದ ಭಟ್ಟರು ಬೆಂಗಳೂರಿನಿಂದ ಪ್ರಕಟವಾದ ಸೈದ್ಧಾಂತಿಕ ಮಾಸಪತ್ರಿಕೆ 'ಅರುಣ'ದ ಸಂಪಾದಕರೂ ಆಗಿದ್ದರು. ಕನ್ನಡ, ಸಂಸ್ಕೃತ, ಇಂಗ್ಲಿಷಿನಲ್ಲಿ ಪ್ರಬುದ್ಧರಾಗಿದ್ದ ಅವರು ವಿದ್ವಾಂಸರು. ವೇದಾಧ್ಯಯನ ಮಾಡಿದ್ದರು. ಭಾರತದ ಪ್ರಾಚೀನ ಇತಿಹಾಸವನ್ನು ಚೆನ್ನಾಗಿ ಬಲ್ಲವರಾಗಿದ್ದರು. 'ಕುಮಾರವ್ಯಾಸ ಭಾರತ' ಕಂಠಪಾಠ ಮಾಡಿಕೊಂಡಿದ್ದರು, ಅಧ್ಯಯನಶೀಲರಾಗಿದ್ದ ಭಟ್ಟರು ಆಳವಾದ ವಿಶ್ಲೇಷಣೆಗೆ ಹೆಸರಾಗಿದ್ದರು.

೧೯೭೭ರ ಅಕ್ಟೋಬರ್ ತಿಂಗಳಲ್ಲಿ ಅವರು ಬರೆದ 'ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ' ಲೇಖನವನ್ನು 'ಮೇ ದಿನ'ದ ಸಂದರ್ಭದಲ್ಲಿ ಪ್ರಕಟಿಸುತ್ತಿದ್ದೇವೆ. *– ಸಂ.*

**ಕರ್ನಾಟಕದ ಕಾರ್ಮಿಕ ವರ್ಗ ಈಗ ಹೊಸ ಹೋರಾಟಗಳ ಹೊಸ್ತಿಲಲ್ಲಿ ನಿಂತಿದೆ. ಸುಮಾರು ೪೦ ವರ್ಷಗಳ ಹಿಂದೆ ಬೆಂಗಳೂರು ಮತ್ತು ಮಂಗಳೂರುಗಳಲ್ಲಿ ಬಹಳ ಚಿಕ್ಕ ಪ್ರಮಾಣದಲ್ಲಿ ಪ್ರಾರಂಭವಾದ ರಾಜ್ಯದ ಕಾರ್ಮಿಕ ಚಳವಳಿ ಈಗ ರಾಜ್ಯಾದ್ಯಂತ ಹರಡಿ, ನೂರಾರು ಹೋರಾಟಗಳಲ್ಲಿ ಪಳಗಿ, ಒಂದು ಪ್ರಬಲ ಶಕ್ತಿಯಾಗಿ ಪರಿಣಮಿಸಿದೆ. ಟ್ರೇಡ್ ಯೂನಿಯನ್‌ಗಳಲ್ಲಿ ಸಂಘಟಿತರಾಗಿರುವ ಕಾರ್ಮಿಕರ ಸಂಖ್ಯೆ ಹಿಂದಿಗಿಂತ ಎಷ್ಟೋ ಪಾಲು ಹೆಚ್ಚಾಗಿದೆ. ಹಾಗೆಯೇ ಟ್ರೇಡ್ ಯೂನಿಯನ್ ಸಂಘಟನೆಗಳೂ ಬಹುಮುಖವಾಗಿ ಬೆಳೆದು, ಸಾಮಾನ್ಯ ಎಲ್ಲ ಕೈಗಾರಿಕೆಗಳನ್ನೂ ವ್ಯಾಪಿಸಿವೆ. ರಾಜ್ಯದಲ್ಲಿ ಟ್ರೇಡ್ ಯೂನಿಯನ್ ಚಳವಳಿ ಒಂದು ನಿರ್ದಿಷ್ಟ ಹಂತವನ್ನು ಈಗ ತಲಪಿದೆ. ಇದಲ್ಲದೆ, ದೇಶದ ರಾಜಕೀಯದಲ್ಲಿ ಕಾರ್ಮಿಕ ವರ್ಗ ಹೆಚ್ಚು ಪರಿಣಾಮಕಾರಿಯಾದ ಪಾತ್ರವನ್ನು ವಹಿಸಬೇಕಾದ ಪರಿಸ್ಥಿತಿ ಮುಂದಿನ ಕಾಲಘಟ್ಟದಲ್ಲಿ ಉದ್ಭವಿಸಲಿದೆ.**

**ಆದುದರಿಂದ ಈ ಸಂದರ್ಭದಲ್ಲಿ ರಾಜ್ಯದ ಕಾರ್ಮಿಕ ವರ್ಗ ನಡೆದುಬಂದ ದಾರಿಯನ್ನು ಮತ್ತು ಟ್ರೇಡ್ ಯೂನಿಯನ್ ಚಳವಳಿ ಬೆಳೆದು ಬಂದ ರೀತಿಯನ್ನು ಸ್ಥೂಲವಾಗಿ ಸಮೀಕ್ಷಿಸುವುದು ಅಪ್ರಸ್ತುತವಾಗಲಾರದು. ಏಕೆಂದರೆ "ನಿನ್ನೆ"ಯ ಗರ್ಭದಿಂದ "ಇಂದು" ಹುಟ್ಟುತ್ತದೆ. "ಇಂದಿ"ನಿಂದ "ನಾಳೆ" ನೆಗೆಯುತ್ತದೆ. ಆದುದರಿಂದ ಇಂದು ಸರಿಯಾದ ದಾರಿಯಲ್ಲಿ ನಡೆದು ನಾಳೆಯನ್ನು ಸಮರ್ಪಕವಾಗಿ ರೂಪಿಸಬೇಕಾದರೆ, ನಿನ್ನೆಯ ಅರಿವು ಅಗತ್ಯ.**

**ಕಾ**ರ್ಮಿಕ ವರ್ಗದ ಮೇಲೆ ಇತಿಹಾಸ ಒಂದು ದೊಡ್ಡ ಜವಾಬ್ದಾರಿಯನ್ನು ಹೊರಿಸಿದೆ. ಅದು ಬಂಡವಾಳಶಾಹೀ ಪದ್ಧತಿಯನ್ನು ಕೊನೆಗೊಳಿಸುವ ಮಹತ್ತರ ಕಾರ್ಯ. ಇಂದಿನ ಬಂಡವಾಳಶಾಹೀ ಸಾಮಾಜಿಕ ವ್ಯವಸ್ಥೆ ಅನಾದಿಯೂ ಅಲ್ಲ, ಅವಿನಾಶಿಯೂ ಅಲ್ಲ. ಅದು ಆಧುನಿಕ ಕೈಗಾರಿಕಾ ಕ್ರಾಂತಿಯ ಫಲ. ಆಧುನಿಕ ಕಾರ್ಮಿಕ ವರ್ಗವೂ ಅದರ ಶಿಶುವೇ.

### ಕೈಗಾರಿಕಾ ಕ್ರಾಂತಿ

ಈ ಕೈಗಾರಿಕಾ ಕ್ರಾಂತಿ ೧೭–೧೮ನೇ ಶತಮಾನಗಳಲ್ಲಿ ಬ್ರಿಟನ್ನಿನಲ್ಲಿ ಮೊದಲು ಪ್ರಾರಂಭವಾಗಿ ಅಲ್ಲಿಂದ ಯುರೋಪು ಮತ್ತು ಅಮೇರಿಕಗಳಿಗೆ ಹರಡಿತು. ೧೮ನೇ ಶತಮಾನದಲ್ಲಿ ನಡೆದ ಹೊಸ ವೈಜ್ಞಾನಿಕ ಸಂಶೋಧನೆಗಳು ಮತ್ತು ನಿರ್ಮಾಪನೆಗಳು (ಹಾರ್‌ಗ್ರೀವನ ಸ್ಪಿನ್ನಿಂಗ್ ಜೆನ್ನಿ, ಜೇಮ್ಸ್ ವಾಟ್ಸನ ಉಗಿಯಂತ್ರ, ಆರ್ಕ್ ರೈಟನ ಬಟ್ಟೆ ತಯಾರಿಕೆಯ ಉಪಕರಣ, ವ್ಹಿಟ್ನಿಯ ಕಾಟನ್ ಜಿನ್, ಸ್ಟೀಫನ್‌ಸನ್ನನ ಉಗಿಬಂಡಿ, ಫಲ್ಟನ್ನನ ಉಗಿಹಡಗು, ಇತ್ಯಾದಿ) ಕೈಗಾರಿಕಾ ಕ್ರಾಂತಿಯ ಗತಿಯನ್ನು ತೀವ್ರಗೊಳಿಸಿದವು. ಗುಡಿ ಕೈಗಾರಿಕೆ ಮತ್ತು ಕುಶಲ ಕಸುಬುಗಳು ಮೆಲ್ಲಮೆಲ್ಲನೆ ನಶಿಸತೊಡಗಿದವು. ಅವುಗಳ ಸ್ಥಾನವನ್ನು ಯಂತ್ರ ಕೈಗಾರಿಕೆ ಆಕ್ರಮಿಸಿತು. ಗಗನಕ್ಕೆ ಹೊಗೆ ಸೂಸುವ ಕಾರ್ಖಾನೆಗಳು ತಲೆಯೆತ್ತಿದವು. ರೈಲು ಮತ್ತು ಉಗಿಹಡಗುಗಳು ಓಡಾಡತೊಡಗಿ ಸಂಚಾರ ಮತ್ತು ಸರಕು ಸಾರಿಗೆಯಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ವಾಣಿಜ್ಯ ವ್ಯವಹಾರಗಳು ಇತೋಪ್ಯತಿಶಯವಾಗಿ ಬೆಳೆಯಲಾರಂಭಿಸಿದವು. ಇವುಗಳ ಪರಿಣಾಮವಾಗಿ ಸಮಾಜದ ಉತ್ಪಾದನಾ ಶಕ್ತಿಗಳು ಶೀಘ್ರ ಅಭಿವೃದ್ಧಿ ಹೊಂದಿ ಯುರೋಪಿಯನ್ ಸಮಾಜದಲ್ಲಿ ಎರಡು ಹೊಸ ವರ್ಗಗಳು ಉದಯಿಸಿದವು. ಒಂದು : ಯಂತ್ರಗಳ ಕಾರ್ಖಾನೆಗಳ ಮತ್ತು ವಾಣಿಜ್ಯ ವ್ಯವಹಾರಗಳ ಮಾಲೀಕತ್ವವನ್ನು ಹೊಂದಿದ ಬಂಡವಾಳಶಾಹೀ ವರ್ಗ. ಎರಡು : ಈ ಉತ್ಪಾದನಾ ಸಾಧನಗಳ ಮೇಲೆ ಯಾವ ಒಡೆತನವೂ ಇಲ್ಲದೆ, ಯಂತ್ರಗಳ ದಾಸರಾಗಿ, ಕೂಲಿಯ ಗುಲಾಮರಾಗಿ ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕ ವರ್ಗ.

### ಬಂಡವಾಳಶಾಹೀ ಸಮಾಜದ ಉದಯ

ಆದರೆ ಸಮಾಜದ ಈ ಹೊಸ ಉತ್ಪಾದನಾ ಶಕ್ತಿಗಳ ಬೆಳವಣಿಗೆಗೆ ಅಂದು ಬ್ರಿಟನ್ ಮತ್ತು ಯುರೋಪುಗಳಲ್ಲಿ ಅಸ್ತಿತ್ವದಲ್ಲಿದ್ದ ಪಾಳೆಯಗಾರೀ ಸಾಮಾಜಿಕ ಪದ್ಧತಿ, ಆಸ್ತಿ ಸಂಬಂಧಗಳು ಮತ್ತು ಪಾಳೆಯಗಾರೀ ಕಾನೂನುಗಳು ದೊಡ್ಡ ತಡೆಯಾಗಿ ಪರಿಣಮಿಸಿದುವು. ಇದರಿಂದಾಗಿ ಉದಯೋನ್ಮುಖ ಬಂಡವಾಳಶಾಹೀ ವರ್ಗಗಳ ಮತ್ತು ಅಧಿಕಾರದಲ್ಲಿದ್ದ ಹಳೆಯ ಪಾಳೆಯಗಾರೀ ವರ್ಗಗಳ ನಡುವೆ ಸಂಘರ್ಷ ಅನಿವಾರ್ಯವಾಯಿತು. ೧೭ನೇ ಶತಮಾನದಲ್ಲಿ ಬ್ರಿಟನ್ನಿನಲ್ಲಿ ಕ್ರಾಂತಿ ನಡೆದು, ಒಬ್ಬ ರಾಜ (ಒಂದನೆಯ ಚಾರ್ಲ್ಸ್) ತನ್ನ ರುಂಡವನ್ನೇ ಕಳೆದುಕೊಂಡ. ಇನ್ನೊಬ್ಬ ರಾಜ (ಎರಡನೆಯ ಜೇಮ್ಸ್ ) ದೇಶಭ್ರಷ್ಟನಾದ. ೧೮ನೇ ಶತಮಾನದ ಅಂತ್ಯದಲ್ಲಿ ಫ್ರಾನ್ಸ್‌ನಲ್ಲಿ ಇದಕ್ಕಿಂತಲೂ ದೊಡ್ಡ ಮಹಾಕ್ರಾಂತಿ ನಡೆದು ರಾಜ–ರಾಣಿಯರ ಸಮೇತ ನೂರಾರು ಮಂದಿ ಪಾಳೆಯಗಾರರು ನಾಶವಾದರು. ಪಶ್ಚಿಮ ಯುರೋಪಿನಲ್ಲೆಲ್ಲ ಸಮಗ್ರ ಪಾಳೆಯಗಾರೀ ಪದ್ಧತಿಯೇ ಅಸ್ತವ್ಯಸ್ತವಾಗಿ ರಾಜ್ಯಾಧಿಕಾರ ಕ್ರಮೇಣ ಬಂಡವಾಳಶಾಹೀ ವರ್ಗದ ಹಸ್ತಾಂತರವಾಯಿತು. ೧೯ನೇ ಶತಮಾನದ ಹೊತ್ತಿಗೆ ಹಳೆಯ ಪಾಳೆಯಗಾರೀ ಸಮಾಜ, ಸಂಪೂರ್ಣ ಬಂಡವಾಳಶಾಹೀ ಸಮಾಜವಾಗಿ ಪರಿವರ್ತನೆಗೊಂಡು, ಬಂಡವಾಳಶಾಹೀ ವರ್ಗ ಮತ್ತು ಬಂಡವಾಳಶಾಹೀ ಉತ್ಪಾದನಾ ವಿಧಾನಗಳು ಸುಸ್ಥಿರಗೊಂಡವು.

### ಕಾರ್ಮಿಕರ ಶೋಷಣೆ

ಆದರೆ, ಈ ಸಾಮಾಜಿಕ ಪರಿವರ್ತನೆಯಿಂದ ಹೊಸ ಕಾರ್ಮಿಕ ವರ್ಗದ ಪರಿಸ್ಥಿತಿಯಲ್ಲಿ ಮಾತ್ರ ಯಾವ ಬದಲಾವಣೆಯೂ ಆಗಲಿಲ್ಲ. ಪಾಳೆಯಗಾರೀ ಪದ್ಧತಿಯ ವಿರುದ್ಧ ನಡೆದ ಹೋರಾಟದಲ್ಲಿ ಬಂಡವಾಳಶಾಹೀ ವರ್ಗಗಳು ಕಾರ್ಮಿಕರ ಬೆಂಬಲವನ್ನು ಪಡೆದಿದ್ದರೂ ಕೂಡ, ಅದರಿಂದ ಕಾರ್ಮಿಕ ವರ್ಗಕ್ಕೆ ಪ್ರಯೋಜನವಾಗಲಿಲ್ಲ. ವಿಜಯೀ ಬಂಡವಾಳಶಾಹೀ ವರ್ಗ ಕಾರ್ಮಿಕರ ಶೋಷಣೆಯನ್ನು ಕಡಿಮೆ ಮಾಡುವುದಕ್ಕೆ ಬದಲಾಗಿ ಮತ್ತಷ್ಟು ಹೆಚ್ಚಿಸಿತು. ದಿನಕ್ಕೆ ೧೪–೧೬ ಗಂಟೆಗಳ ಕೆಲಸ, ಅತ್ಯಂತ ಕಡಿಮೆ ಕೂಲಿ. ೮–೧೦ ವರ್ಷಗಳ ಬಾಲಕರನ್ನು ಕೂಡ ನಿರ್ದಯವಾಗಿ ಹಗಲು ರಾತ್ರಿ ದುಡಿಸಲಾಗುತ್ತಿತ್ತು. ಇದರೊಂದಿಗೆ ಹಿಂದೆ ಪಾಳೆಯಗಾರೀ ಪದ್ಧತಿಯಿಂದ ಭೂಮಿಗೆ ಬಿಗಿಯಲ್ಪಟ್ಟಿದ್ದ ಊಳಿಗದಾಳುಗಳು ಹೊಸ ಉದ್ಯೋಗಾರ್ಥಿಗಳಿಗಾಗಿ ದೊಡ್ಡ ಪ್ರಮಾಣದಲ್ಲಿ ಪೇಟೆಗಳನ್ನು ಸೇರಿದ ಪರಿಣಾಮವಾಗಿ ಕಾರ್ಮಿಕ ವರ್ಗದ ಸಂಖ್ಯೆಯಲ್ಲಿ ಅಪಾರ ವೃದ್ಧಿಯಾದುದರಿಂದ ವಿಪರೀತ ನಿರುದ್ಯೋಗ ಬೇರೆ. ಹೊಸ ಯಂತ್ರಗಳು ಈ ನಿರುದ್ಯೋಗವನ್ನು ಇನ್ನಷ್ಟು ಹೆಚ್ಚಿಸಿದುವು.

### ಟ್ರೇಡ್ ಯೂನಿಯನ್‌ಗಳ ಹುಟ್ಟು

ಮೊದಮೊದಲು ಕಾರ್ಮಿಕರು ಈ ಯಂತ್ರಗಳೇ ತಮ್ಮ ಅಧೋಗತಿಗೆ ಕಾರಣವೆಂದು ಬಗೆದು ಅವುಗಳನ್ನು ಪುಡಿಮಾಡತೊಡಗಿದರು. ೧೬೩೦ರಲ್ಲಿ ಲಂಡನಿನಲ್ಲಿ ವಾಯುಚಾಲಿತ ಸಾಮಿಲ್ಲೊಂದು ಸ್ಥಾಪನೆಯಾದಾಗ ಸಿಟ್ಟಿಗೆದ್ದ ಕಾರ್ಮಿಕರು ಅದನ್ನು ನಾಶಗೊಳಿಸಿದರು. ೧೭೫೮ರಲ್ಲಿ ಎವರೆಟ್ ಎಂಬಾತ ಸ್ಥಾಪಿಸಿದ ಪ್ರಥಮ ಉಣ್ಣೆ ನೇಯುವ ಯಂತ್ರವನ್ನು, ಅದರಿಂದಾಗಿ ಕೆಲಸ ಕಳಕೊಂಡ ಕಾರ್ಮಿಕರು ಬೆಂಕಿಗೆ ಆಹುತಿ ಮಾಡಿದರು. ಆರ್ಕ್‌ರೈಟಿನ ಬಟ್ಟೆ ಯಂತ್ರಗಳ ಉಪಯೋಗದ ವಿರುದ್ಧ ೫೦ ಸಹಸ್ರ ಕಾರ್ಮಿಕರು ಪಾರ್ಲಿಮೆಂಟಿಗೆ ಮನವಿ ಅರ್ಪಿಸಿದರು. ಆದರೆ, ಬ್ರಿಟಿಷ್ ಸರಕಾರ ಈ ಚಳವಳಿಯನ್ನು ಕ್ರೂರವಾಗಿ ಅಡಗಿಸಿತು. ಯಂತ್ರಗಳ ವಿಧ್ವಂಸದ ವಿರುದ್ಧ ಘೋರ ಕಾನೂನುಗಳು ರಚಿಸಲ್ಪಟ್ಟವು. ೧೮೧೩ರಲ್ಲಿ ಯಾರ್ಕ್ ಶಯರಿನ ೧೮ ಮಂದಿ ಕಾರ್ಮಿಕರು ಈ ಅಪರಾಧಕ್ಕಾಗಿ ಗಲ್ಲಿಗೇರಿಸಲ್ಪಟ್ಟರು. ೧೮೩೧ರಲ್ಲಿ ಫ್ರಾನ್ಸಿನ ಲಯನ್ಸ್ ಎಂಬಲ್ಲಿ ಯಂತ್ರಗಳ ವಿರುದ್ಧ ಸಿಲ್ಕ್ ಕಾರ್ಮಿಕರ ಒಂದು ದೊಡ್ಡ ದಂಗೆಯೇ ನಡೆದು ಹಲವರು ಹತರಾದರು. ಆದರೆ, ಕಾರ್ಮಿಕರು ಕ್ರಮೇಣ ನಿರ್ಜೀವ ಯಂತ್ರ ತಮ್ಮ ವೈರಿಯಲ್ಲವೆಂಬುದನ್ನು ಅರಿತರು. ಹೋರಾಟದ ರೀತಿ ಬದಲಾಯಿತು. ಜೀವನ ಪರಿಸ್ಥಿತಿಯ ಸುಧಾರಣೆಗಾಗಿ ವೇತನ ಹೆಚ್ಚಳ. ಶ್ರಮ ಭಾರದ ಇಳಿತ ಮುಂತಾದ ಕೇಳಿಕೆಗಳು ಮಾಲೀಕರ ಅಥವಾ ಸರಕಾರದ ಮುಂದೆ ಮಂಡಿಸಲ್ಪಟ್ಟವು. ಮುಷ್ಕರ ಮತ್ತು ಸಂಧಾನಗಳು ಪ್ರಾರಂಭವಾದವು. ಇದಕ್ಕೋಸ್ಕರ ಕಾರ್ಮಿಕರ ಸಂಘಟನೆ ಅನಿವಾರ್ಯವಾಯಿತು. ಹಿಂದೆ ಗುಡಿ ಕೈಗಾರಿಕೆಯ ಕಾಲದಲ್ಲಿ ಅಪ್ರೆಂಟೀಸ್‌ಗಳ ವೃತ್ತಿ ಕೂಟಗಳಿದ್ದವು. ಅದೇ ಮಾದರಿಯಲ್ಲಿ ಈಗ ಕಾರ್ಮಿಕ ಸಂಘಗಳು ಹುಟ್ಟಿಕೊಂಡವು. ಆದುದರಿಂದಲೇ ಅವುಗಳಿಗೆ ಟ್ರೇಡ್ ಯೂನಿಯನ್ ಎಂದರೆ ವೃತ್ತಿ ಸಂಘಗಳು ಎಂಬ ಹೆಸರು ಬಂತು. ಹೀಗೆ ಟ್ರೇಡ್ ಯೂನಿಯನ್ ಚಳವಳಿ ಇತಿಹಾಸದ ರಂಗವನ್ನು ಪ್ರವೇಶಿಸಿತು.

### "ಚಾರ್ಟಿಸ್ಟ್" ಪ್ರಕ್ಷೋಭೆ

ಕೈಗಾರಿಕಾ ಕ್ರಾಂತಿಯ ತವರ್ಮನೆಯಾದ ಬ್ರಿಟನ್ನಿನಲ್ಲಿಯೇ ಟ್ರೇಡ್ ಯೂನಿಯನ್ ಚಳವಳಿಯೂ ಮೊದಲು ಪ್ರಾರಂಭವಾಯಿತು. ೧೭೫೨ರ ಹಿಂದೆಯೇ ಅಲ್ಲಿ ಟ್ರೇಡ್ ಯೂನಿಯನ್‌ಗಳು ಹುಟ್ಟಲಾರಂಭಿಸಿದವು. ಇದಕ್ಕೆ ಉತ್ತರ ರೂಪವಾಗಿ, ಟ್ರೇಡ್ ಯೂನಿಯನ್ ಸಂಘಟನೆಗಳನ್ನು ಪ್ರತಿಬಂಧಿಸುವ ಹೊಸ ಕಾನೂನುಗಳನ್ನು ಬ್ರಿಟಿಷ್ ಸರಕಾರ ಜಾರಿಗೊಳಿಸಿತು. ಇದರಿಂದ ಟ್ರೇಡ್ ಯೂನಿಯನ್‌ಗಳು ಭೂಗತವಾದವಷ್ಟೇ ಹೊರತು ಹೆಚ್ಚಿನ ಪರಿಣಾಮವಾಗಲಿಲ್ಲ. ಕೊನೆಗೆ, ೧೮೩೪ರಲ್ಲಿ ಕಾರ್ಮಿಕರ ಹೋರಾಟಗಳ ಪರಿಣಾಮವಾಗಿ ಈ ಕಾನೂನುಗಳು ಹಿಂದೆಗೆಯಲ್ಪಟ್ಟವು. ಅದೇ ವರ್ಷ ರಾಬರ್ಟ್ ಒವೆನ್‌ರವರ ನೇತೃತ್ವದಲ್ಲಿ ಲಂಡನ್ನಿನಲ್ಲಿ ಟ್ರೇಡ್ ಯೂನಿಯನ್ ಪ್ರತಿನಿಧಿಗಳ ಸಮ್ಮೇಳನವೊಂದು ನಡೆದು "ಗ್ರಾಂಡ್ ನ್ಯಾಷನಲ್ ಕನ್ಸಾಲಿಡೇಟೆಡ್ ಟ್ರೇಡ್ ಯೂನಿಯನ್" ಎಂಬ ಕೇಂದ್ರೀಯ ಸಂಸ್ಥೆಯೊಂದು ರಚಿಸಲ್ಪಟ್ಟಿತು. ಇದು ಮಾತ್ರ ಹೆಚ್ಚು ಕಾಲ ಬಾಳಲಿಲ್ಲ. ೧೮೩೬ರಲ್ಲಿ "ಲಂಡನ್ನಿನ ದುಡಿಯುವ ಜನರ ಸಂಘ" ಅಸ್ತಿತ್ವಕ್ಕೆ ಬಂದು, ಕಾರ್ಮಿಕರ ಕೇಳಿಕೆಗಳ ಮಹಾ ಪಟ್ಟಿಯೊಂದನ್ನು (ಚಾರ್ಟರ್) ಪಾರ್ಲಿಮೆಂಟಿಗೆ ಸಮರ್ಪಿಸುವ ಸಲುವಾಗಿ ಸಿದ್ಧಪಡಿಸಿತು. ಈ ಕೇಳಿಕೆಗಳಿಗಾಗಿ ಸುಮಾರು ೧೦ ವರ್ಷಗಳ ಕಾಲ ನಡೆದ ಬ್ರಿಟಿಷ್ ಕಾರ್ಮಿಕ ವರ್ಗದ ಚಳವಳಿ "ಚಾರ್ಟಿಸ್ಟ್ ಚಳವಳಿ" ಎಂದು ಇತಿಹಾಸದಲ್ಲಿ ಪ್ರಖ್ಯಾತವಾಗಿದೆ. ಈ ಮಹಾಪಟ್ಟಿಗೆ ೩೦ ಲಕ್ಷ ಸಹಿಗಳು ಸಂಗ್ರಹಿಸಲ್ಪಟ್ಟವು. ಚಳವಳಿಯ ಅಂಗವಾಗಿ ನೂರಾರು ಮುಷ್ಕರಗಳು ಮತ್ತು ಮತಪ್ರದರ್ಶನಗಳು ನಡೆದವು. ಇದರೊಂದಿಗೇ ಯುರೋಪಿನಲ್ಲಿಯೂ ಟ್ರೇಡ್ ಯೂನಿಯನ್ ಚಳವಳಿ ಬೆಳೆಯಿತು.

### ಕನಸಿನ ಯೋಜನೆಗಳು

ಆದರೆ ಹೀಗೆ ಪ್ರಾರಂಭವಾದ ಈ ಕಾರ್ಮಿಕ ಚಳವಳಿಗೆ ಒಂದು ನಿರ್ದಿಷ್ಟ ರಾಜಕೀಯ ದೃಷ್ಟಿಕೋನವಿರಲಿಲ್ಲ, ಸಮರ್ಥ ಮಾರ್ಗದರ್ಶನವಿರಲಿಲ್ಲ, ಕಾರ್ಮಿಕರಿಗೆ ತಮ್ಮ ನಿಜವಾದ ವೈರಿ ಯಾರೆಂಬುದರ ಬಗ್ಗೆ ಸ್ಪಷ್ಟ ಅರಿವಿರಲಿಲ್ಲ. ಈ ಮಧ್ಯೆ, ರಾಬರ್ಟ್ ಒವೆನ್, ಸೇಂಟ್ ಸೈಮನ್, ಫೂರಿಯರ್, ವೈಟ್ಲಿಂಗ್ ಮುಂತಾದ ಕೆಲವು ಚಿಂತಕರು ಬಂಡವಾಳಶಾಹೀ ಸಾಮಾಜಿಕ ವ್ಯವಸ್ಥೆಯನ್ನು ಸುಧಾರಿಸಿ, ಕಾರ್ಮಿಕರ ಜೀವನ ಪರಿಸ್ಥಿತಿಯನ್ನು ಉತ್ತಮಗೊಳಿಸಲು ತಮ್ಮದೇ ಆದ ಕೆಲವು ಕಾಲ್ಪನಿಕ ಯೋಜನೆಗಳನ್ನು ಮುಂದಿಟ್ಟರು. ತಮ್ಮ ಕನಸಿನ ಆದರ್ಶ ಸಮಾಜಗಳನ್ನು

ಚಿತ್ರಿಸಿದರು. ವಾಸ್ತವತೆಗಿಂತ ದೂರವಿದ್ದ ಈ ಕನಸಿನ ಯೋಜನೆಗಳಿಂದ ಮಾತ್ರ ಏನೂ ಪರಿಣಾಮವಾಗಲಿಲ್ಲ.

**ಸೈದ್ಧಾಂತಿಕ ತಳಹದಿ**

ಇಂತಹ ಪರಿಸ್ಥಿತಿಯಲ್ಲಿ ಕಾರ್ಮಿಕ ವರ್ಗಕ್ಕೆ ದಾರಿ ತೋರಿಸಿ, ಟ್ರೇಡ್ ಯೂನಿಯನ್ ಚಳವಳಿಗೆ ನಿರ್ದಿಷ್ಟ ಧ್ಯೇಯಧೋರಣೆಗಳನ್ನು ಮತ್ತು ಅಂತಿಮ ಗುರಿಯನ್ನು ಕಲ್ಪಿಸಿಕೊಟ್ಟವರು ವೈಜ್ಞಾನಿಕ ಸಮಾಜವಾದದ ಸಂಸ್ಥಾಪಕರಾದ ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಎಂಗೆಲ್ಸ್‌ರವರು. ೧೮೪೮ರಲ್ಲಿ ಅವರ **"ಕಮ್ಯೂನಿಸ್ಟ್ ಪ್ರಣಾಳಿಕೆ"** ಪ್ರಕಟವಾಯಿತು. **"ವಿಶ್ವದ ಕಾರ್ಮಿಕರೇ ಒಂದಾಗಿರಿ"** ಎಂಬ ಘೋಷಣೆ ಮೊಳಗಿತು. ಮಾರ್ಕ್ಸ್ ಮತ್ತು ಎಂಗೆಲ್ಸ್‌ರವರು ಸಮಾಜದ ಬೆಳವಣಿಗೆಯ ಮೂಲಭೂತ ನಿಯಮಗಳನ್ನು ಕಂಡುಹಿಡಿದರು. ಬಂಡವಾಳಶಾಹೀ ಪದ್ಧತಿಯ ಅಂತರ್ಗತ ವೈರುಧ್ಯಗಳನ್ನು ಹೊರಗೆಡವಿದರು. ಅದು ಶಾಶ್ವತವಲ್ಲವೆಂಬುದನ್ನು ಸಾಧಾರವಾಗಿ ತೋರಿಸಿ, ಅದನ್ನು ಕೊನೆಗೊಳಿಸುವುದೊಂದೇ ಕಾರ್ಮಿಕ ವರ್ಗದ ಮತ್ತು ಇತರ ಎಲ್ಲ ಶೋಷಿತ ಜನವಿಭಾಗಗಳ ವಿಮೋಚನೆಗೆ ಏಕೈಕ ಮಾರ್ಗವೆಂದು ಅವರು ಸ್ಪಷ್ಟಪಡಿಸಿದರು. ಪಾಳೆಯಗಾರೀ ಪದ್ಧತಿಯ ವಿನಾಶಕ್ಕೆ ಹೇಗೆ ಬಂಡವಾಳಶಾಹೀ ವರ್ಗ ಕಾರಣವಾಯಿತೋ, ಹಾಗೆಯೇ ಬಂಡವಾಳಶಾಹೀ ಪದ್ಧತಿಯ ನಾಶಕ್ಕೆ ಕಾರ್ಮಿಕ ವರ್ಗವೇ ಪ್ರಧಾನ ಅಸ್ತ್ರವೆಂದೂ ಅವರು ತೋರಿಸಿಕೊಟ್ಟರು. ಈ ಸಿದ್ಧಾಂತದ ಸಾರವನ್ನು ಸ್ವತಃ ಮಾರ್ಕ್ಸ್‌ರವರೇ ಸಂಕ್ಷಿಪ್ತವಾಗಿ ಹೀಗೆ ವಿವರಿಸಿದ್ದಾರೆ.

**ಸಮಾಜದ ಅಡಿಗಲ್ಲು**

"ತಮ್ಮ ಅಸ್ತಿತ್ವಕ್ಕೆ ಅವಶ್ಯವಾದ ಸಾಮಾಜಿಕ ಉತ್ಪಾದನೆಯ ಕಾರ್ಯದಲ್ಲಿ ಮಾನವರ ನಡುವೆ ಕೆಲವು ನಿರ್ದಿಷ್ಟ ಸಂಬಂಧಗಳು ಏರ್ಪಡುತ್ತವೆ. ಇವು ಉತ್ಪಾದನಾ ಸಂಬಂಧಗಳು. (ಉದಾಹರಣೆ: ಒಡೆಯ ಮತ್ತು ಗುಲಾಮರು, ಜಮೀನುದಾರ ಮತ್ತು ಗೇಣಿದಾರರು ಅಥವಾ ಕೃಷಿ ಕೂಲಿಗಾರರು, ಮಾಲೀಕ ಮತ್ತು ಕಾರ್ಮಿಕರು, ಇತ್ಯಾದಿ – ಸಂ). ಇವು ಮಾನವನ ವೈಯಕ್ತಿಕ ಇಚ್ಛೆಗೆ ಅಧೀನವಾಗಿರದ ಸಂಬಂಧಗಳು. ಸಮಾಜದ ಉತ್ಪಾದನಾಶಕ್ತಿಗಳ ಬೆಳವಣಿಗೆಯ ಒಂದು ನಿರ್ದಿಷ್ಟ ಹಂತಕ್ಕೆ ಅನುಗುಣವಾದ ಸಂಬಂಧಗಳು. ಸಮಾಜದ ಆರ್ಥಿಕ ರಚನೆ ಎಂಬುದು ಈ ಉತ್ಪಾದನಾ ಸಂಬಂಧಗಳ ಒಟ್ಟು ಮೊತ್ತವೇ ಹೊರತು ಬೇರೇನಲ್ಲ. ಇದೇ ಸಮಾಜದ ನಿಜವಾದ ಅಡಿಗಲ್ಲು. ಈ ಅಡಿಗಲ್ಲಿನ ಮೇಲೆ ಸಮಾಜದ ರಾಜಕೀಯ ಮತ್ತು ನ್ಯಾಯವಿಧಾಯಕ ಮೇಲ್ಮನೆ ಎದ್ದೇಳುತ್ತದೆ. ಆಯಾ ಕಾಲದ ಸಾಮಾಜಿಕ ಪ್ರಜ್ಞೆಯ ನಿರ್ದಿಷ್ಟ ರೂಪಗಳೂ ಇದಕ್ಕೆ ಅನುಗುಣವಾಗಿರುತ್ತವೆ. ಹೀಗೆ ಮಾನವನ ಸಾಮಾಜಿಕ, ರಾಜಕೀಯ ಮತ್ತು ಬೌದ್ಧಿಕ ಜೀವನ, ಅವನ ಜೀವನಾವಶ್ಯಕತೆಗಳ ಉತ್ಪಾದನಾ ವಿಧಾನವನ್ನು ಹೊಂದಿಕೊಂಡಿದೆ. ಅಂದರೆ, ಮಾನವನ ಜೀವನವನ್ನು ರೂಪಿಸುವುದು ಆತನ ಪ್ರಜ್ಞೆಯಲ್ಲ; ತದ್ವಿರುದ್ಧವಾಗಿ ಆ ಪ್ರಜ್ಞೆಯೇ ಸಾಮಾಜಿಕ ಜೀವನದಿಂದ ರೂಪಿಸಲ್ಪಡುತ್ತದೆ.

**ಸಾಮಾಜಿಕ ಘರ್ಷಣೆಯ ಮೂಲ**

"ಬೆಳವಣಿಗೆಯ ಒಂದು ಹಂತದಲ್ಲಿ ಸಮಾಜದ ಉತ್ಪಾದನಾ ಶಕ್ತಿಗಳಿಗೆ, ಆಗ ಅಸ್ತಿತ್ವದಲ್ಲಿರುವ ಉತ್ಪಾದನಾ ಸಂಬಂಧಗಳು ತಡೆಯಾಗಿ ಬರುತ್ತವೆ. ಅಥವಾ ಕಾನೂನಿನ ಪರಿಭಾಷೆಯಲ್ಲಿ ಹೇಳುವುದಾದರೆ, ಯಾವ ಆಸ್ತಿ ಸಂಬಂಧಗಳ ಚೌಕಟ್ಟಿನಲ್ಲಿ ಉತ್ಪಾದನಾ ಶಕ್ತಿಗಳೂ ಆತನಕ ಬೆಳೆದು ಬಂದಿವೆಯೋ, ಅಂತಹ ಆಸ್ತಿ ಸಂಬಂಧಗಳು ಅವುಗಳ ಮುಂದಿನ ಬೆಳವಣಿಗೆಗೆ ಅಡ್ಡಿಯಾಗುತ್ತವೆ. ಉತ್ಪಾದನಾ ಶಕ್ತಿಗಳ ಅಭಿವೃದ್ಧಿಗೆ ಸಾಧನ ರೂಪವಾಗುವುದಕ್ಕೆ ಬದಲಾಗಿ ಈ ಆಸ್ತಿ ಸಂಬಂಧಗಳು ಅವುಗಳನ್ನು ಬಿಗಿ ಹಿಡಿಯುವ ಶೃಂಖಲೆಗಳಾಗಿ ಪರಿಣಮಿಸುತ್ತವೆ. ಆಗ ಕ್ರಾಂತಿಯ ಕಾಲಘಟ್ಟ ಪ್ರಾರಂಭವಾಗುತ್ತದೆ. ಸಮಾಜದ ಆರ್ಥಿಕ ಅಡಿಕಟ್ಟಿನಲ್ಲಿ ಉಂಟಾಗುವ ಬದಲಾವಣೆಗಳು ಅದರ ಸಂಪೂರ್ಣ ಮೇಲ್ಮನೆಯನ್ನೇ ಬದಲಾಯಿಸಲು ಕಾರಣ ವಾಗುತ್ತವೆ. ಉತ್ಪಾದನೆಯ ಆರ್ಥಿಕ ಪರಿಸ್ಥಿತಿಯ ಬದಲಾವಣೆಯಿಂದಾಗಿ, ಉತ್ಪಾದನಾ ವಿಧಾನ ಮತ್ತು ಉತ್ಪಾದನಾ ಸಂಬಂಧಗಳ ನಡುವೆ ಮೂಡುವ ಘರ್ಷಣೆಯೇ ಈ ಸಾಮಾಜಿಕ ಪರಿವರ್ತನೆಯ ಮೂಲ. ಮಾನವರಲ್ಲಿ ಈ ಘರ್ಷಣೆಯ ಅರಿವು ರಾಜಕೀಯ, ಧಾರ್ಮಿಕ, ದಾರ್ಶನಿಕ ಅಥವಾ ನ್ಯಾಯವಿಧಾಯಕ – ಇವೇ ಮುಂತಾದ ವೈಚಾರಿಕ ರೂಪಗಳನ್ನು ತಳೆದು, ಅದನ್ನು ಪರಿಹರಿಸುವ ಹೋರಾಟ ಈ ಮಟ್ಟದಲ್ಲಿ ನಡೆಯುತ್ತದೆ. ಆದರೆ, ಯಾವುದೇ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಉತ್ಪಾದನಾ ಶಕ್ತಿಗಳ ಬೆಳವಣಿಗೆ ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟರ ಮಟ್ಟವನ್ನು ಅದು ಮುಟ್ಟುವ ತನಕ ಆ ವ್ಯವಸ್ಥೆ ನಾಶವಾಗಲಾರದು. ಹಾಗೆಯೇ ಹಿಂದಿನ ಉತ್ಪಾದನಾ ಸಂಬಂಧಗಳು ಕೂಡ, ಹಳೆ ಸಮಾಜದ ಗರ್ಭದಲ್ಲಿ ಅದಕ್ಕನುಗುಣವಾದ ಆರ್ಥಿಕ ಪರಿಸ್ಥಿತಿಗಳು ಪಕ್ವವಾಗದೆ ಮೂಡಿಬರಲಾರವು.

"ಆದುದರಿಂದ ತನಗೆ ನಿರ್ವಹಿಸಲು ಸಾಧ್ಯವಾದ ಕಾರ್ಯಗಳನ್ನು ಮಾತ್ರ ಮಾನವ ಕುಲ ಕೈಗೊಳ್ಳುತ್ತದೆ. ಏಕೆಂದರೆ, ಸಮಸ್ಯೆ ಉದ್ಭವಿಸುವುದೇ ಅದರ ಪರಿಹಾರಕ್ಕೆ ಅನುಕೂಲಕರವಾದ ವಾಸ್ತವ ಪರಿಸ್ಥಿತಿ. ಒಂದೋ ಅಸ್ತಿತ್ವದಲ್ಲಿದ್ದಾಗ ಅಥವಾ ಅಸ್ತಿತ್ವಕ್ಕೆ ಬರಲು ಪ್ರಾರಂಭವಾದಾಗ ಮಾತ್ರ. ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇದು ಯಾರಿಗಾದರೂ ವೇದ್ಯವಾಗುವ ಸಂಗತಿ.

**ಸಮಾಜ ಪರಿವರ್ತನೆ**

"ಹೀಗೆ ಸಮಾಜದ ಆರ್ಥಿಕ ಬೆಳವಣಿಗೆಯಲ್ಲಿ ಸ್ಥೂಲವಾಗಿ ನಾಲ್ಕು ಕಾಲಘಟ್ಟ ಗಳನ್ನು ನಾವು ಗುರುತಿಸಬಹುದು. ಅವು ಪ್ರಾಚೀನ, ಏಷಿಯಾಟಿಕ್, ಪಾಳೆಯಗಾರೀ ಮತ್ತು ಆಧುನಿಕ ಬಂಡವಾಳಶಾಹೀ ಉತ್ಪಾದನಾ ವಿಧಾನಗಳು. ಪರಸ್ಪರ ವೈರುಧ್ಯ ಗಳಿಂದ ಕೂಡಿದ ಉತ್ಪಾದನಾ ವಿಧಾನದ ರೂಪಗಳಲ್ಲಿ ಬಂಡವಾಳಶಾಹೀ ವಿಧಾನವೇ ಕೊನೆಯದು. ಬಂಡವಾಳಶಾಹೀ ಸಮಾಜದ ಗರ್ಭದಲ್ಲಿ ಬೆಳೆಯುತ್ತಿರುವ ಉತ್ಪಾದನಾ ಶಕ್ತಿಗಳೇ ಈ ವೈರುಧ್ಯದ ಪರಿಹಾರಕ್ಕೆ ಅನುಕೂಲಕರವಾದ ಆರ್ಥಿಕ ಸನ್ನಿವೇಶವನ್ನೂ ಸೃಷ್ಟಿಸುತ್ತವೆ. ಈ ಸಾಮಾಜಿಕ ವ್ಯವಸ್ಥೆಯ ಅಂತ್ಯದೊಂದಿಗೆ ಮಾನವ ಸಮಾಜದ ಇತಿಹಾಸಪೂರ್ವ ಯುಗವೂ ಅಂತ್ಯವಾಗುತ್ತದೆ." (ಮಾರ್ಕ್ಸ್ ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೆ ಒಂದು ಕೊಡುಗೆ – ಮುನ್ನುಡಿ).

**ಪರಿವರ್ತನೆಯ ಸಾಧನ**

ಮಾರ್ಕ್ಸ್‌ರವರ ಈ ನಿರೂಪಣೆ ಎಷ್ಟು ಸತ್ಯವೆಂಬುದನ್ನು ಕಳೆದ ೧೦೦ ವರ್ಷಗಳ ಇತಿಹಾಸ ತೋರಿಸಿಕೊಟ್ಟಿದೆ. ಜಗತ್ತಿನ ಮೂರನೇ ಒಂದು ಭಾಗದಲ್ಲಿ ಬಂಡವಾಳಶಾಹೀ ಪದ್ಧತಿ ಈಗಾಗಲೇ ಅಂತ್ಯವಾಗಿದೆ. ಇತಿಹಾಸಪೂರ್ವ ಯುಗ ಅಲ್ಲಿ ಕೊನೆಗೊಂಡಿದೆ. ಹೊಸ ಸಮಾಜವಾದೀ ಯುಗ ಅಲ್ಲಿ ಕಾಲಿಟ್ಟಿದೆ. ಜಗತ್ತಿನ ಉಳಿದ ಭಾಗಗಳಲ್ಲಿ ಕೂಡ ಕ್ರಾಂತಿಯ ಕಾಲಘಟ್ಟ ಆರಂಭವಾಗಿ ಬಂಡವಾಳಶಾಹೀ ಯುಗದ ಅಂತ್ಯಕ್ಕೆ ಸಮಯ ಸನ್ನಿಹಿತವಾಗಿದೆ. ಇದನ್ನು ಅಂತ್ಯಗೊಳಿಸುವ ಮುಖ್ಯ ಸಾಧನವೇ ಆಧುನಿಕ ಕೈಗಾರಿಕಾ ಕಾರ್ಮಿಕ ವರ್ಗ. ಏಕೆ ?

ಅದು ಬಂಡವಾಳಶಾಹೀ ಪದ್ಧತಿಯಿಂದಲೇ ಅನಿವಾರ್ಯವಾಗಿ ಸೃಷ್ಟಿಸಲ್ಪಟ್ಟ ವರ್ಗ. ಸಮುದ್ರ ಮಥನ ಕಾಲದಲ್ಲಿ ವಿಷದೊಂದಿಗೆ ಅಮೃತವೂ ಹುಟ್ಟಿದಂತೆ ಇತಿಹಾಸ ಮಂಥನದಲ್ಲಿ ಬಂಡವಾಳಶಾಹೀ ವರ್ಗ ಮತ್ತು ಸಮಾಜಗಳ ಉದಯದೊಂದಿಗೇ ಕಾರ್ಮಿಕ ವರ್ಗವೂ ಹುಟ್ಟಿ ಬೆಳೆದಿದೆ. ತನ್ನ ಹುಟ್ಟಿನಿಂದಲೇ ಬಂಡವಾಳಶಾಹೀ ವರ್ಗದ ವಿರುದ್ಧ ಅದು ಹೋರಾಡುತ್ತಲೂ ಬಂದಿದೆ. ಆದಕಾರಣ ಬಂಡವಾಳಶಾಹೀ ವರ್ಗದ ಬಗ್ಗೆ ಯಾವ ಭ್ರಮೆಯೂ ಇಲ್ಲದಿರುವ ವರ್ಗ ಅದೊಂದೇ. ಹಾಗೆಯೇ ಇಂದಿನ ರಾಜ್ಯದ ನಿಜವಾದ ಬಂಡವಾಳಶಾಹೀ ವರ್ಗ ಸ್ವರೂಪ ಮತ್ತು ಅದನ್ನು ತಮ್ಮ ಹಿಡಿತದಲ್ಲಿ ಉಳಿಸಿಕೊಳ್ಳಲು ಬಂಡವಾಳಶಾಹೀ ವರ್ಗ ಹೂಡುವ ತಂತ್ರಗಳನ್ನು ಕಾರ್ಮಿಕ ವರ್ಗದಷ್ಟು ಸುಲಭವಾಗಿ ಅಥವಾ ಶೀಘ್ರವಾಗಿ ಅರಿಯಲು ಬೇರೆ ಜನ ವಿಭಾಗಗಳಿಂದ ಸಾಧ್ಯವಿಲ್ಲ.

**ಅತ್ಯಂತ ಶೋಷಿತ ವರ್ಗ**

ಎರಡನೆಯದಾಗಿ, ಬಂಡವಾಳಶಾಹೀ ಸಾಮಾಜಿಕ ವ್ಯವಸ್ಥೆಯಲ್ಲಿ ಉತ್ಪಾದನಾ ಸಂಬಂಧಗಳ ನಡುವೆ ಇರುವ ವೈರುಧ್ಯದಿಂದ ಅತ್ಯಂತ ನೇರವಾಗಿ ಮತ್ತು ಎಲ್ಲರಿಗಿಂತ ಹೆಚ್ಚಾಗಿ ಶೋಷಿಸಲ್ಪಡುವ ವಿಭಾಗವೇ ಕೈಗಾರಿಕಾ ಕಾರ್ಮಿಕ ವರ್ಗ. ಬಂಡವಾಳಶಾಹೀ ಮಾಲಕನ ಲಾಭಕ್ಕೆ ಮತ್ತು ತನ್ಮೂಲಕ ಸಮಗ್ರ ಬಂಡವಾಳಶಾಹೀ ಸಮಾಜದ ಅಸ್ತಿತ್ವಕ್ಕೆ ಕಾರ್ಮಿಕನ ದುಡಿಮೆಯಿಂದ ಹಿಂಡಲ್ಪಡುವ ಹೆಚ್ಚುವರಿ ಮೌಲ್ಯವೇ ಮೂಲ. ಈ ವಿಷಯವಾಗಿ ಲೆನಿನ್‌ರವರ ಕೆಲವು ಮಾತುಗಳನ್ನು ಈ ಸಂದರ್ಭದಲ್ಲಿ ಜ್ಞಾಪಿಸುವುದು ಅಗತ್ಯ.

**ಲೆನಿನರ ನುಡಿ**

"ಕೈಗಾರಿಕಾ ಕಾರ್ಮಿಕರ ಶೋಷಣೆ ಇತರ ದುಡಿಯುವ ಜನರ ಶೋಷಣೆಗಿಂತ ಭಿನ್ನವಾದುದು. ಅದು ದೊಡ್ಡ ಪ್ರಮಾಣದಲ್ಲಿ ನಡೆಯುವ ಸಾಮುದಾಯಿಕ ಮತ್ತು ಕೇಂದ್ರೀಕೃತ ಶೋಷಣೆ. ಇತರ ದುಡಿಯುವ ಜನರ ಶೋಷಣೆ ಇನ್ನೂ ಮಧ್ಯಕಾಲೀನ ರೂಪಗಳಲ್ಲಿ ನಡೆಯುತ್ತಿದ್ದು, ಬೇರೆ ಬೇರೆ ರಾಜಕೀಯ, ಧಾರ್ಮಿಕ, ನ್ಯಾಯ, ನೈತಿಕ ಅಥವಾ ಸಾಂಪ್ರದಾಯಿಕ ಮುಸುಕು ಮತ್ತು ಮೋಸಗಳಿಂದ ಅದು

ಮರೆಮಾಚಲ್ಪಟ್ಟಿರುತ್ತದೆ. ತಮ್ಮನ್ನು ಮರ್ದಿಸುವ ಈ ವ್ಯವಸ್ಥೆಯ ತಿರುಳನ್ನು ಶೋಧಿಸಿ, ಅದರಿಂದ ಹೊರಬರುವ ದಾರಿ ಯಾವುದು, ಎಲ್ಲಿದೆ ಎಂಬುದನ್ನು ಕಂಡುಹಿಡಿಯಲು ದುಡಿಯುವ ಜನರಿಗೆ ಮತ್ತು ಅವರ ಸಿದ್ಧಾಂತಿಗಳಿಗೆ ಇದೊಂದು ತಡೆಯಾಗಿ ಪರಿಣಮಿಸುತ್ತದೆ. ಆದರೆ, ಕೈಗಾರಿಕಾ ಕಾರ್ಮಿಕರ ಶೋಷಣೆಯ ವಿಷಯದಲ್ಲಿ ಇಂತಹ ಗಲಿಬಿಲಿಗೆ ಅವಕಾಶವಿಲ್ಲ. ಅಲ್ಲಿ ಶೋಷಣೆಯ ವಿಧಾನ ಸಂಪೂರ್ಣ ಪ್ರಬುದ್ಧವಾಗಿದ್ದು, ತನ್ನ ಶುದ್ಧ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ತನ್ನನ್ನು ಮರ್ದಿಸುತ್ತಿರುವುದು ಬಂಡವಾಳ ಮತ್ತು ತನ್ನ ಹೋರಾಟ ನಡೆಯಬೇಕಾಗಿರುವುದು ಬಂಡವಾಳಶಾಹೀ ವರ್ಗದ ವಿರುದ್ಧ ಎಂಬುದು ಕಾರ್ಮಿಕನ ಕಣ್ಣಿಗೆ ಬೀಳದಿರಲು ಸಾಧ್ಯವೇ ಇಲ್ಲ. ತಮ್ಮ ತಕ್ಷಣದ ಆರ್ಥಿಕ ಅವಶ್ಯಕತೆಗಳನ್ನು ತೃಪ್ತಿಪಡಿಸಿ, ತಮ್ಮ ಜೀವನ ಪರಿಸ್ಥಿತಿಯನ್ನು ಉತ್ತಮ ಗೊಳಿಸುವುದೇ ಈ ಹೋರಾಟದ ಗುರಿಯಾಗಿದ್ದರೂ, ಅದಕ್ಕೋಸ್ಕರ ಕಾರ್ಮಿಕರು ತಮ್ಮನ್ನು ತಾವೇ ಸಂಘಟಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಅಂತೆಯೇ ಈ ಹೋರಾಟ ಕೆಲವು ವ್ಯಕ್ತಿಗಳ ವಿರುದ್ಧವಾದ ಹೋರಾಟವಾಗಿ ಉಳಿಯದೆ, ದುಡಿಯುವ ಜನರನ್ನು ಕಾರ್ಖಾನೆಗಳಲ್ಲಿ ಮಾತ್ರವಲ್ಲ, ಎಲ್ಲ ಕಡೆಗಳಲ್ಲಿಯೂ ಮರ್ದಿಸಿ ತುಳಿಯುತ್ತಿರುವ ಒಂದು ವರ್ಗದ ವಿರುದ್ಧವಾದ ಹೋರಾಟವಾಗಿ ಪರಿಣಮಿಸುವುದು ಕೂಡ ಅಷ್ಟೇ ಅನಿವಾರ್ಯವಾಗುತ್ತದೆ. ಆದುದರಿಂದಲೇ ಕೈಗಾರಿಕಾ ಕಾರ್ಮಿಕನೆಂದರೆ, ಆತ ಸಮಗ್ರ ಶೋಷಿತ ಜನತೆಯ ಅತ್ಯುನ್ನತ ಪ್ರತಿನಿಧಿ." ("ಜನತೆಯ ಮಿತ್ರರ" ನಿಜಸ್ವರೂಪ).

ಮೂರನೆಯದಾಗಿ, ಕಾರ್ಖಾನೆಗಳಲ್ಲಿ ಸಾಮೂಹಿಕವಾಗಿ ಮತ್ತು ಶಿಸ್ತುಬದ್ಧವಾಗಿ ದುಡಿಯುವುದರಿಂದ ಕಾರ್ಮಿಕ ವರ್ಗದಲ್ಲಿ ಶಿಸ್ತು, ಸಂಯಮ, ಕಷ್ಟ ಸಹಿಷ್ಣುತೆ, ಸಾಮೂಹಿಕ ಕಾರ್ಯಾಚರಣೆಯ ಪ್ರವೃತ್ತಿ ಮತ್ತು ಐಕ್ಯ ಭಾವನೆಗಳು ಇತರ ಶೋಷಿತ ಜನ ವಿಭಾಗಗಳಿಂದ ಹೆಚ್ಚು ರೂಢಮೂಲವಾಗಿರುತ್ತವೆ. ಬಂಡವಾಳಶಾಹೀ ವರ್ಗದ ವಿರುದ್ಧ ಕೊನೆತನಕ ಹೋರಾಡಲು ಇವುಗಳೆಲ್ಲ ಅತ್ಯಾವಶ್ಯಕ. ಆದುದರಿಂದ ಈ ಹೋರಾಟಕ್ಕೆ ಇತರರಿಗಿಂತ ಹೆಚ್ಚು ಸುಲಭವಾಗಿ ಮತ್ತು ಸ್ವಾಭಾವಿಕವಾಗಿ ಕಾರ್ಮಿಕ ವರ್ಗ ಅಣಿಯಾಗುತ್ತದೆ.

ನಾಲ್ಕನೆಯದಾಗಿ, ಕಾರ್ಮಿಕ ವರ್ಗವು ಉತ್ಪಾದನಾ ಸಾಧನಗಳ ಒಡೆತನದಿಂದ ಸಂಪೂರ್ಣ ವಿರಹಿತವಾಗಿರುವ ವರ್ಗ. ಆದಕಾರಣ ಬಂಡವಾಳಶಾಹೀ ಪದ್ಧತಿಯನ್ನು ಕೊನೆಗೊಳಿಸಲು ಹೋರಾಟಕ್ಕೆ ಮುಂದಾಗುವುದರಿಂದ ಅದಕ್ಕೆ 'ತನ್ನ ಪಾಶಗಳ ನಾಶವೇ ಹೊರತು ಬೇರೇನೂ ನಷ್ಟವಾಗುವ' ಭಯವಿಲ್ಲ.

**ಐತಿಹಾಸಿಕ ಪಾತ್ರ**

ಈ ಎಲ್ಲ ಕಾರಣಗಳಿಂದಾಗಿ ಕಾರ್ಮಿಕ ವರ್ಗವು ಬಂಡವಾಳಶಾಹೀ ಪದ್ಧತಿಯನ್ನು ಅತ್ಯಂತ ದೃಢವಾಗಿ, ಸಂಘಟಿತವಾಗಿ ಮತ್ತು ನಿರ್ಭಯವಾಗಿ ವಿರೋಧಿಸುವ ವರ್ಗ. ಮಾರ್ಕ್ಸ್‌ರವರು ಹೇಳಿರುವಂತೆ ಪರಿಸ್ಥಿತಿ ಪಕ್ವವಾದಾಗ ಇತರ ಶೋಷಿತ ಜನ ವಿಭಾಗಗಳೊಂದಿಗೆ ಜೊತೆಗೂಡಿ, ಅವರಿಗೆ ನೇತೃತ್ವ ನೀಡಿ, "ಬಂಡವಾಳಶಾಹೀ ಪದ್ಧತಿಗೆ ಗೋರಿ ತೋಡುವುದೇ" ಅದರ ಐತಿಹಾಸಿಕ ಪಾತ್ರ. ಸಮಾಜವಾದೀ ಪದ್ಧತಿಯ ನಿರ್ಮಾಣಕ್ಕೆ ನಾಂದಿಯಾಗಿ, ದುಡಿಯುವ ಜನರ ರಾಜ್ಯಾಧಿಕಾರವನ್ನು ಸ್ಥಾಪಿಸುವುದೇ ಅದರ ಪ್ರಥಮ ಗುರಿ.

ಆದರೆ, ಈ ಗುರಿ ಸಾಧನೆ ತನ್ನಿಂತಾನೆ ಆಗಲಾರದು. ಪರಿಸ್ಥಿತಿ ಎಷ್ಟು ಪಕ್ವವಾದರೂ ಕೂಡ, ರಾಜ್ಯಾಧಿಕಾರ ತಾನಾಗಿಯೇ ಕಾರ್ಮಿಕ ವರ್ಗದ ಕೈಗಳಿಗೆ ಬೀಳಲಾರದು. ಅದಕ್ಕೆ ತೀವ್ರವಾದ ಸಂಘಟಿತ ಹೋರಾಟ ಅಗತ್ಯ. ಈ ಹೋರಾಟದಲ್ಲಿ ಟ್ರೇಡ್ ಯೂನಿಯನ್ ಸಂಘಟನೆ ಕಾರ್ಮಿಕ ವರ್ಗದ ಒಂದು ಶಸ್ತ್ರ. ಕಮ್ಯೂನಿಸ್ಟ್ ಪಾರ್ಟಿ ಅದರ ಇನ್ನೊಂದು ಶಸ್ತ್ರ. ಆದರೆ, ಕಮ್ಯೂನಿಸ್ಟ್ ಪಾರ್ಟಿಯು ಕಾರ್ಮಿಕ ವರ್ಗದ ಅತ್ಯಂತ ಸಮರಶೀಲ ಮತ್ತು ಪ್ರಜ್ಞಾ ಪೂರ್ಣ ವಿಭಾಗಗಳನ್ನೊಳಗೊಂಡ ಹೆಚ್ಚು ಉನ್ನತ ಮಟ್ಟದ ರಾಜಕೀಯ ಸಂಘಟನೆಯಾದರೆ, ಟ್ರೇಡ್ ಯೂನಿಯನ್ ಅದಕ್ಕಿಂತ ಕೆಳಗಿನ ಮಟ್ಟದ ಸಂಘಟನೆ.

**ಟ್ರೇಡ್ ಯೂನಿಯನ್ ಎಂದರೇನು ?**

ಟ್ರೇಡ್ ಯೂನಿಯನ್ ಎಂದರೇನು ? ಸೈದ್ಧಾಂತಿಕವಾಗಿ ಅದು ಒಂದೇ ವೃತ್ತಿಯಲ್ಲಿ ತೊಡಗಿರುವ, ಅಂದರೆ ಒಂದೇ ಕೈಗಾರಿಕೆಯಲ್ಲಿ ದುಡಿಯುವ ಎಲ್ಲ ಕಾರ್ಮಿಕರನ್ನೂ ಒಳಗೊಳ್ಳಬೇಕಾದ ಸಂಘಟನೆ. ಆದರೆ, ಬೇರೆ ಬೇರೆ ಕಾರಣ ಗಳಿಂದಾಗಿ ಕಾರ್ಯತಃ ಎಲ್ಲ ಕಾರ್ಮಿಕರೂ ಟ್ರೇಡ್ ಯೂನಿಯನ್‌ಗಳಲ್ಲಿ ಸಂಘಟಿತ ರಾಗುವುದು ಅಪರೂಪ. ಅನೇಕ ಟ್ರೇಡ್ ಯೂನಿಯನ್‌ಗಳು ಒಂದೇ ಕಾರ್ಖಾನೆಯ ಕಾರ್ಮಿಕರಿಗೆ ಮಾತ್ರ ಸೀಮಿತವಾಗಿರುವುದೂ ಉಂಟು. ಅದೇನಿದ್ದರೂ ಟ್ರೇಡ್ ಯೂನಿಯನ್ ಪ್ರವೇಶಕ್ಕೆ ಎಲ್ಲ ಕಾರ್ಮಿಕರೂ ಅರ್ಹರಾಗಿರುವುದರಿಂದ, ಅದು ಕಾರ್ಮಿಕ ವರ್ಗದ ಪ್ರಾಥಮಿಕ ಸಂಘಟನೆ, ಕಾರ್ಮಿಕರ ಸಾಮುದಾಯಿಕ ಸಂಘಟನೆ.

ಕಾರ್ಮಿಕರ ತಕ್ಷಣದ ಆರ್ಥಿಕ ಬೇಡಿಕೆಗಳನ್ನು ಪಡೆಯುವ ಸಲುವಾಗಿ ಹೋರಾಡಲು ಟ್ರೇಡ್ ಯೂನಿಯನ್ ಸಂಘಟನೆ ಹುಟ್ಟಿಕೊಳ್ಳುತ್ತದೆ ಎಂದು ಲೆನಿನ್ ಹೇಳಿದುದನ್ನು ನಾವು ಹಿಂದೆ ನೋಡಿದ್ದೇವೆ. ಈ ಹುಟ್ಟುಗುಣದಿಂದಾಗಿ ಅದು ಬಂಡವಾಳಶಾಹೀ ಮಾಲೀಕನಿಗೆ ಮತ್ತು ಅವನ ಲಾಭಗಳಿಗೆ ಎದುರಾಗಿ ನಿಂತಿರುವ ಸಂಘಟನೆ. ಆದ ಕಾರಣ ಅಂತಿಮವಾಗಿ ಅದು ಬಂಡವಾಳಶಾಹೀ ಪದ್ಧತಿಗೇ ಎದುರಾದ ಸಂಘಟನೆ.

ಈ ದೃಷ್ಟಿಯಿಂದ ಟ್ರೇಡ್ ಯೂನಿಯನ್ ಚಳವಳಿ ಅತ್ಯಂತ ಪ್ರಾಮುಖ್ಯವಾದ ಚಳವಳಿ. ಅದು ಕಾರ್ಮಿಕರ ಸಾಮುದಾಯಿಕ ಚಳವಳಿ, ಅವರ ಆರ್ಥಿಕ ಹೋರಾಟದ ಒಂದು ಆಯುಧ, ಅವರಿಗೆ ರಾಜಕೀಯ ತರಬೇತಿ ನೀಡುವ ಒಂದು ಶಾಲೆ, ಕಮ್ಯೂನಿಸ್ಟ್ ಸಂಘಟನೆಗೆ ಒಂದು ಸೋಪಾನ.

**ಅಂತರರಾಷ್ಟ್ರೀಯ ಚಳವಳಿ**

ಆದುದರಿಂದಲೇ ಮಾರ್ಕ್ಸ್ ಮತ್ತು ಎಂಗೆಲ್ಸ್‌ರವರು ಕೇವಲ ಸಿದ್ಧಾಂತ ಬೋಧನೆಯಿಂದ ಮಾತ್ರ ತೃಪ್ತರಾಗದೆ, ಕಾರ್ಮಿಕ ಸಂಘಟನೆಗೆ ಬಹಳ ಮಹತ್ವ ನೀಡಿದ್ದರು. ೧೮೬೪ರಲ್ಲಿ ಅಂದಿನ ಪ್ರಮುಖ ಬಂಡವಾಳಶಾಹೀ ದೇಶಗಳ ಟ್ರೇಡ್ ಯೂನಿಯನ್ ಚಳವಳಿಗಳನ್ನು ಒಂದುಗೂಡಿಸಲು 'ದುಡಿಯುವ ಜನರ ಅಂತರ ರಾಷ್ಟ್ರೀಯ ಸಂಘ'ವೊಂದನ್ನು ಅವರು ಸ್ಥಾಪಿಸಿದರು. 'ಪ್ರಥಮ ಅಂತರರಾಷ್ಟ್ರೀಯ' ವೆಂದು ಈ ಸಂಘ ಇತಿಹಾಸದಲ್ಲಿ ಪ್ರಖ್ಯಾತವಾಗಿದೆ. ೧೮೬೪ರಿಂದ ೧೮೭೨ರತನಕ ಈ ಸಂಘ ಅಸ್ತಿತ್ವದಲ್ಲಿದ್ದಷ್ಟು ಕಾಲವೂ ಮಾರ್ಕ್ಸ್ ಮತ್ತು ಎಂಗೆಲ್ಸ್‌ರವರು ತಮ್ಮ ಸರ್ವಶಕ್ತಿಯನ್ನೂ ಅದಕ್ಕೆ ಧಾರೆಯೆರೆದಿದ್ದರು. ಅದರ ದೈನಂದಿನ ಚಟುವಟಿಕೆಗಳಲ್ಲಿ ಭಾಗವಹಿಸಿ, ಸಂಘದ ವಿವಿಧ ರಾಷ್ಟ್ರೀಯ ಘಟಕಗಳಿಗೆ ಅವರು ಮಾರ್ಗದರ್ಶನ ನೀಡುತ್ತಿದ್ದರು. ಕಾರ್ಮಿಕರ ರಾಜಕೀಯ ಪ್ರಜ್ಞೆಯನ್ನು ಬೆಳೆಸಲು ಅವರು ಸದಾ ಪ್ರಯತ್ನಿಸುತ್ತಿದ್ದರು.

ಅಂದು ಜಗತ್ತಿನ ಕೈಗಾರಿಕಾ ಕಾರ್ಮಿಕರ ಸಂಖ್ಯೆ ಒಂದು ಕೋಟಿಗಿಂತ ಹೆಚ್ಚಿರಲಿಲ್ಲ. ಟ್ರೇಡ್ ಯೂನಿಯನ್ ಚಳವಳಿ ಯೂರೋಪಿನ ಕೆಲವು ರಾಷ್ಟ್ರಗಳಿಗೆ ಮತ್ತು ಅಮೆರಿಕಕ್ಕೆ ಮಾತ್ರ ಸೀಮಿತವಾಗಿತ್ತಷ್ಟೆ. ಆದರೆ, ಇಂದು ಈ ಚಳವಳಿ ಜಗದ್ವ್ಯಾಪಿಯಾಗಿ ಸುಮಾರು ೬೦ ಕೋಟಿ ಕಾರ್ಮಿಕರನ್ನೊಳಗೊಂಡಿದೆ. ಕಾರ್ಮಿಕ ವರ್ಗದ ಪದಾಘಾತಕ್ಕೆ ಬಂಡವಾಳಶಾಹೀ ಜಗತ್ತು ಕಂಪಿಸತೊಡಗಿದೆ.

ಭಾರತದ ಕಾರ್ಮಿಕ ಚಳವಳಿ ಈ ಜಾಗತಿಕ ಚಳವಳಿಯ ಒಂದು ಭಾಗ. ಕರ್ನಾಟಕದ ಟ್ರೇಡ್ ಯೂನಿಯನ್ ಚಳವಳಿ ಭಾರತದ ಟ್ರೇಡ್ ಯೂನಿಯನ್ ಚಳವಳಿಯ ಒಂದು ಅವಿಭಾಜ್ಯ ಅಂಗ.

*(ಮುಂದುವರಿಯುವುದು)*

# ಯುವ ಕರ್ನಾಟಕದ ಉದ್ಯೋಗ ಮತ್ತು ಆದಾಯ ವಂಚನೆ

ಬಿ. ರಾಜಶೇಖರಮೂರ್ತಿ



ರಾಜ್ಯ ಸರ್ಕಾರ ಕಳೆದ ವಿಧಾನಸಭಾ ಅಧಿವೇಶನದಲ್ಲಿ ಹೇಳಿಕೊಂಡಂತೆಯೇ ೧,೯೪,೦೦೦ ಸರ್ಕಾರಿ ಹುದ್ದೆಗಳು ಖಾಲಿ ಇವೆ. ಈ ಎಲ್ಲಾ ಖಾಲಿ ಹುದ್ದೆಗಳನ್ನು ತುಂಬುವ ಜೊತೆಗೆ ಉದ್ಯೋಗ ಸೃಷ್ಟಿಸುವಂತಹ ಸಾರ್ವಜನಿಕ ಮತ್ತು ಖಾಸಗಿ ಉದ್ದಿಮೆಗಳನ್ನು ಆರಂಭಿಸಿ, 'ಸ್ವಾತಂತ್ರ್ಯ ಪ್ರಜಾಪ್ರಭುತ್ವದ ಮೂಲಭೂತ ಜವಾಬ್ದಾರಿ'ಯನ್ನು ಕಳೆದ ಐದಾರು ದಶಕಗಳಿಂದ ಅಧಿಕಾರದಲ್ಲಿದ್ದ ಯಾವೊಂದು ರಾಜಕೀಯ ಪಕ್ಷಗಳೂ ನಿರ್ವಹಿಸಿಲ್ಲ. ಬದಲಿಗೆ ಯುವಜನರಿಗೆ ಉದ್ಯೋಗ ವಂಚನೆ, ಯುವಜನರ ಆದಾಯ ವಂಚನೆ, ಉದ್ಯೋಗ ಅಭದ್ರತೆ ಮತ್ತು ಮೂಢನಂಬಿಕೆಗಳತ್ತ ಯುವಜನರನ್ನು ನೂಕುವುದರಲ್ಲಿ ಬಿಜೆಪಿ–ಕಾಂಗ್ರೆಸ್ ಮತ್ತು ಜೆ.ಡಿ.(ಎಸ್.) ಪಕ್ಷಗಳು ಪೈಪೋಟಿಗಿಳಿಯುತ್ತಾ ಬಂದಿವೆ. ಭವಿಷ್ಯದ ಕಣ್ಣೋಟವಿಲ್ಲದೆ, ವೈಜ್ಞಾನಿಕ ಯೋಜನೆ ಇಲ್ಲದೆ, ಕೇವಲ ಅಧಿಕಾರದಾಹದಲ್ಲೇ ಮುಳುಗೇಳುತ್ತಿರುವ ಆಳುವ ಪಕ್ಷಗಳ ಧೋರಣೆಗಳಿಂದ ಯುವಜನರಿಗೆ ಆಗುತ್ತಿರುವ ವಂಚನೆಗಳ ಬಗ್ಗೆ ಹೇಳತೀರದ್ದಾಗಿದೆ. ಉದಾಹರಣೆಗೆ ನಮ್ಮ ಪ್ರಾಥಮಿಕ ಮತ್ತು ಉನ್ನತ ಶಿಕ್ಷಣ ಇಲಾಖೆಯ ಪರಿಸ್ಥಿತಿಯನ್ನು ನೋಡಬಹುದು.

ಸಮಾಜ ವಿಜ್ಞಾನಿಗಳ ಅಭಿಪ್ರಾಯದಂತೆ, ಮಾನವ ಸಮಾಜದ ಅಭಿವೃದ್ಧಿಗೆ ಮೂಲಾಧಾರ ಶಿಕ್ಷಣ. ಈ ಹಿನ್ನೆಲೆಯಲ್ಲಿಯೇ ೧೯೬೬ರಲ್ಲಿ ಕೇಂದ್ರ ಸರ್ಕಾರ ರಚಿಸಿದ್ದ 'ಕೊಠಾರಿ ಆಯೋಗ' ಉತ್ತಮವಾದ ವರದಿಯನ್ನೇ ನೀಡಿತ್ತು. ಇದು ನಮ್ಮ ದೇಶದ ಶಿಕ್ಷಣ ಪರಿಸ್ಥಿತಿಯನ್ನು ಸುಧಾರಿಸಲು ತಕ್ಕ ಶಿಫಾರಸ್ಸು ಎಂಬುದು ಶಿಕ್ಷಣ ತಜ್ಞರ ಅಭಿಪ್ರಾಯವೂ ಆಗಿತ್ತು. ಆದರೆ ಇಂದಿಗೂ ಕೇಂದ್ರ–ರಾಜ್ಯ ಸರ್ಕಾರಗಳು ಕೊಠಾರಿ ಆಯೋಗದ ಶಿಫಾರಸ್ಸನ್ನು ಜಾರಿಗೆ ತರುವ ರಾಜಕೀಯ ಇಚ್ಛಾಶಕ್ತಿಯನ್ನು ಪ್ರದರ್ಶಿಸಲಿಲ್ಲ. ಬದಲಿಗೆ ಶಿಕ್ಷಣ ಕ್ಷೇತ್ರವನ್ನು ಸಾರ್ವಜನಿಕ ಹಿಡಿತದಿಂದ ಕೈತಪ್ಪಿಸಿ ಖಾಸಗಿಯವರ ಹಿಡಿತಕ್ಕೆ ಒಪ್ಪಿಸಲಾಗಿದೆ.

ಹೀಗಾಗಿ ಶಿಕ್ಷಣ ಕ್ಷೇತ್ರದ ಅಭಿವೃದ್ಧಿಯ ದಿಕ್ಕು ತಪ್ಪಿ ಸೊರಗುವ ಪರಿಸ್ಥಿತಿ ಎದುರಾಗಿದೆ. ಈಗಂತೂ ಶಿಕ್ಷಣ ಕ್ಷೇತ್ರವನ್ನು ಸರಿ ದಾರಿಗೆ ತರಲು ಸಾಧ್ಯವಿಲ್ಲ ಎಂಬ ಮಟ್ಟಿಗೆ ಅದು ದಿಕ್ಕೆಟ್ಟಿದೆ ಎಂಬುದಕ್ಕೆ ಶಿಕ್ಷಣ ಇಲಾಖೆಗಳ ಈಗಿನ ಉದ್ಯೋಗದ ದುಸ್ಥಿತಿಯೇ ಸಾಕ್ಷಿ. ಕಳೆದ ಐದು ದಶಕದ ಹಿಂದೆ ಇದ್ದ ಜನಸಂಖ್ಯೆ ಎಷ್ಟು ಇತ್ತು? ಆಗ ಇದ್ದ ಸರ್ಕಾರಿ ಶಾಲಾ–ಕಾಲೇಜುಗಳೆಷ್ಟು? ವೃತ್ತಿಪರ ಕಾಲೇಜುಗಳೆಷ್ಟು? ಇಂದಿನ ಜನಸಂಖ್ಯೆ ಎಷ್ಟು? ಈಗಿನ ಜನಸಂಖ್ಯೆಗೆ ಅನುಗುಣವಾಗಿ ಸರ್ಕಾರಿ ಶಾಲಾ–ಕಾಲೇಜುಗಳು, ವೃತ್ತಿಪರ ಕಾಲೇಜುಗಳ ಸಂಖ್ಯೆಯನ್ನು ಹೆಚ್ಚಿಸಲಾಗಿದೆಯೇ? ಹಾಗೆಯೇ ಖಾಸಗಿ ಶಾಲಾ–ಕಾಲೇಜುಗಳು ಮತ್ತು ವೃತ್ತಿಪರ ಖಾಸಗಿ ಕಾಲೇಜುಗಳು ಕಳೆದ ಐದು ದಶಕಗಳ ಹಿಂದೆ ಎಷ್ಟಿದ್ದವು? ಈಗ ಎಷ್ಟಿವೆ? ಈ ಕುರಿತ ಅಂಕಿಅಂಶಗಳನ್ನು ಪರಾಮರ್ಶಿಸಿ ನೋಡಿದರೆ ಪರಿಸ್ಥಿತಿ ಗಾಬರಿ ಹುಟ್ಟಿಸುತ್ತದೆ.

**೨೦೧೩–೨೦೧೪ರ ಶೈಕ್ಷಣಿಕ ವರ್ಷದಲ್ಲಿ ಸರ್ಕಾರಿ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು**

| ವಿವರ | ಸರ್ಕಾರಿ | ಖಾಸಗಿ | ಒಟ್ಟು |
|---|---|---|---|
| ಪ್ರೌಢಶಾಲೆಗಳು | ೪೯೮೮ | ೯೨೦೬ | ೧೪೧೯೪ |
| ಪ.ಪೂರ್ವ ಕಾಲೇಜುಗಳು | ೧೨೧೬ | ೩೪೬೦ | ೪೬೭೬ |
| ಪದವಿ ಕಾಲೇಜುಗಳು | ೪೦೬ | ೩೧೫ | ೭೨೧ |
| ವಿಶ್ವವಿದ್ಯಾನಿಲಯಗಳು | ೨೩ | ೨೨ | ೪೫ |
| ವೈದ್ಯಕೀಯ ಕಾಲೇಜುಗಳು | ೧೮ | ೩೫ | ೫೩ |
| ದಂತ ವೈದ್ಯಕೀಯ ಕಾಲೇಜುಗಳು | ೨ | ೩೬ | ೩೮ |
| ಇಂಜಿನಿಯರಿಂಗ್ ಕಾಲೇಜುಗಳು | ೧೪ | ೧೯೬ | ೨೧೦ |
| ಪಾಲಿಟೆಕ್ನಿಕ್‌ಗಳು | ೮೧ | ೨೧೬ | ೨೯೭ |
| ಔಷಧಾಲಯ (ಡಿ. ಫಾರ್ಮ) | ೧ | ೬೦ | ೬೧ |

ರಾಜ್ಯ ಸರ್ಕಾರ ಅಗತ್ಯಕ್ಕೆ ಅನುಗುಣವಾಗಿ ಸರ್ಕಾರಿ ಶಾಲಾ–ಕಾಲೇಜುಗಳನ್ನು ಹೆಚ್ಚಿಸುವುದಿರಲಿ, ಐದು ದಶಕದ ಹಿಂದೆ ಇದ್ದ ಸರ್ಕಾರಿ ಶಾಲಾ–ಕಾಲೇಜುಗಳು ಮತ್ತು ವಿದ್ಯಾಲಯಗಳನ್ನು ಉಳಿಸಿಕೊಳ್ಳಲು ಹೆಣಗಾಡುವ ಪರಿಸ್ಥಿತಿ ಉಂಟಾಗಿದೆ. ಕೇಂದ್ರ–ರಾಜ್ಯ ಸರ್ಕಾರಗಳು ಸರ್ಕಾರಿ ಶಾಲಾ–ಕಾಲೇಜುಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗದೆ ಖಾಸಗಿ ಕಾರ್ಪೊರೇಟ್ ಕಂಪನಿಗಳ ಹತ್ತಿರ ಮಂಡಿಯೂರಿ ಕೈಚಾಚುತ್ತಿವೆ. ಉದ್ಭವಿಸಿರುವ ಹಲವಾರು ಗಂಭೀರ ಶೈಕ್ಷಣಿಕ ಸಮಸ್ಯೆಗಳಲ್ಲೊಂದಾದ ಶಿಕ್ಷಕರ ಮತ್ತು ಉಪನ್ಯಾಸಕರ ಕೊರತೆಯ ಬಗ್ಗೆ ಮಾತ್ರ ಈಗ ತಿಳಿಯಲು ಪ್ರಯತ್ನಿಸೋಣ. ನಮ್ಮ ರಾಜ್ಯ ಸರ್ಕಾರದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಪ್ರಕಾರವೇ ೨೫೩೫೨ರಷ್ಟು ಪ್ರಾಥಮಿಕ ಶಾಲಾ ಶಿಕ್ಷಕ ಹುದ್ದೆಗಳು ಖಾಲಿ ಇವೆ. ಕೊಠಾರಿ ಆಯೋಗದ ಶಿಫಾರಸ್ಸಿನಂತೆ ೨೪ ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕರಂತೆ ಲೆಕ್ಕ ಹಾಕಿದರೆ ೩೪ ಸಾವಿರಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಥಮಿಕ ಶಿಕ್ಷಕ ಹುದ್ದೆಗಳು ಖಾಲಿ ಉಳಿಯುತ್ತವೆ. ಪದವಿಪೂರ್ವ ಕಾಲೇಜುಗಳಲ್ಲಿ ೫೮೦೦ ಉಪನ್ಯಾಸಕ ಹುದ್ದೆಗಳು ಖಾಲಿ ಇವೆ. ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಶೇ. ೪೨ರಷ್ಟು ಪ್ರಾಂಶುಪಾಲರ ಹುದ್ದೆಗಳು, ೫೦೦೦ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಪದವಿ ಕಾಲೇಜುಗಳ ಉಪನ್ಯಾಸಕ ಹುದ್ದೆಗಳು, ಇನ್ನು ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಶೇ. ೩೨ರಷ್ಟು ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಖಾಲಿ ಇವೆ. ಜೊತೆಗೆ, ಬೋಧಕೇತರ ವಿಭಾಗಗಳಲ್ಲಿನ ಖಾಲಿ ಹುದ್ದೆಗಳ ಬಗ್ಗೆ

ಪರಿಗಣನೆಯೇ ಇಲ್ಲವಾಗಿದೆ. ಹೀಗಾಗಿಯೇ ಸರ್ಕಾರದ ಎಲ್ಲ ಇಲಾಖೆಗಳಲ್ಲೂ ಒಟ್ಟು ೧,೯೪,೦೦೦ ಖಾಲಿ ಹುದ್ದೆಗಳಿವೆ.

ಇಷ್ಟೊಂದು ಅಧಿಕ ಸಂಖ್ಯೆಯಲ್ಲಿ ಖಾಲಿ ಇರುವ ಹುದ್ದೆಗಳು ನಿನ್ನೆ ಮೊನ್ನೆ ಸೃಷ್ಟಿಯಾದುವಲ್ಲ. ಖಾಲಿ ಹುದ್ದೆಗಳನ್ನು ಆಯಾ ಸಂದರ್ಭದಲ್ಲಿ ಖಾಯಂ ಭರ್ತಿ ಮಾಡಿಕೊಂಡು ಬಂದಿದ್ದರೆ ಇಂತಹ ದುಸ್ಥಿತಿ ಎದುರಾಗುತ್ತಿರಲಿಲ್ಲ. ಬದಲಿಗೆ, ಖಾಯಂ ಉದ್ಯೋಗದ ಪರಿಕಲ್ಪನೆಯನ್ನು ಮರೆಮಾಚಿ ತಾತ್ಕಾಲಿಕವಾಗಿ ಅತ್ಯಂತ ಕಡಿಮೆ ವೇತನಕ್ಕೆ ದುಡಿಸಿಕೊಳ್ಳುವ ಪ್ರವೃತ್ತಿಯನ್ನು ಅನುಸರಿಸಲಾಯಿತು. ಅದರಲ್ಲೂ ೧೯೯೧ರ ನಂತರ ದೇಶದಲ್ಲಿ ಜಾರಿಗೆ ತಂದ ಹೊಸ ಆರ್ಥಿಕ ನೀತಿಗಳಿಂದಾಗಿ ಉದ್ಯೋಗ ಭರ್ತಿಗೆ ನಿರ್ಬಂಧ ಹೇರಲಾಯಿತು. ಹೀಗಾಗಿಯೇ ವಿಶ್ವವಿದ್ಯಾಲಯಗಳಲ್ಲಿ ಖಾಲಿ ಇರುವ ಸಹಾಯಕ ಪ್ರಾಧ್ಯಾಪಕ ಹುದ್ದೆಗಳಿಗೆ ತಾತ್ಕಾಲಿಕ / ಅತಿಥಿ ಎಂಬ ಹೆಸರಿನಲ್ಲಿ ಸಹಾಯಕ ಪ್ರಾಧ್ಯಾಪಕರನ್ನು ನೇಮಿಸಿಕೊಳ್ಳಲಾಗುತ್ತಿದೆ. ಪದವಿ ಕಾಲೇಜುಗಳಲ್ಲಿ ೧೧೬೮೦ ಅತಿಥಿ ಉಪನ್ಯಾಸಕರಿಂದಲೇ ಪದವಿ ಶಿಕ್ಷಣ ನಡೆಯುತ್ತಿರುವುದು. ಪದವಿಪೂರ್ವ ಕಾಲೇಜುಗಳಲ್ಲಿ ೩೦೦೦ ಅತಿಥಿ ಉಪನ್ಯಾಸಕರನ್ನು, ಪ್ರಾಥಮಿಕ ಶಾಲೆಗಳಲ್ಲಿ ೧೬೦೦೦ ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳಲಾಗಿದೆ. ಮುಂದಿನ ಶೈಕ್ಷಣಿಕ ವರ್ಷಕ್ಕೆ ಇನ್ನೂ ೮ರಿಂದ ೧೦ ಸಾವಿರ ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳಬೇಕಾಗುತ್ತದೆಂದು ಪ್ರಾಥಮಿಕ ಶಿಕ್ಷಣ ಸಚಿವರೇ ಹೇಳಿದ್ದಾರೆ. ಇವರಿಗೆ ಮಾಸಿಕ ಕೇವಲ ೪-೧೦ ಸಾವಿರ ವೇತನ ನೀಡಲಾಗುತ್ತಿದೆ. ಈ ವೇತನವನ್ನು ಪ್ರತಿ ತಿಂಗಳು ನೀಡದೆ ವರ್ಷಕ್ಕೆ ಒಂದೆರಡು ಬಾರಿ ಮಾತ್ರ ನೀಡಲಾಗುತ್ತಿದೆ. ಈ ವೇತನವನ್ನು ಪಡೆಯಲು ನತದೃಷ್ಟ ಶಿಕ್ಷಕ-ಉಪನ್ಯಾಸಕರು ಲಂಚ ಕೊಡಬೇಕು. ಹೀಗೆ ಸರ್ಕಾರಿ ಶಿಕ್ಷಣ ಇಲಾಖೆಯಲ್ಲಿ ವಿದ್ಯಾವಂತ ಪದವೀಧರ ಯುವಜನರಿಗೆ ಖಾಯಂ ಉದ್ಯೋಗ ನೀಡದೆ ಅಭದ್ರತೆಯ ತಾತ್ಕಾಲಿಕ ಉದ್ಯೋಗ ನೀಡಲಾಗುತ್ತಿದೆ. ಅತ್ಯಂತ ಕಡಿಮೆ ವೇತನ ನೀಡುತ್ತಾ ಸಾವಿರಾರು ಯುವಜನರನ್ನು ವಂಚಿಸಲಾಗುತ್ತಿದೆ.

ಖಾಸಗಿ ಶಿಕ್ಷಣೋದ್ಯಮಿಗಳ ದರಬಾರಿನಲ್ಲಿರುವ (ಪಟ್ಟಿಯಲ್ಲಿ ಕಾಣಿಸಿರುವಂತೆ) ಪ್ರಾಥಮಿಕ ಮತ್ತು ಪದವಿ ಹಂತದವರೆಗೆ ಕಾಲೇಜುಗಳು, ಡಿಪ್ಲೊಮ, ಇಂಜಿನಿಯರಿಂಗ್, ವೈದ್ಯಕೀಯ, ನರ್ಸಿಂಗ್ ಮುಂತಾದ ಸಾವಿರಾರು ವೃತ್ತಿಪರ ಖಾಸಗಿ ಕಾಲೇಜುಗಳು, ಖಾಸಗಿ ಸ್ವಾಯತ್ತ ಕಾಲೇಜುಗಳು, ಖಾಸಗಿ ವಿಶ್ವವಿದ್ಯಾಲಯಗಳು ಹೀಗೆ ಎಲ್ಲ ಹಂತದ ಖಾಸಗಿ ಶಾಲಾ-ಕಾಲೇಜುಗಳಲ್ಲಿ ದುಡಿಯುತ್ತಿರುವ ಯುವಜನರ ಸ್ಥಿತಿ ಚಿಂತಾಜನಕವಾಗಿದೆ. ಈ ಎಲ್ಲ ಖಾಸಗಿ ಕಾಲೇಜುಗಳ 'ಯಜಮಾನ'ರು ರಾಜಕೀಯ ಪ್ರಭಾವವಿರುವವರು ಮತ್ತು ಶ್ರೀಮಂತರೇ ಆಗಿರುತ್ತಾರೆ. ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿನ ಸ್ವಹಿತಾಸಕ್ತಿ ಕಾಪಾಡುವವರನ್ನೇ ಉದ್ಯೋಗಕ್ಕೆ ನೇಮಿಸಿಕೊಳ್ಳಲಾಗಿದೆ. ಹೀಗಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿಯ ಪ್ರಶ್ನೆಯೇ ಇಲ್ಲ. ಇದರಿಂದಾಗಿಯೂ ಬಡ, ದಲಿತ-ಹಿಂದುಳಿದ ಮತ್ತು ಅಲ್ಪಸಂಖ್ಯಾತ ಯುವಜನ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಅಭದ್ರತೆಯ ಉದ್ಯೋಗಗಳಿಂದಲೂ ವಂಚಿತರಾಗಿದ್ದಾರೆ. ಈ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕೂಡ ಸಮರ್ಪಕವಾಗಿ ಉದ್ಯೋಗ ಭದ್ರತೆ ಒದಗಿಸಿ ಅರ್ಹತೆಗೆ ತಕ್ಕ ವೇತನ ನೀಡುತ್ತಿಲ್ಲ. ಬದಲಿಗೆ, ಯಾವಾಗ ಬೇಕಾದರೂ ಕೆಲಸ ಕಳೆದುಕೊಂಡು ಬೀದಿ ಪಾಲಾಗುವ ಪರಿಸ್ಥಿತಿ ಇದೆ. 'ಅಭಿವ್ಯಕ್ತಿ ಸ್ವಾತಂತ್ರ್ಯ'ದ ಪದವನ್ನೇ ಖಾಸಗಿ ಶಿಕ್ಷಣ ಸಂಸ್ಥೆಗಳಡಿಯಲ್ಲಿ ಎತ್ತುವಂತಿಲ್ಲ. ಹೀಗೆ ಖಾಸಗಿ ಶಿಕ್ಷಣ ಸಂಸ್ಥೆಗಳ ವಿಷಚಕ್ರಕ್ಕೆ ಲಕ್ಷಾಂತರ ಯುವಜನತೆ ಬಲಿಯಾಗಿ ಜೀತದಾಳುಗಳಂತೆ ದುಡಿಯುವ ಪರಿಸ್ಥಿತಿ ಇದೆ. ಹೀಗಾಗಿ ವಿದ್ಯಾವಂತ ಯುವಕ ಯುವತಿಯರು ಕೂಡ ಜೀವನ ನಿರ್ವಹಣೆಗಾಗಿ ಪರಿತಪಿಸುತ್ತಿದ್ದಾರೆ.

ಹೀಗೆ ಸರ್ಕಾರಿ, ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ದುಡಿಯುತ್ತಿರುವವರು, ಎಲ್ಲ ಸರ್ಕಾರಿ ಇಲಾಖೆಯಲ್ಲಿರುವ ಗುತ್ತಿಗೆ ಮತ್ತು ಹೊರಗುತ್ತಿಗೆ ಮುಂತಾದ ಹೆಸರಿನಲ್ಲಿ ದುಡಿಯುತ್ತಿರುವವರು, ಎಲ್ಲ ಸರ್ಕಾರಿ ಇಲಾಖೆಗಳಲ್ಲಿರುವ ಕಂಪ್ಯೂಟರ್ ಆಪರೇಟರ್‌ಗಳು, 'ಡಿ' ದರ್ಜೆ ನೌಕರರು, ಹೌಸ್‌ಕೀಪಿಂಗ್ ಕೆಲಸದವರು, ಸೆಕ್ಯೂರಿಟಿಗಳು, ಖಾಸಗಿ ವಲಯದಲ್ಲಿ ಅಭದ್ರತೆಯ ಆತಂಕದಲ್ಲಿ ದುಡಿಯುತ್ತಿರುವ ಲಕ್ಷಾಂತರ ವಿದ್ಯಾವಂತ ಅರೆವಿದ್ಯಾವಂತ ಯುವಜನರನ್ನು ಒಟ್ಟುಗೂಡಿಸಿದರೆ ಅದರ ಸಂಖ್ಯೆ ಒಂದು ಕೋಟಿಗಿಂತಲೂ ಹೆಚ್ಚು. ಇವರೆಲ್ಲರಿಗೂ ಖಾಯಂ ಉದ್ಯೋಗ ದೊರಕುವಂತಾಗಿ, ಕೈ ತುಂಬ ಸಂಬಳ ಸಿಗುವಂತಾಗಿದ್ದರೆ



ಒಂದು ಕೋಟಿ ಯುವಕ ಯುವತಿಯರ 'ಯುವ ಕರ್ನಾಟಕ'ದ ಜೀವನ ಪರಿಸ್ಥಿತಿ ಹೇಗಿರುತಿತ್ತು ಎಂಬುದನ್ನು ಊಹಿಸಿಕೊಳ್ಳಬಹುದು. ಇಂತಹ ಅವಕಾಶಗಳನ್ನು 'ಯುವ ಕರ್ನಾಟಕ'ದ ಕೈ ತಪ್ಪಿಸಿದ್ದರ ಪರಿಣಾಮದಿಂದಾಗಿ ಈ ಯುವಜನರು ಬಿಟ್ಟಿ ದುಡಿದು ತಮ್ಮ ಭೌತಿಕ ಮತ್ತು ಬೌದ್ಧಿಕ ಪರಿಶ್ರಮವನ್ನು ವ್ಯಯಿಸುವ ಪರಿಸ್ಥಿತಿ ಎದುರಾಗಿದೆ. ಕೇಂದ್ರ-ರಾಜ್ಯ ಸರ್ಕಾರಗಳು ಖಾಯಂ ಉದ್ಯೋಗಿಗಳ ನಿವೃತ್ತಿ ವಯಸ್ಸನ್ನು ೫೮ ವರ್ಷಗಳಿಂದ ಈಗ ೬೦ ವರ್ಷಗಳಿಗೆ ಏರಿಸುವ ಮುಖಾಂತರವೂ ನಿರುದ್ಯೋಗಿ ಯುವಜನರಿಗೆ ಉದ್ಯೋಗ ಸಿಗದಂತೆ ನೋಡಿಕೊಳ್ಳುತ್ತಿವೆ. ಕೆಲವೆಡೆ ನಿವೃತ್ತಿ ಹೊಂದಿರುವ ವೃದ್ಧ ವಯಸ್ಸಿನವರನ್ನು ಪುನರ್‌ನೇಮಿಸಿಕೊಂಡು ಕಡಿಮೆ ವೇತನಕ್ಕೆ ದುಡಿಸಿಕೊಳ್ಳಲಾಗುತ್ತಿದೆ. ಹೀಗಾಗಿ ಅಲ್ಪ ಅವಕಾಶಗಳಿಗೆ ಲಕ್ಷಾಂತರ ಯುವಜನರು ಮುಗಿಬೀಳುತ್ತಿದ್ದಾರೆ. ಹೇಗಾದರೂ ಮಾಡಿ ಉದ್ಯೋಗ ಗಿಟ್ಟಿಸಬೇಕೆಂದು ಭ್ರಷ್ಟಾಚಾರಕ್ಕೂ ಬಲಿಯಾಗುತ್ತಾರೆ. ತಮ್ಮ ದುರದೃಷ್ಟ ಮತ್ತು ಹಣೆಬರಹದಿಂದ ನಿರುದ್ಯೋಗಿಗಳಾಗಿದ್ದೇವೆಂದು ಅಂಧಶ್ರದ್ಧೆ, ಮೂಢನಂಬಿಕೆಗಳ ಆಚರಣೆಗಳಿಗೆ ಯುವಜನರು ಬಲಿಯಾಗುತ್ತಿದ್ದಾರೆ. ಇನ್ನೂ ಕೆಲ ಮಧ್ಯಮ ವರ್ಗದ ಯುವಜನತೆ ದಲಿತರಿಗಿರುವ ಮೀಸಲಾತಿ ಯಿಂದಲೇ ತಮ್ಮ ನಿರುದ್ಯೋಗಕ್ಕೆ ಕಾರಣವೆಂದು ಮೀಸಲಾತಿಯ ವಿರೋಧಿಗಳಾಗಿ ಜಾತಿವಾದಿಗಳಾಗುತ್ತಿದ್ದಾರೆ. ಬಹುತೇಕ ಯುವಜನತೆ ಸಾಮಾಜಿಕ ಹೊಣೆಗಾರಿಕೆಯನ್ನು ಬಿಟ್ಟು, ಸ್ವಹಿತಾಸಕ್ತಿಗಾಗಿ ಮಾತ್ರ ಸ್ಪಂದಿಸುವಂತಹ ಮಟ್ಟಕ್ಕೆ ಇಳಿಯುತ್ತಿದ್ದಾರೆ. ಕಾರ್ಪೊರೇಟ್ ಕಂಪನಿಗಳು ಯುವಜನರಲ್ಲಿ ಕೊಳ್ಳುಬಾಕ ಸಂಸ್ಕೃತಿಯನ್ನು ಹೆಚ್ಚಿಸುತ್ತಿವೆ. ಅವಕಾಶವಾದಿಗಳಾಗುವಂತೆ ಪ್ರೇರೇಪಿಸುತ್ತಿವೆ. ಇಂತಹ ದುಸ್ಥಿತಿಗೆ ಕಾರಣವೇನು ಎಂಬುದರ ಬಗ್ಗೆ ಯೋಚನೆಯನ್ನೂ ಮಾಡದಂತಹ 'ವಿಷ ಚಕ್ರವ್ಯೂಹ'ಕ್ಕೆ ಯುವಜನರನ್ನು ನೂಕಲಾಗುತ್ತಿದೆ. ಒಟ್ಟಾರೆಯಾಗಿ, ನಮ್ಮನ್ನಾಳುತ್ತಿರುವ ಪಕ್ಷಗಳು ದೇಶ ಮತ್ತು ವಿದೇಶದ ಕಾರ್ಪೊರೇಟ್ ಕಂಪನಿಗಳ ಹಿತಕ್ಕೆ ಯುವಜನರನ್ನು ಬಲಿಕೊಡುತ್ತಿವೆ. ಎಲ್ಲ ವರ್ಗದವರ ಮಾನವ ಅಭಿವೃದ್ಧಿಯಾಗಬೇಕೆಂಬ ರಾಜಕೀಯ ಇಚ್ಛಾಶಕ್ತಿ ಆಳುವ ಪಕ್ಷಗಳ ಸರ್ಕಾರಗಳಿಗಿಲ್ಲ. ಖಾಸಗಿ ದೇಶ-ವಿದೇಶ ಕಾರ್ಪೊರೇಟ್ ಕಂಪನಿಗಳು ಎಲ್ಲ ಕ್ಷೇತ್ರಗಳಲ್ಲೂ ಬೃಹದಾಕಾರವಾಗಿ ಬೆಳೆದು ತಮ್ಮ ಲಾಭಕೋರತನಕ್ಕಾಗಿ, ಆಳುವ ಸರ್ಕಾರಗಳನ್ನು ತಮ್ಮ ಕೈಗೊಂಬೆಯಂತೆ ಆಡಿಸುವ ಪರಿಣಾಮವಾಗಿ, ಯುವಜನತೆಗೆ ಉದ್ಯೋಗ ವಂಚನೆ, ಆದಾಯ ವಂಚನೆ, ಅಭದ್ರತೆ ಹಾಗೂ ಮೂಢನಂಬಿಕೆಗಳತ್ತ ಯುವಜನ ವಾಲುವಂತಹ ದುಸ್ಥಿತಿ ದಿನೇ ದಿನೇ ಹೆಚ್ಚಾಗುತ್ತಿದೆ.

**ಬಿ. ರಾಜಶೇಖರಮೂರ್ತಿ**
ನಂ. ೮, ೧೧ನೇ ಮುಖ್ಯರಸ್ತೆ, ೩ನೇ 'ಎ' ಅಡ್ಡರಸ್ತೆ, ೪ನೇ 'ಟಿ' ಬ್ಲಾಕ್
ಜಯನಗರ, ಬೆಂಗಳೂರು – ೫೬೦ ೦೪೧



# ನಾವೂ ನಿಮ್ಮಂತೆ ಮನುಷ್ಯರು, ಪ್ರೀತಿಗೆ ಅರ್ಹರು...

## – ಎಡುವರ್ಡೋ ಗಾಲಿಯಾನೋ

**ಮಾ. ವರದರಾಜು**

ಎಡುವರ್ಡೋ ಗಾಲಿಯಾನೋ ಬದುಕಿನುದ್ದಕ್ಕೂ ಧೃತಿಗೆಡದೆ ಬಂಡವಾಳಶಾಹಿ ಜಗತ್ತನ್ನು ಎದುರಿಸಿ ಹೋರಾಡಿದ್ದರೂ, ತನ್ನೊಳಗಿನ ಶ್ವಾಸಕೋಶ ಕ್ಯಾನ್ಸರ್‌ಅನ್ನು ಗೆಲ್ಲಲಾಗದೆ ಕೈಚೆಲ್ಲಿ ಏಪ್ರಿಲ್ ೧೩, ೨೦೧೫ರಂದು, ತನ್ನ ೭೪ನೇ ವಯಸ್ಸಿನಲ್ಲಿ, ಸುತ್ತಲಿನ ಲೋಕವನ್ನು ತೊರೆದು ಎದ್ದು ನಡೆದೇಬಿಟ್ಟನು. ಅವನ ಸಾವಿನಿಂದ ಲ್ಯಾಟಿನ್ ಅಮೆರಿಕೆಯ ಜನತೆಗೆ ಗರ ಬಡಿದಂತಾಯಿತು. ಉರುಗ್ವೆಯ ಬಾನುಲಿ, ದೂರದರ್ಶನಗಳು ಸಾಮಾಜಿಕ ನ್ಯಾಯದ ಅಧ್ವರ್ಯುವಿನ ಸಾವಿಗೆ ಮಿಡಿದು ಶ್ರದ್ಧಾಂಜಲಿ ಅರ್ಪಿಸಿ ಕಣ್ಣೀರು ಮಿಡಿದವು. ಮೆರ್ಕೊಪ್ರೆಸ್ ಎಂಬ ದೈನಿಕ ತನ್ನ ಮುಖಪುಟದಲ್ಲಿ; ಎಪ್ಪತ್ತು ಮತ್ತು ಎಂಬತ್ತರ ದಶಕದ ಲ್ಯಾಟಿನ್ ಅಮೆರಿಕೆಯ ಎಡಪಂಥೀಯ ಬೌದ್ಧಿಕ ಪ್ರತಿಮೆ ಇಂದು ನಮ್ಮನ್ನಗಲಿದೆ ಎಂದು ಬರೆದು ತನ್ನ ಗೌರವ ಪ್ರಕಟಿಸಿತು.

ಹೆಸರಿಲ್ಲದೆ, ಉಸಿರುಳಿಯದೆ ಕಾಲದ ತೆರೆಯಲ್ಲಿ ತೇಲಿ ಕಣ್ಮರೆಯಾಗಿ ಹೋಗುವ ಇಂಥ ಅಸಂಖ್ಯ ಅನಾಮಿಕರನ್ನು ಕುರಿತಂತೆ ತಣ್ಣನೆಯ, ಆದರೆ ಬೇಗುದಿಯ ನಿಟ್ಟುಸಿರ ದನಿಯಲ್ಲಿ ಗಾಲಿಯಾನೋ ನುಡಿದಿದ್ದಾನೆ. ಆತ ಇಪ್ಪತ್ತನೆಯ ಶತಮಾನ ಕಂಡ ಅತ್ಯಂತ ಪ್ರಭಾವಿ ಲ್ಯಾಟಿನ್ ಅಮೆರಿಕೆಯ ಎಡಪಂಥೀಯ ಚಿಂತಕ, ಲೇಖಕ. ಗಾಲಿಯಾನೋ ಪ್ರಕಾರ ವೈಚಾರಿಕತೆಯ ಹರಹು ಪ್ರಗತಿಪರರ ನಡುವೆ ಜಾಗತಿಕವಾಗಿ ಬಹು ದೊಡ್ಡ ಹೆಜ್ಜೆಯ ಗುರುತನ್ನು ಮೂಡಿಸಿದೆ. ಸಾಮ್ರಾಜ್ಯಶಾಹಿ ವಿರೋಧಿ ನಿಲುವಿನ, ತೀವ್ರ ಪುರೋಗಾಮಿ ಚಿಂತಕರಾದ ಫ್ರಾನ್ಸ್ ಫ್ಯಾನನ್, ಆಲ್ಬರ್ಟ್ ಮೆಮ್ಮಿ ಮುಂತಾದವರ ಪಂಕ್ತಿಯಲ್ಲಿ ನೆಲೆ ಕಂಡ ಲೇಖಕ. ೧೯೭೧ರಲ್ಲಿ ಅವನು ಬರೆದ 'ಓಪನ್ ವೇನ್ಸ್ ಆಫ್ ಲ್ಯಾಟಿನ್ ಅಮೆರಿಕ' ಜಗತ್ತಿನ ಇಪ್ಪತ್ತಕ್ಕೂ ಹೆಚ್ಚಿನ ಪ್ರಮುಖ ಭಾಷೆಗಳಿಗೆ ಅನುವಾದಗೊಂಡು, ಒಂದು ದಶಲಕ್ಷ ಪ್ರತಿಗಳು ಮಾರಾಟವಾಗಿವೆ ಎಂಬುದೇ ಅವನಿಗಿರುವ ಅಪಾರ ಓದುಗ ವರ್ಗಕ್ಕೆ ಸಾಕ್ಷಿ. ಸರ್ವಾಧಿಕಾರಿ ಧೋರಣೆಯ ಸೈನಿಕ ಆಳ್ವಿಕೆಯ ದೇಶಗಳಾದ ಚಿಲಿ, ಅರ್ಜೆಂಟೈನಾಗಳಲ್ಲಿ ಈ ಕೃತಿಯ ಮೇಲೆ ನಿಷೇಧ ಹೇರಲಾಗಿತ್ತು. ಅವನದೇ ತವರು ಉರುಗ್ವೇ ಕೂಡ ಈ ಪುಸ್ತಕವನ್ನು ನಿಷೇಧಿಸಲು ಹಿಂದೆಗೆಯಲಿಲ್ಲ. ಹೀಗಾಗಿ ಪಾತಕಿಗಳ ಆಳ್ವಿಕೆಯಲ್ಲಿ ಆತ ತಲೆಮರೆಸಿಕೊಂಡು ದೇಶಭ್ರಷ್ಟನಾಗಿ ಬದುಕಬೇಕಾಯಿತು. ಅರ್ಜೆಂಟೈನಾ ದೇಶದ ಒಡೆತನ ೧೯೭೬ರಲ್ಲಿ ವಿಡೇಲನಿಗೆ ದೊರೆತ ಮೇಲೆ, ಸೈನಿಕ ಕ್ಷಿಪ್ರ ಕಾರ್ಯಾಚರಣೆ ನಡೆದು ಮರಣದಂಡನೆಗೆ ಗುರಿಯಾಗಬೇಕಾದವರ ಪಟ್ಟಿಯಲ್ಲಿ ಇವನ ಹೆಸರೂ ಇದ್ದುದರಿಂದ, ಜೀವ ಉಳಿಸಿಕೊಳ್ಳುವ ಸಲುವಾಗಿ ಸ್ಪೇನ್ ದೇಶದ ಕಡೆಗೆ ಓಡಿಹೋಗಬೇಕಾಯಿತು.

ಹನ್ನೊಂದು ವರುಷಗಳ ಅಜ್ಞಾತವಾಸ ಮುಗಿಸಿ ಮತ್ತೆ ಆತ ತವರಿಗೆ ಮರಳಿಬಂದಿದ್ದು ಪ್ರಜಾಸತ್ತಾತ್ಮಕ ತತ್ತ್ವದೆಡೆಗೆ ಉರುಗ್ವೆ ಹೊರಳಿದಾಗಲೇ. ೨೦೦೪ರ ಚುನಾವಣೆಯಲ್ಲಿ ಉರುಗ್ವೆ ತನ್ನ ಇತಿಹಾಸದಲ್ಲೇ ಮೊದಲ ಬಾರಿಗೆ ಎಡಪಂಥೀಯ ಸಮಾಜವಾದಿ ಸರ್ಕಾರವನ್ನು ಕಾಣಲು ಸಾಧ್ಯವಾಗಿದ್ದು. ಈ ಸಂತಸದಲ್ಲೇ ದಿ ಪ್ರೊಗ್ರೆಸ್ಸೀವ್ ಪತ್ರಿಕೆಯ ಅಂಕಣವೊಂದರಲ್ಲಿ ಗಾಲಿಯಾನೋ, "ಸಾಂಪ್ರದಾಯಿಕ ಕೊಲರಾಡೋ ಮತ್ತು ಬ್ಲಾಂಕ್‌ನಂಥ ರಾಜಕೀಯ ಪಕ್ಷಗಳಿಂದ ಅವ್ಯಾಹತವಾಗಿ ವಂಚನೆಗೊಳಗಾದ ಜನ ತಮ್ಮ ಸಾಧಾರಣ ಸಾಮಾನ್ಯಜ್ಞಾನ ಬಳಸಿ ತಮ್ಮನ್ನು ಈ ತನಕ ಆವರಿಸಿದ್ದ ಭೀತಿಗೆ ವಿರುದ್ಧ ಮತ ಹಾಕಿದ್ದಾರೆ" ಎಂದು ಬರೆದು ಹೊಸ ಸರ್ಕಾರವನ್ನು ಬೆಂಬಲಿಸಿ, ಜನತೆಯನ್ನು ಅಭಿನಂದಿಸಿದ. ಹನ್ನೊಂದು ವರುಷಗಳ ಅಜ್ಞಾತವಾಸ ಅವನನ್ನು ಮೌನವಾಗಿಸಲಿಲ್ಲ, ಎಲೆ ಮರೆಗೆ ದೂಡಲಿಲ್ಲ, ಬದಲಿಗೆ, ಆತ ಮತ್ತಷ್ಟು ಆತ್ಮಸ್ಥೈರ್ಯದಿಂದ, ದುರ್ಬಲ ಪ್ರಜಾಪ್ರಭುತ್ವ ದೇಶವನ್ನು ಬಲಪಡಿಸಲು ಶ್ರಮಿಸಿದ. ಅಧಿಕಾರದ ಸೂತ್ರ ಹಿಡಿದವರು ನಿದ್ದೆ ಹೋಗದಂತೆ ಸದಾ ಎಚ್ಚರಿಸುತ್ತಲಿದ್ದ. ಅಲ್ಲದೆ ತನ್ನ ಜೀವಕ್ಕೆ ಸಂಚಕಾರ ಒದಗಿದ್ದರೂ ವಿಚಲಿತನಾಗದೆ ಸರ್ವಾಧಿಕಾರತ್ವ ಎಸಗುವ ಅಪರಾಧಗಳನ್ನು ಬಹಿರಂಗವಾಗಿ ಟೀಕಿಸಿದ.

೨೦೦೮ರ ಅಮೆರಿಕ ಸಂಯುಕ್ತ ಸಂಸ್ಥಾನದ ಅಧ್ಯಕ್ಷೀಯ ಚುನಾವಣೆಗೆ ಬರಾಕ್ ಒಬಾಮಾ ಸ್ಪರ್ಧಿಸಿದ್ದಾಗ ಗಾಲಿಯಾನೋ ಹೇಳಿದ ಎಚ್ಚರಿಕೆಯ ನುಡಿ ಇದು: "ಮುಂದಿನ ದಿನಗಳಲ್ಲಿ ಶ್ವೇತ ಭವನ ಒಬಾಮಾ ವಾಸಿಸುವ ಮನೆಯಾಗಬಹುದು. ಆದರೆ ಈ ಶ್ವೇತ ಭವನವನ್ನು ಕಟ್ಟಿದವರು ಕರಿಯ ಗುಲಾಮರು ಎಂಬುದನ್ನು ಆತ ಮರೆಯಬಾರದು." – ಈ ನೇರ ನುಡಿ ಆತನ ನಿಷ್ಠುರತೆಯನ್ನು ಪರಿಚಯಿಸುತ್ತದೆ.

ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿ ವಿರುದ್ಧದ ಪ್ರತಿರೋಧವನ್ನು ತನ್ನೆಲ್ಲಾ ಕೃತಿಗಳಲ್ಲಿ ಪ್ರಕಟಿಸಿದ ಗಾಲಿಯಾನೋ; "ಪರ್ಯಾಯ ಇತಿಹಾಸ ಅಭಿವ್ಯಕ್ತಿಯ ಒಂದು ಸೃಜನಶೀಲ ದನಿಯಾಗಿದ್ದ, ಪರ್ಯಾಯ ಸಂಸ್ಕೃತಿ ಚಿಂತನೆ ಮತ್ತು ಅಭಿವ್ಯಕ್ತಿಯ ವಿಶಿಷ್ಟ ಪರಿಯಾಗಿದ್ದ."

ಬಲಾಢ್ಯ ಅಮೆರಿಕೆ ಮತ್ತು ಐರೋಪ್ಯ ರಾಷ್ಟ್ರಗಳ ಮೇಲೆ ಗಾಲಿಯಾನೋಗೆ ಇನ್ನಿಲ್ಲದ ಸಿಟ್ಟು. ಈ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ತತ್ತ್ವ ಮತ್ತು ಮಹತ್ವವನ್ನು ಕುರಿತು ಗೌರವದಿಂದ ಮಾತಾಡುತ್ತಿರುವಂತೆ ಮೇಲ್ನೋಟಕ್ಕೆ ತೋರಿದರೂ; ವರ್ಣಭೇದ, ಗುಲಾಮಗಿರಿ, ಸರ್ವಾಧಿಕಾರ ಮನೋಪ್ರವೃತ್ತಿಯನ್ನು ಸದ್ದಿಲ್ಲದೆ ತೆರೆಯ ಮರೆಯಲ್ಲಿ

ಪೋಷಿಸುತ್ತವೆ. ಅಮೆರಿಕೆಯ ಸೋಗಲಾಡಿತನ ಇಂದು ಗುಟ್ಟಾಗಿ ಉಳಿದಿಲ್ಲ. ಏಕೆಂದರೆ, ಮನುಷ್ಯರೆಲ್ಲಾ ಸಮಾನರೆಂಬ ಘೋಷಣೆ ಇಂದಿಗೂ ಅಮೆರಿಕೆಯ ಹಲವು ಕರಿಯರಿಗೆ ಕೇಳಿಸಿಯೇ ಇಲ್ಲ. ಸೈನಿಕ ಸರ್ವಾಧಿಕಾರವನ್ನು ತನ್ನ ಅಧೀನ ರಾಷ್ಟ್ರಗಳ ಮೇಲೆ ಹೇರಿರುವ ಐರೋಪ್ಯ ರಾಷ್ಟ್ರಗಳು 'ಪ್ರಜಾಪ್ರಭುತ್ವ' ತತ್ತ್ವವನ್ನು ಬೋಧಿಸಬಲ್ಲ ಪರಿಣತ ಪ್ರಭೃತಿಗಳಂತೆ ಮಾತಾಡುತ್ತವೆ. ವಿಪರ್ಯಾಸವೆಂದರೆ ಶಸ್ತ್ರಾಸ್ತ್ರಗಳ ಉತ್ಪಾದನೆ ಮತ್ತು ಮಾರಾಟದಲ್ಲಿ ತೊಡಗಿರುವ ಈ ಬಲಾಢ್ಯ ದೇಶಗಳೇ ವಿಶ್ವಶಾಂತಿ ಸಂರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿವೆ. ಮರಣವನ್ನು ಮಾರುವ, ಹಿಂಸೆಯನ್ನು ರಫ್ತು ಮಾಡುವ, ಶಸ್ತ್ರಾಸ್ತ್ರವನ್ನು ಉತ್ಪಾದಿಸುವ ಇಂಥ ಕಸಾಯಿಖಾನೆಯ ಕ್ರೂರ ದಂಧೆಯಿಂದ ಬರಬಹುದಾದ ಲಾಭದ ಪ್ರತೀಕ್ಷೆಯಲ್ಲಿ ಈ ಲಾಭಬಡುಕರು ಕಾದು ಕುಳಿತಿದ್ದಾರೆ. ಇಂಥ ವಿರೋಧಾಭಾಸವನ್ನು ತೃತೀಯ ಜಗತ್ತು ಮೌನವಾಗಿ ನೋಡಬೇಕಿರುವುದು ದುರ್ದೈವ.

ಪ್ರಭುತ್ವದ ಅಮಾನುಷ ಧೋರಣೆಯ ವಿರುದ್ಧ ನಿರ್ಭೀತವಾಗಿ ಸೆಟೆದು ನಿಂತ ಒಂದು ಪ್ರಬಲ ದನಿಯಾಗಿದ್ದ ಗಾಲಿಯಾನೋ. ಒಗ್ಗಟ್ಟು ಹಾಗೂ ದುಡಿಮೆಯ ಬಲದಿಂದ ತಮ್ಮ ಆತ್ಮಗೌರವವನ್ನು ಸಾಧಿಸಲು ಮತ್ತು ಶೋಷಣೆಯಿಂದ ಬಿಡುಗಡೆಗೊಳ್ಳಲು ಬಡವರಿಗೆ, ದಮನಿತರಿಗೆ ಸಾಧ್ಯವಾಗಬಹುದಾದ ಸಮುದಾಯಪರ ಪ್ರಜಾಪ್ರಭುತ್ವದ ಬಗೆಗಿನ ಗಂಭೀರ ಚಿಂತನೆಯೊಂದು ಅವನ ಬದುಕನ್ನು ವ್ಯಾಪಿಸಿತ್ತು. ಬಡವ-ಶ್ರೀಮಂತರ ನಡುವಿನ ಅಂತರವನ್ನು ಕಡಿಮೆ ಗೊಳಿಸುವ ಹಂಬಲ ಆತನದು; "ಮತ್ತೊಬ್ಬರ ಬಡತನದ ಫಲಿತಾಂಶವೇ ಈ ಜಗತ್ತಿನಲ್ಲಿರುವ ಸಿರಿವಂತಿಕೆಗೆ ಕಾರಣ. ಉಳ್ಳವರು ಮತ್ತು ನಿರ್ಗತಿಕರ ನಡುವಿನ ಈ ಬಹುದೊಡ್ಡ ಕಂದರವನ್ನು ನಾವಿಂದು ಹೋಗಲಾಡಿಸಬೇಕಿದೆ." ಹೀಗಾಗಿ ಅವನ ಎಲ್ಲಾ ಕೃತಿಗಳಲ್ಲಿ ಸಾಮಾನ್ಯರಲ್ಲಿ ಇರಬಹುದಾದ ಉದಾತ್ತ ಗುಣಸ್ವಭಾವವನ್ನು ಹೊರತೆಗೆಯುವ ಹಾಗೂ ದೊಡ್ಡವರಲ್ಲಿರುವ ಸಣ್ಣತನವನ್ನು ಬಯಲುಮಾಡುವ ದಿಟ್ಟತನ ಸ್ಪಷ್ಟವಾಗಿ ಕಾಣಿಸುತ್ತದೆ. "ಬಂಡವಾಳಶಾಹಿ ಆಧಿಪತ್ಯದ ಬಲಿಪಶುವಾಗಿರುವುದಕ್ಕಿಂತ, ಬಂಡವಾಳ ವಾದದ ಯಾಜಮಾನಿಕೆ ಮತ್ತು ವಿಚಾರ ದರ್ಶನಗಳನ್ನು ಮೀರಿ ನಿಂತು ಇತಿಹಾಸಕ್ಕೆ ಅಧೀನ ವಾಗಿರುವುದೇ ಜನಸಮುದಾಯಕ್ಕೆ ಒಳಿತು. ಏಕೆಂದರೆ ಚರಿತ್ರೆ ನಮ್ಮದು, ಸಮುದಾಯದ ಸೃಷ್ಟಿ. ಅಲ್ಲದೆ, ಬಂಡವಾಳಶಾಹಿ ನಿರ್ಮಿಸುವ ವರ್ಗ ವಿನ್ಯಾಸ ಮೀರಿ ತಮ್ಮದೇ ಭವಿಷ್ಯ ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ" ಎಂದು ಪ್ರತಿಪಾದಿಸುವ ಅವನ ಕೃತಿಗಳಲ್ಲಿ ಜೀವಪರವಾದ ಧ್ವನಿಯೊಂದು ಸದಾ ಅನುರಣನ ಗೊಳ್ಳುವುದನ್ನು ಕಾಣುತ್ತೇವೆ. 'ವ್ಯಾಪಕವಾದ ಸಾಮಾಜಿಕ ಮತ್ತು ಆರ್ಥಿಕ ಒತ್ತಡಗಳ ನಡುವೆಯೂ ರೂಪುಗೊಳ್ಳುವ ಸಾಹಿತ್ಯ ಒಂದು ಪ್ರಮುಖ ಸಾಮಾಜಿಕ ಹೋರಾಟದಂತೆ ಸದಾ ಕ್ರಿಯಾಶೀಲ ವಾಗಿರುತ್ತದೆ ಎಂಬುದು ಅವನ ನಿಲುವು.

ಪ್ರಖರ ವಿಚಾರದರ್ಶ ಮತ್ತು ಕ್ರಿಯಾಶೀಲ ಹೋರಾಟಗಳ ಫಲವಾಗಿ ಒಡಮೂಡಿರುವ ಗಾಲಿಯಾನೋನ ಜೀವಪರ ಚಿಂತನೆ ಮತ್ತು ತಾತ್ತ್ವಿಕ ಗ್ರಹಿಕೆಗಳು ಅವನ ಕೃತಿಗಳಲ್ಲಿ ಸಾಹಿತ್ಯಿಕ, ಕಾವ್ಯಾತ್ಮಕ ಲೇಪನ ಹೊದ್ದು ಮೈತಳೆದಿವೆ. ಅವನ ಬಹುಶ್ರುತ ಮತ್ತು ಬಹುಚರ್ಚಿತ ಕೃತಿಗಳೆಂದರೆ; ಓಪನ್ ವೇನ್ಸ್ ಆಫ್ ಲ್ಯಾಟಿನ್ ಅಮೆರಿಕ (ಲ್ಯಾಟಿನ್ ಅಮೆರಿಕೆಯ ಮುಕ್ತ ಮನೋಧರ್ಮ), ಮೆಮೊರಿ ಆಫ್ ಫೈರ್ (ಬೆಂಕಿಯ ನೆನಪು), ಅಪ್‌ಸೈಡ್ ಡೌನ್ ವರ್ಲ್ಡ್ (ತಲೆಕೆಳಗಾದ ಜಗತ್ತು), ನೋಬಡೀಸ್ (ಅನಾಮಿಕರು) ಮತ್ತು ಚಿಲ್ಡರ್ನ್ ಆಫ್ ದಿ ಡೇಸ್ (ಹಗಲಿನ ಮಕ್ಕಳು).

## ಸಾದರ ಸ್ವೀಕಾರ

**ಶತಮಾನ ಪ್ರಭೆ – ನೂರು ಹೆಜ್ಜೆಗಳು** (ಸ್ಮರಣೆ ಸಂಪುಟ) (೧೯೦೬–೨೦೦೬)
**ಪುಟ : ೫೬ + ೬೪ + ೨ + ೩೨೨**
**ಶ್ರೀ ವೀರಣ್ಣ ಚರಂತಿಮಠ,** ಕಾರ್ಯಾಧ್ಯಕ್ಷರು, ಶ್ರೀ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘ, ಬಾಗಲಕೋಟ

**ಬೆಳ್ಳಿಬೆಡಗು ಶ್ರೀ ವೀರಣ್ಣ ಚರಂತಿಮಠ :** ಅವರ ಬಿ.ವಿ.ವಿ. ಸಂಘದ ಕಾರ್ಯಾಧ್ಯಕ್ಷ ಸೇವೆಯ ರಜತ ಮಹೋತ್ಸವ ಸಮಿತಿ, ನೆನಪಿನ ಸಂಪುಟ
*ಸಂ. : ಡಾ. ವಿಜಯಕುಮಾರ ಎಸ್. ಕಟಗಿಹಳ್ಳಿಮಠ*
**ಪುಟ : ೧೬೮ ಬೆಲೆ : ರೂ. ೫೦೦**
**ಶ್ರೀ ವೀರಣ್ಣ ಚರಂತಿಮಠ : ಕಾರ್ಯಾಧ್ಯಕ್ಷ ಸೇವೆಯ ರಜತ ಮಹೋತ್ಸವ ಸಮಿತಿ,** ಶ್ರೀ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘ, ಬಾಗಲಕೋಟ

**ಹಳಗನ್ನಡ ಓದುತ್ತ ಓದುತ್ತ.....**
*ಸಂ. : ಡಾ. ವಿಜಯಕುಮಾರ ಎಸ್. ಕಟಗಿಹಳ್ಳಿಮಠ*
**ಪುಟ : xii + ೧೩೨ ಬೆಲೆ : ರೂ. ೨೫೦**
**ಕನ್ನಡ ಸಂಘ,** ಬಸವೇಶ್ವರ ವಿಜ್ಞಾನ ಮಹಾ ವಿದ್ಯಾಲಯ, ಬಾಗಲಕೋಟ – ೫೮೭ ೧೦೧

**ರಕ್ತವೇ ಜೀವನದಿ** (ವೈದ್ಯಕೀಯ ಲೇಖನಗಳ ಸಂಕಲನ)
*ಶಾರದಾ ಎ. ಅಂಚನ್*
**ಪುಟ : xii + ೯೮ ಬೆಲೆ : ರೂ. ೧೫೦**

**ಪುಷ್ಪಗುಚ್ಛ** (ಕನ್ನಡ ಕಥಾ ಸಂಕಲನ)
*ಶಾರದಾ ಎ. ಅಂಚನ್*
**ಪುಟ : xiv + ೮೮ ಬೆಲೆ : ರೂ. ೧೫೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಪೂಜಾ ಪ್ರಕಾಶನ,** ಸಿ/೧, ಜಲಕೀರ್ತಿ ಸಿ.ಎಚ್.ಎಸ್.ಲಿ. ಜಯರಾಜನಗರ, ಬೊರಿವಲಿ (ಪ) ಮುಂಬಯಿ – ೪೦೦ ೦೯೧

**ಜೆ.ಎನ್.ಯು. ಮೇಲೆ ದಾಳಿ ಭಾರತದ ಮೇಲೆ ದಾಳಿ**
*ಸಂ : ನೀಲಾ ಕೆ.*
**ಪುಟ : ೮೮ + ೪ ಬೆಲೆ : ರೂ. ೭೦**
**ಕ್ರಿಯಾ ಪುಸ್ತಕ** (ಕ್ರಿಯಾ ಮಾಧ್ಯಮ ಪ್ರೈ. ಲಿ.ನ ಒಂದು ಘಟಕ), ೪ನೇ ಅಡ್ಡರಸ್ತೆ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು – ೫೬೦ ೦೭೯

**ನಿನ್ನೊಳಗ ನೀನಿಲ್ಲ** *ಸುರೇಶ ಹಡಪದ, ಬಳಗಾನೂರ*
**ಪುಟ : xviii + ೫೨ = ೭೨ ಬೆಲೆ : ರೂ. ೫೦**
**ಪವನ ಪ್ರಕಾಶನ,** ಬಳಗನೂರು, ತಾ. ಸಿಂಧನೂರು, ಜಿಲ್ಲೆ ರಾಯಚೂರು

**ನಮ್ಮ ಜರ್ಮನ್ ವಾಸ್ತವ್ಯ** (ಪ್ರವಾಸ ಪ್ರಬಂಧಗಳು)
*ಹ. ಶಿ. ಭೈರನಟ್ಟಿ*
**ಪುಟ : ೬೦ ಬೆಲೆ : ರೂ. ೬೦**
**ಎಚ್. ಎಸ್. ಭೈರಹಟ್ಟಿ,** ಭಾಗೀರತಿ ನಿಲಯ, ವಿನಾಯಕ ಬಡಾವಣೆ, ಧಾರವಾಡ – ೫೮೦ ೦೦೧

**ಹೊರಳು ಮತ್ತು ಇತರ ಕತೆಗಳು** *ಕೆ. ಎಸ್. ಪ್ರಭಾ*
**ಪುಟ : xvi + ೪೮ ಬೆಲೆ : ರೂ. ೬೦**
**ಅನಿಕೇತನ ಟ್ರಸ್ಟ್ (ರಿ),** ಸೋಮೇಶ್ವರ ಬಡಾವಣೆ, ದೊಡ್ಡಬಳ್ಳಾಪುರ – ೫೬೧ ೨೦೩

**ಕಾಡ ನಡುವಿನ ದೀವಿಗೆ** (ಕಣವಿ ಕಾವ್ಯ ಪುರಸ್ಕಾರ – ೨೦೧೪ ಪಡೆದ ಕವನ ಸಂಕಲನ)
*ಡಾ॥ ಟಿ. ಗೋವಿಂದರಾಜು*
**ಪುಟ : xx+ ೬೦ ಬೆಲೆ : ರೂ. ೮೦**

**ಗಾಂಧೀ ತಾತಾ ಮಾತಾಡೂ...!** (ಮಕ್ಕಳ ನಾಟಕ)
*ಡಾ॥ ಟಿ. ಗೋವಿಂದರಾಜು*
**ಪುಟ : viii + ೪೦ = ೪೮ ಬೆಲೆ : ರೂ. ೫೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಪುಸ್ತಕ ಜೇನು,** ನಂ. ೭೬೫, ೪ನೇ ಮುಖ್ಯ ರಸ್ತೆ, ಕಿರ್ಲೋಸ್ಕರ್ ಬಡಾವಣೆ, ಹೆಸರುಘಟ್ಟ ರಸ್ತೆ, ಬೆಂಗಳೂರು – ೫೬೦೦೭೩

**ಹೂ ಮಾರುವ ಹುಡುಗಿ** (ಮಕ್ಕಳ ಕವನಗಳು)
*ಲಲಿತಾ ಕೆ. ಹೊಸಪ್ಯಾಟಿ*
**ಪುಟ : ೯೬ ಬೆಲೆ : ರೂ. ೮೦**
**ಗುರುರಾಜ ಪ್ರಕಾಶನ,** ಮಹಾಂತನಗರ, ಹುನಗುಂದ ಜಿಲ್ಲೆ ಬಾಗಲಕೋಟೆ – ೫೮೭ ೧೧೮

**ನುಡಿಹಾರ–೭** (ಸಾಹಿತ್ಯ ಸಂಸ್ಕೃತಿ ಕುರಿತ ಮಹಿಳಾ ಚಿಂತನ ಬರಹಗಳು)
*ಸಂ. : ಡಾ॥ ಅರುಣಕುಮಾರ್ ಎಸ್. ಆರ್.*
**ಪುಟ : xviii + ೧೩೪ ಬೆಲೆ : ರೂ. ೧೨೦**
**ಕಾಂತಾವರ ಕನ್ನಡ ಸಂಘ (ರಿ.),** ಕಾಂತಾವರ – ೫೭೪ ೧೨೯, ಕಾರ್ಕಳ, ಉಡುಪಿ ಜಿಲ್ಲೆ

**ಮನದೊಳಗಿನ ಸುಪ್ರಭಾತ ಎಂ. ಎಸ್. ಸುಬ್ಬುಲಕ್ಷ್ಮಿ**
*ಡಾ॥ ಎನ್. ಜಗದೀಶ ಕೊಪ್ಪ*
**ಪುಟ : ೧೪೪ + ೪೪ ಬೆಲೆ : ರೂ. ೧೫೦**

ಗಟ್ಟಿದನಿಯ ದಿಟ್ಟ ಕಲಾವಿದೆ **ಬೆಂಗಳೂರು ನಾಗರತ್ನಮ್ಮ**
*ಡಾ॥ ಎನ್. ಜಗದೀಶ ಕೊಪ್ಪ*
**ಪುಟ : ೧೭೬ + ೪ ಬೆಲೆ : ರೂ. ೧೬೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ವಿಕಾಸ ಪ್ರಕಾಶನ,** ೧೫೪೧, ೧೬ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು – ೪೦

೧೯೭೧ರಲ್ಲಿ ಆತ ಪ್ರಕಟಿಸಿದ ಓಪನ್ ವೇನ್ಸ್ ಆಫ್ ಲ್ಯಾಟಿನ್ ಅಮೆರಿಕ ಬಹುಚರ್ಚಿತ ಮತ್ತು ಜನಮನ್ನಣೆ ಗಳಿಸಿದ ಕೃತಿ. ಪ್ರಾಥಮಿಕ ಹಂತದಲ್ಲಿ ಅವನ ಮೇಲಾದ ಮಾರ್ಕ್ಸ್‌ವಾದಿ ಪ್ರಭಾವದ ಪ್ರತೀಕದಂತಿದೆ. ಈ ಕೃತಿ ಎತ್ತುವ ಹಲವು ಸಂಗತಿಗಳಲ್ಲಿ ಅತ್ಯಂತ ಪ್ರಮುಖವಾದುದು; ಸಂಪೂರ್ಣ ವೈಯಕ್ತಿಕತೆ ಮತ್ತು ಸಾಮಾಜಿಕ ಪೃಥಕ್ಕರಣವೆಂಬುದು ಬಂಡವಾಳವಾದ ವನ್ನು ವಿಸ್ತರಿಸುವ ಹಾಗೂ ನಿಯಂತ್ರಿಸುವ ವಿನಾಶಕಾರಿ ಪರಿಕಲ್ಪನೆ. ಈ ಬಂಡವಾಳಶಾಹಿಯೇ ಐರೋಪ್ಯ ವಸಾಹತೀಕರಣ ಮತ್ತು ಅಮೆರಿಕೆಯ ಸಾಮ್ರಾಜ್ಯಶಾಹಿವಾದದ ಮೂಲ ಆಕರ, ಪ್ರಧಾನ ಸಂಪನ್ಮೂಲ. ಚಿಲಿಯಲ್ಲಿ ಲಭ್ಯವಿರುವ ಅಪಾರ ಸಾರಜನಕ, ಆಮ್ಲ, ಬ್ರೆಜಿಲ್‌ನ ದಟ್ಟ ವರ್ಷಾರಣ್ಯ, ವೆನಿಝೂಲದ ಸಣ್ಣಪುಟ್ಟ ಪಟ್ಟಣಗಳಲ್ಲಿರುವ ತೈಲ ನಿಕ್ಷೇಪ ಮುಂತಾದ ಹಲವು ಸಮೃದ್ಧ ಸಂಪತ್ತಿನ ದಿಸೆಯಿಂದಾಗಿ ಸಮಗ್ರ ಲ್ಯಾಟಿನ್ ಅಮೆರಿಕ ಇಂದು ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿ ಸಿಕ್ಕಿ ನರಳು ವಂತಾಗಿದೆ. ಪ್ರಕೃತಿಯ ಅನುಗ್ರಹವಿದ್ದರೂ, ಕೈಗೆ ಬಂದ ತುತ್ತು ಬಾಯಿಗೆ ಬರದಂತೆ ಸಂಪತ್ತನ್ನು ಕಬಳಿಸುವ ಪ್ರಭುತ್ವವಾದಿಗಳ ದಿಸೆಯಿಂದಾಗಿ ಇಂದು ಈ ನಿರ್ಲಕ್ಷಿತ ನೆಲದ ಬಡಪಾಯಿ ಜನರು ತಮ್ಮ ದುರ್ದೆಸೆಯನ್ನು ಹಳಿದುಕೊಳ್ಳುವಂತಾಗಿದೆ. ಅವನ ಈ ಮಹತ್ತರ ಕೃತಿಯನ್ನು ಅರ್ಥೈಸಿಕೊಳ್ಳಬೇಕಾದರೆ ಅದು ರಚಿತವಾದ ೧೯೭೦ರ ದಶಕದ ಕಾಲಘಟ್ಟವನ್ನು ಸ್ಥೂಲವಾಗಿ ಗ್ರಹಿಸಬೇಕಾದ ಅಗತ್ಯವಿದೆ.

ಚಂಡಮಾರುತ, ಭೋರ್ಗರೆವ ದೈತ್ಯ ಅಲೆಗಳಿಂದಾವೃತವಾದ, ಸದಾ ಕುದಿವ ಕಡಲಿನ ನಡುವಿರುವ ಒಂದು ಪುಟ್ಟ ದ್ವೀಪವೇ ಚಿಲಿ. ಇಂಥ ಕಡಲಾಳಕ್ಕೆ ಲ್ಯಾಟಿನ್ ಅಮೆರಿಕೆಯನ್ನು ಇತಿಹಾಸ ದೂಡಿದ್ದರಿಂದಲೇ, ನೋವಿನಿಂದ ನರಳುವ ಹೃದಯದಂತೆ ಕಾಣಿಸುತ್ತದೆ. ೧೯೭೦ರ ಪ್ರಾರಂಭಿಕ ದಿನಗಳಲ್ಲಿ ಮಾರ್ಕ್ಸ್‌ವಾದಿ ಚಿಂತಕ ಸಾಲ್ವಡಾರ್ ಅಲೆಂಡೆ ಚುನಾವಣೆಗಳ ಮೂಲಕ ಸಮಾಜವಾದಿ ಸರ್ಕಾರವನ್ನು ಚಿಲಿಯಲ್ಲಿ ಸ್ಥಾಪಿಸಿದ. ಸಮಾನತೆ ಮತ್ತು ಸ್ವಾತಂತ್ರ್ಯ ಅವನ ಮಹತ್ವಾಕಾಂಕ್ಷೆಯಾಗಿತ್ತು. ಅವನಿಗೆ ತನ್ನ ಆಕಾಂಕ್ಷೆಯನ್ನು ಸಾಕಾರಗೊಳಿಸಬೇಕೆಂಬ ಉತ್ಕಟ ಹಂಬಲವಿತ್ತು. ಕಳೆದ ಐದುನೂರು ವರುಷ ಗಳಿಂದ ಶೋಷಣೆಯ ಮತ್ತು ವಸಾಹತೀಕರಣದ ಫಲವನ್ನು ನಿರಂತರವಾಗಿ ಅನುಭವಿಸುತ್ತಿದ್ದ ಚಿಲಿಯ ಮತ್ತು ಸುತ್ತಮುತ್ತಲಿನ ಯಾವ ದ್ವೀಪಗಳೂ ನಿರಾಳವಾಗಿರಲಿಲ್ಲ. ಹೀಗಿರುವಾಗ, ಸಾಲ್ವಡಾರ್ ಕಂಡ ಕನಸು ನನಸಾಗುವುದಾದರೂ ಹೇಗೆ ಸಾಧ್ಯ? ಇದೇ ಸಂದರ್ಭದಲ್ಲಿ ಅಮೆರಿಕ ಶೀತಲ ಯುದ್ಧ ನಡೆಸಿತ್ತು. ಕ್ಯೂಬಾ ದೇಶದ ಕ್ಷಿಪ್ರಕ್ರಾಂತಿ ಅಮೆರಿಕೆಯನ್ನು ಹೈರಾಣ ವಾಗಿಸಿತ್ತು. ಹೀಗಾಗಿ ಮತ್ತಾವ ಎಡಪಂಥೀಯ ಪ್ರಯೋಗಗಳನ್ನು ಸಹಿಸಿಕೊಳ್ಳುವ ಮನಃಸ್ಥಿತಿಯಲ್ಲಿ ಅಮೆರಿಕ ಇರಲಿಲ್ಲ. ಹೆನ್ರಿ ಕಿಸಿಂಜರ್‌ನಂಥವರಿಗೆ ಎಡಪಂಥೀಯ ಹೋರಾಟಗಳೆಂದರೆ ಅಮೆರಿಕೆಯ ಹಿತ್ತಲಿನಲ್ಲಿ ಉದ್ಭವಿಸಿರುವ ಸಮಸ್ಯೆಗಳಂತೆ ಕಾಣಿಸುತ್ತಿತ್ತು. ಇಂಥ ಸನ್ನಿವೇಶದಲ್ಲಿ ಜನಸಮುದಾಯ ಅಪೇಕ್ಷಿಸುವ



ಸಮಾನತೆ ಮತ್ತು ಸ್ವಾತಂತ್ರ್ಯ ಎಂಬುದು ದೂರದ ಬೆಟ್ಟದಂತಾಗಿದ್ದವು.

೧೯೭೩ರಲ್ಲಿ ದಿಢೀರನೆ ನಡೆದ ಸೈನಿಕ ಕಾರ್ಯಾಚರಣೆಯಿಂದಾಗಿ ಸಾಲ್ವಡಾರ್ ಪದಚ್ಯುತನಾಗಿ ಮಹಾದಂಡನಾಯಕ ಆಗಸ್ತೋ ಪಿನೊಷೆ ಅಧಿಕಾರದ ಗದ್ದುಗೆ ಏರಿ ಕುಳಿತ. ಅಲ್ಲಿಗೆ ಪ್ರಜಾಸತ್ತಾತ್ಮಕ ಪರಂಪರೆಯೊಂದು ತನ್ನ ಕೊನೆಯುಸಿರೆಳೆಯಿತು. ಈ ಪಲ್ಲಟದಿಂದ ಲ್ಯಾಟಿನ್ ಅಮೆರಿಕೆಯ ದೇಶಗಳೆಲ್ಲಾ ಭೀತಿಯಿಂದ ತಲ್ಲಣಿಸಿದವು. ವಾಷಿಂಗ್ಟನ್‌ನಲ್ಲಿದ್ದ ಪ್ರಭುಗಳಿಗೆ ಇದೊಂದು ಜನರಲ್ಲಿ ಭೀತಿ ಹುಟ್ಟಿಸುವ ತಂತ್ರಗಾರಿಕೆಯಾಗಿತ್ತು. ಲ್ಯಾಟಿನ್ ಅಮೆರಿಕೆಯ ಜನತೆಯ ಮೇಲೆ ಬಲಪಂಥೀಯ ಆರ್ಥಿಕ ಮತ್ತು ರಾಜಕೀಯ ಒತ್ತಡಗಳನ್ನು ಹೇರಲಾಯಿತು.

ಜೀವತರು, ಸಂಗೀತ, ನರ್ತನ – ಈ ಮುಂತಾದ ಶಬ್ದಗಳು ತಮ್ಮ ವಾಚ್ಯಾರ್ಥ ಕಳೆದುಕೊಂಡು ಬದುಕಿನ ಭರವಸೆಯ ಬೆಳಕಿನಂತಿವೆ. 'ನಡೆವ ನುಡಿಗಳು', 'ಬೆಂಕಿಯ ನೆನಪು' ಇವು ಅವನ ಕೃತಿಗಳ ಕೇವಲ ಶೀರ್ಷಿಕೆಗಳಲ್ಲ, ಧ್ವನಿಪೂರ್ಣ ಪ್ರತಿಮಾರೂಪಿ ಶೀರ್ಷಿಕೆಗಳು. ಎಡುವರ್ಡೊ ಗಾಲಿಯಾನೋ ಇಂದು ನಮ್ಮೊಡನಿಲ್ಲವೆಂಬುದು ವಾಸ್ತವ. ಆದರೆ ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿಗಳನ್ನು ವಿರೋಧಿಸಿ, ಅಸಹಾಯಕ ಶೋಷಿತರ ಪರವಾಗಿ ಆತ ನಡೆಸಿದ ಹೋರಾಟ, ಸೈನಿಕ ಸರ್ವಾಧಿಕಾರ ಮತ್ತು ಪ್ರಭುತ್ವ ವಿರೋಧಿ ತಾತ್ತ್ವಿಕ ನಿಲುವನ್ನು ಸಾಹಿತ್ಯಿಕವಾಗಿ ರೂಪಾಂತರಿಸಿ ಪ್ರಕಟಿಸಿದ ಅವನ ಸೃಜನಶೀಲ ಕೃತಿಗಳು, ಆತ ಸೃಷ್ಟಿಸಿದ ಹೊಸ ನುಡಿಗಟ್ಟು, ರೂಪಕಗಳ ನವಿರುತನದಲ್ಲೇ, ವ್ಯಂಗ್ಯ ಮುಕ್ಕಳಿಸುವ ಅವನ ನುಡಿಗಳು ನಮ್ಮ ಎದೆಯಂಗಳದಲ್ಲಿ ಸದಾ ನಡೆದಾಡುತ್ತವೆ. ನಮ್ಮೊಳಗಿನ ಚಿಂತನೆ ಮತ್ತು ಪ್ರಜ್ಞೆಯನ್ನು ಸುಡುವ ಅಗ್ನಿದಿವ್ಯದಂತೆ ಎಚ್ಚರಿಸುತ್ತವೆ.

**ಮಾ. ವರದರಾಜು**
ಕನ್ನಡ ಪ್ರಾಧ್ಯಾಪಕ, ನಂ. ೪೮, 'ಜನನಿ', ೪ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಎ ಮತ್ತು ಬಿ ಬ್ಲಾಕ್ ರಾಮಕೃಷ್ಣನಗರ ಮೈಸೂರು – ೫೭೦ ೦೨೨

ಕಾವ್ಯಲೋಕ

## ಅ–ಭಾವ ಬಂಧ

ಎಲ್ಲಿಡೆ ಕೇಳಿದೆ ಘೋಷಣೆಯೊಂದು
ಬಳಸಿ-ಬಿಸಾಕಿ, ಬಳಸಿ-ಬಿಸಾಕಿ.
ಅದರಂತೆಯೆ ನಡೆಯುತ ನಾವಿಂದು
ನಿಟ್ಟುಸಿರಿಟ್ಟೆವು ರಾಶಿ-ರಾಶಿ ಕಸಹಾಕಿ.

ಮನೆ-ಮನೆಯಲಿ ಮೊಳಗುತ್ತಿದೆ
ಹೊಸತೊಂದು ಘೋಷ ವಾಕ್ಯ
ಎಲ್ಲವನೂ ಮಾರಿಬಿಡಿ, ಎಲ್ಲವನೂ ಮಾರಿಬಿಡಿ
ಇದ್ದುದೆಲ್ಲವನೂ ಮರೀಚಿಕೆಯೆನಿಸಿಬಿಡಿ.

ದಿನಬೆಳಗಾದರೆ ಕೇಳುವ ವಾಕ್ಯ
ಹಳೆಯದನೆಲ್ಲ ಮರೆತುಬಿಡಿ
ನಿನ್ನೆಯ ನೆನಪನು ಅಳಿಸಿಬಿಡಿ
ಹೊಸತನು ಹುಡುಕುತ ಹೊರಟುಬಿಡಿ.

ಬೇರುಗಳೇಕೋ ನೆಲದೊಳಗೆ ಬಿಕ್ಕಿವೆ
ಇತಿಹಾಸವು ತನ್ನೊಳಗೆ ನಸುನಕ್ಕಿದೆ.



**ಎ. ಎಂ. ಜಯಶ್ರೀ**
ಅರ್ಥಶಾಸ್ತ್ರ ಉಪನ್ಯಾಸಕಿ, ನಂ. ೨೦, 'ಶ್ರೀಗೌರಿ'
ಟಿ. ಜಿ. ಲೇಔಟ್, ಮೋಕ ರಸ್ತೆ, ಗಾಂಧಿನಗರ, ಬಳ್ಳಾರಿ – ೫೮೩ ೧೦೩

# ಕ್ಷ - ಕಿರಣ

- ಸಾನ್ವಿ ಪಿ.


ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಚಳುವಳಿ
ಭವಿಷ್ಯ ನಿಧಿ ಕಟ್
ಮೋದಿಯ ಬಾಲ ಕಟ್


ಶನಿಯ ಹೆಗಲೇರಿದ ಮಹಿಳೆ
ಶನಿ ಶಿಂಗ್ನಾಪುರ

ದಲಿತ ಮುಖ್ಯ ಮಂತ್ರಿ
ಲ್ಯಾಬ್
ವಾಚ್

## ಮಾರುತಿ ದಾಸಣ್ಣವರ

'ನೂರು ಮತದ ಹೊಟ್ಟ ತೂರಿ ಎಲ್ಲ ತತ್ವದೆಲ್ಲೆ ಮೀರಿ ನಿರ್ದಿಗಂತವಾಗಿ ಏರಿ ಓ ನನ್ನ ಚೇತನ ಆಗು ನೀ ಅನಿಕೇತನ'

ಇತ್ತೀಚೆಗಷ್ಟೆ ಮಹಾರಾಷ್ಟ್ರದ ಖ್ಯಾತ ವಿಚಾರವಾದಿ, ಅಂಧಶ್ರದ್ಧೆ ವಿರೋಧಿ ಹೋರಾಟಗಾರ, ಸಾಮಾಜಿಕ ಕಾರ್ಯಕರ್ತ ನರೇಂದ್ರ ದಾಭೋಲ್ಕರ್ ಅವರ ಹತ್ಯೆಯಾಯಿತು. ಅಲಹಾಬಾದಿನ ಕುಂಭಮೇಳದ ಸಂದರ್ಭದಲ್ಲಿ ನೂಕುನುಗ್ಗಲಾಗಿ ಸುಮಾರು ನಲವತ್ತು ಜನ ಸತ್ತುಹೋದರು. ಎಷ್ಟೋ ಜನ ಕಾಣದಾದರು. ಮಡೆಸ್ನಾನ, ಎಡೆಸ್ನಾನ, ಸಹಪಂಕ್ತಿ ಭೇದ, ಅಡ್ಡ ಪಲ್ಲಕ್ಕಿ ಉತ್ಸವದಂತಹ ಆಚರಣೆಗಳನ್ನು ಸಮರ್ಥಿಸಿಕೊಳ್ಳುವ ಹಪಾಹಪಿ ಈಗಲೂ ಮುಂದುವರಿದಿದೆ. ಮಾಟ-ಮಂತ್ರಗಳ ಕೆಟ್ಟ ಪ್ರಭಾವ ನಮ್ಮ ಮೇಲಾಗದಂತೆ, ಕೆಟ್ಟ ದೃಷ್ಟಿಗಳು ತಾಗದಂತೆ ಕಾಪಾಡುವ, ಬಡತನವನ್ನು ಹೋಗಲಾಡಿಸಿ, ಮುನಿಸಿಕೊಂಡಿರುವ ಮಹಾಲಕ್ಷ್ಮಿಯನ್ನು ಮನೆಬಾಗಿಲಿಗೆ ಕರೆತರುವ ಸಿದ್ಧ ಯಂತ್ರಗಳು ಇಂದು ಧಾರಾಳವಾಗಿ ದೊರೆಯುತ್ತಿವೆ. ದಿನಬೆಳಗಾದರೆ ಟಿ.ವಿ. ಚಾನೆಲ್ಲುಗಳು ದತ್ತು ತೆಗೆದುಕೊಂಡ (ಅಥವಾ ಚಾನೆಲ್ಲುಗಳನ್ನು ದತ್ತು ತೆಗೆದುಕೊಂಡ) ಸ್ವಾಮೀಜಿಗಳು, ಬಾಬಾಗಳು, ಜನ್ಮ ಕುಂಡಲಿ, ಜಾತಕಗಳನ್ನಿಟ್ಟುಕೊಂಡು ಕುಳಿತು, ಹುಟ್ಟೇ ಕಾರಣವಾಗಿ ಕಷ್ಟಕೋಟಲೆಗಳಿಗೆ ಗುರಿಯಾದ ಜನಗಳ ಸಂಕಷ್ಟಗಳನ್ನು ದೂರ ಮಾಡುವ ದೇವರುಗಳೇ ತಾವೆಂಬಂತೆ ಚಿತ್ರವಿಚಿತ್ರವಾದ ಪೂಜಾ ವಿಧಿ-ವಿಧಾನಗಳನ್ನು ಧಾರಾಳವಾಗಿ ಬೋಧಿಸುತ್ತಾರೆ. ಮಗುವಿಗೆ ಮೊದಲ ಗುರುವಾಗಬೇಕಾದ ನಮ್ಮ ತಾಯಂದಿರೂ ಇಂಥ ಪೂಜಾ ವಿಧಿ ನೇಮಗಳನ್ನು ಚಾಚೂ ತಪ್ಪದೆ ಪಾಲಿಸುವಲ್ಲಿ ನಿರತರಾಗಿದ್ದಾರೆ. ಅವರಿಗೆ ಕುವೆಂಪು, ಕಾರಂತ, ಬೇಂದ್ರೆ, ತ್ರಿವೇಣಿ, ಗೌರಮ್ಮ, ವೈದೇಹಿ ಇವರಾರೂ ಬೇಕಿಲ್ಲ. (ಕೆಲವರಿಗೆ ಇವರಾರೆಂದು ಗೊತ್ತೂ ಇಲ್ಲ !). ಇಂಥ ವಿಷಮ ಪರಿಸ್ಥಿತಿಯಲ್ಲಿ ವೈಚಾರಿಕತೆ ಎಂಬುದನ್ನು ಗ್ರಹಿಸುವುದು, ಅರ್ಥೈಸುವುದು ಹೇಗೆ ? ಎಂಬುದು ಆರಂಭದಲ್ಲೇ ಎದುರಾಗುವ ಯಕ್ಷ ಪ್ರಶ್ನೆ.

ಈ ಮತ ಮೌಢ್ಯಗಳು ಅಧಿಕವಾಗಿ ಸಮಾಜದಲ್ಲಿ ಭೇದಭಾವಗಳು ಬೆಳೆದು ಸಮಾಜದ ಸ್ವಾಸ್ಥ್ಯವನ್ನು ಕೆಡಿಸಿದಾಗಲೆಲ್ಲ ಅವುಗಳನ್ನು ಪ್ರಶ್ನಿಸುವ, ಅವುಗಳಿಂದಾಗುವ ಅನಾಹುತಗಳನ್ನು ತಪ್ಪಿಸುವ ಕೆಲಸವನ್ನು ಹಲವಾರು ಮಹಾನುಭಾವರು ಮಾಡಿದ್ದಾರೆ, ಮಾಡುತ್ತಲೂ ಇದ್ದಾರೆ. ಆದರೆ ಅವರ ಮಾತುಗಳನ್ನು ಕೇಳಿಸಿಕೊಳ್ಳುವ ವ್ಯವಧಾನವಿಲ್ಲದ ಒಂದು ಗುಂಪು ಅವರ ತತ್ವಗಳನ್ನು ವಿರೋಧಿಸುತ್ತ ಅವುಗಳಿಗೆ ವಿಪರೀತ ತರ್ಕಗಳನ್ನು ಕೊಟ್ಟು ಜನಸಾಮಾನ್ಯರನ್ನು ದಾರಿ ತಪ್ಪಿಸುವ ಕುಹಕಗಳು ಹಿಂದಿನಿಂದಲೂ ನಡೆಯುತ್ತಲೇ ಬಂದಿವೆ.

# ಸಾಹಿತ್ಯದಲ್ಲಿ ವೈಚಾರಿಕತೆಗೆ ಪ್ರಾಮುಖ್ಯತೆ ಇರಬೇಕು



ಗೆಲಿಲಿಯೋ ಭೂಮಿ ದುಂಡಾಗಿದೆಯೆಂದು, ಅದು ಸೂರ್ಯನ ಸುತ್ತಲೂ ಸುತ್ತುತ್ತದೆಂದು ಹೇಳಿದ್ದಕ್ಕೆ ಅವನು ಧರ್ಮಶಾಸ್ತ್ರಕ್ಕೆ ವಿರುದ್ಧವಾದ ಮಿಥ್ಯೆಯನ್ನು ಹೇಳಿದನೆಂದು ಅವನನ್ನು ಅಪರಾಧಿ ಎಂದು ಘೋಷಿಸಿ, ವಿಚಾರಣೆಗೊಳಪಡಿಸಿ ಅವನ ಹೇಳಿಕೆಯನ್ನು ಹಿಂಪಡೆಯುವಂತೆ ಮಾಡಲಾಯಿತು. ಕಂದಾಚಾರಗಳನ್ನು ಪ್ರಶ್ನಿಸಿದ ಚಾರ್ವಾಕರಿಗೆ ರಾಕ್ಷಸಪಟ್ಟವನ್ನು ಕಟ್ಟಿ ದೂರವಿರಿಸಲಾಯಿತು. 'ಪ್ರೀತಿಯೇ ದೇವರು' ಎಂದ ಗೌತಮ ಬುದ್ಧನನ್ನು ಈ ದೇಶದಿಂದಲೇ ಹೊರಗೆ ಕಳಿಸಲಾಯಿತು (ಸರಳ ತತ್ವಗಳಿಂದಾಗಿ ಆತನ ಜನಪ್ರಿಯತೆ ಹೆಚ್ಚಾಗತೊಡಗಿದಾಗ ಅವನನ್ನು ದಶಾವತಾರಗಳಲ್ಲಿ ಸೇರಿಸಿಕೊಳ್ಳುವ ಪ್ರಯತ್ನವನ್ನೂ ಮಾಡಲಾಯಿತು). ರಾಜಸತ್ತೆ ಮತ್ತು ಪುರೋಹಿತಶಾಹಿ ಶಕ್ತಿಗಳ ಮಧ್ಯೆ ಸಿಕ್ಕು ಶಿವಶರಣರ ಪಾಡು ಏನಾಯಿತೆಂಬುದು ಇಡೀ ಲೋಕಕ್ಕೇ ಗೊತ್ತು. ಗಾಂಧೀಜಿ, ರಾಮ ಮನೋಹರ ಲೋಹಿಯಾ, ಡಾ॥ ಬಿ. ಆರ್. ಅಂಬೇಡ್ಕರ್‌ರಂಥವರೂ ಟೀಕೆಗೆ ಗುರಿಯಾದರು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪಂಪನ ಕಾಲದಿಂದಲೂ ಈ ಮೌಢ್ಯತೆಯನ್ನು ಧಿಕ್ಕರಿಸುವ ಪ್ರಯತ್ನಗಳು ಕೆಲವೆಡೆ ಢಾಳಾಗಿಯೂ, ಕೆಲವೆಡೆ ಮಸುಕಾಗಿಯೂ ಕಾಣಸಿಗುತ್ತವೆ. ಆದರೆ ಹೀಗೆ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯ ಓರೆಕೋರೆಗಳನ್ನು ಕುರಿತು ಮಾತಾಡಿದಾಗಲೆಲ್ಲ ಸಮಾಜಸುಧಾರಕರೂ, ಸಾಹಿತಿಗಳೂ ಸಂಕಷ್ಟಗಳನ್ನೆದುರಿಸಿದ್ದಾರೆ. ಎಪ್ಪತ್ತರ ದಶಕದಲ್ಲಿ "ಬೂಸಾ ಸಾಹಿತ್ಯ" ಎಂದು ಹೇಳಿಕೆ ನೀಡಿ ಬಸವಲಿಂಗಪ್ಪನವರು ಅಧಿಕಾರವನ್ನೇ ಕಳೆದುಕೊಂಡರು. ಕುವೆಂಪು 'ಶೂದ್ರ ತಪಸ್ವಿ' ನಾಟಕವನ್ನು ಬರೆದಾಗ ವಿದ್ವಜ್ಜನರಿಂದಲೇ ಟೀಕೆಗೆ ಗುರಿಯಾಗಬೇಕಾಯ್ತು. ತಮ್ಮ ಬರಹದ ಮೂಲಕ ಕನ್ನಡ ಸಾಹಿತ್ಯಕ್ಕೆ ವೈಚಾರಿಕ ಹೊಳಪು ನೀಡಿದ ಪಿ. ಲಂಕೇಶ್, ಯು. ಆರ್. ಅನಂತಮೂರ್ತಿ, ಎಚ್. ಎಸ್. ಶಿವಪ್ರಕಾಶ್, ಗಿರೀಶ ಕಾರ್ನಾಡ, ಚಂದ್ರಶೇಖರ ಪಾಟೀಲರಂಥವರೂ ಟೀಕೆಗೆ ಗ್ರಾಸವಾದರು. ವಿಚಿತ್ರವೆಂದರೆ ಈ ರೀತಿಯ ಮೌಢ್ಯದ ನಡೆ ಹಿಂದಿನದಕ್ಕಿಂತಲೂ ಇಂದು ಹೆಚ್ಚು ವ್ಯಾಪಕವಾಗಿ ಅದೂ ಸುಶಿಕ್ಷಿತ ಸಮುದಾಯದಲ್ಲಿಯೇ ಕಂಡುಬರುತ್ತಿದೆ.

**ಸಾಹಿತಿ – ಸಾಹಿತ್ಯ**

ಸಾಹಿತಿಯಾದವನು ತನ್ನ ವಿಶೇಷ ಪ್ರತಿಭೆಯ ಸಹಾಯದಿಂದ ತಾನು ಕಂಡುಕೊಂಡ ದರ್ಶನವನ್ನು ಜನಕ್ಕೆ ರುಚಿಸುವಂತೆ ಉಣಬಡಿಸುತ್ತಾನೆ. ಈ ಅರ್ಥದಲ್ಲಿ ಆತ ನಿಜವಾಗಲೂ ಒಬ್ಬ ಋಷಿ. (ನಮ್ಮ ಹಿರಿಯರು "ನಾನೃಷಿ ಕುರುತೇ ಕಾವ್ಯಂ" ಎಂದು ಹೇಳಿದ್ದು ಇದೇ ಅರ್ಥದಲ್ಲಿ). ಅವನ ಪ್ರತಿಭೆ ಅದು

"ನವನವೋನ್ಮೇಷಶಾಲಿನಿ". ಅದಕ್ಕೇ ಲಾಕ್ಷಣಿಕರು ಸಾಹಿತ್ಯವನ್ನು "ಶಬ್ದಾರ್ಥೌ ಸಹಿತೌ ಕಾವ್ಯಂ" (ಶಬ್ದವೂ ಅರ್ಥವೂ ಸ-ಹಿತವಾಗಿರುವುದೇ ಕಾವ್ಯ) ಎಂದೂ 'ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವುದೇ ಕಾವ್ಯ' ಎಂದೂ ಅದರ ಆತ್ಮ 'ಧ್ವನಿ' ಎಂದೂ ಅದರ ಪ್ರಯೋಜನವನ್ನು "ಕಾವ್ಯಂ ಯಶಸೇರ್ಥ ಕೃತೇ ವ್ಯವಹಾರಮಿದೇ ಸದ್ಯಃ ಪರಿನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ" ಎಂದು ಹೇಳಿದ್ದಾರೆ. ಸಾಹಿತ್ಯದಿಂದ ಅರ್ಥ (ಹಣ) ಮತ್ತು ಯಶಸ್ಸುಗಳಂತೂ ಖಂಡಿತವಾಗಿಯೂ ದೊರಕುತ್ತವೆ. ಆದರೆ ಅದರ ಬಹು ಮುಖ್ಯ ಪ್ರಯೋಜನ ವೆಂದರೆ ಅದು "ಕಾಂತೆಯಂತೆ ಉಪದೇಶ ಮಾಡುವುದು." ಈ ಅರ್ಥದಲ್ಲಿ ಸಾಹಿತ್ಯವು ಇತರ ಶಾಸ್ತ್ರ ಗ್ರಂಥಗಳಿಗಿಂತ ಭಿನ್ನವೂ ಮಧುರವೂ ಪರಿಣಾಮಕಾರಿಯೂ ಆಗುವುದರ ಜೊತೆಗೆ ಸಹೃದಯನಿಗೆ ಒಳಿತು ಕೆಡುಕುಗಳ ಕುರಿತು ತಿಳಿವಳಿಕೆಯನ್ನೂ ನೀಡುವ ಜವಾಬ್ದಾರಿಯುಳ್ಳದ್ದಾಗಿದೆ ಎಂಬುದು ನಿತ್ಯ ನಿಚ್ಚಳ.

'ಆನು ಒಲಿದಂತೆ ಹಾಡುವೆ' ಎಂದ ಬಸವಣ್ಣ, 'ಕೊಡದಿರು ಶರಧಿಗೆ ಷಟ್ಪದಿಯ ದೀಕ್ಷೆಯನು' ಎಂದ ವಿ. ಕೃ. ಗೋಕಾಕ್, ಸಾಹಿತ್ಯ ಅಭಿವ್ಯಕ್ತಿಯ ಕುರಿತ ಸ್ವಾತಂತ್ರ್ಯ ವನ್ನು ಮತ್ತಷ್ಟು ವಿಸ್ತರಿಸಿದರು. ಜನ ಬದುಕಬೇಕೆಂದು ಕಾವ್ಯ ಬರೆದ ರಾಘವಾಂಕ, ರಾಜಸತ್ತೆಯನ್ನು ಧಿಕ್ಕರಿಸಿ ನಿಂತ ಹರಿಹರ ಮುಂತಾದವರು ಸಾಹಿತ್ಯಕ್ಕೊಂದು ನೆಲೆ, ಬೆಲೆಯನ್ನು ತಂದುಕೊಟ್ಟರು. ಡಿ.ವಿ.ಜಿ. "ಕಾವ್ಯವು ದೊಂಬರ ಆಟದಂತಲ್ಲ, ಇಸ್ಪೀಟು ಚಮತ್ಕಾರವೂ ಅಲ್ಲ, ಅದು ಉತ್ತಮವಾದ ಜೀವನ ಮಾರ್ಗದ ದೀವಿಗೆ" ಎಂದರು. ಹಾಗಾಗಿ ವರ್ತಮಾನದ ನಮ್ಮ ಬದುಕಿಗೆ ತೀವ್ರವಾಗಿ ಸ್ಪಂದಿಸುತ್ತ ನಮ್ಮನ್ನು ಸನ್ಮಾರ್ಗದಲ್ಲಿ ನಡೆಸಬೇಕಾದ ಗುರುತರವಾದ ಜವಾಬ್ದಾರಿ ಸಾಹಿತ್ಯಕ್ಕಿದೆ.

**ಸಾಮಾಜಿಕ ನ್ಯಾಯ ನಿಷ್ಠೆ**

ಸಮಾಜವೆಂದಾಕ್ಷಣ ಇಂದು ಅದು ಒಂದು ಜಾತಿಯ ಮಾರ್ದನಿಯಂತೆಯೇ ಕೇಳಿಸುತ್ತಿದೆ. ಹಿಂದೆ ವರ್ಣ, ವರ್ಗಗಳಲ್ಲಿ ಒಡೆದುಹೋದ ನಮ್ಮ ಸಮಾಜ ಇಂದಿಗೂ ಅದರ ಗಾಯಗಳ ನೋವನ್ನನುಭವಿಸುತ್ತಿದೆ. ವಿಚಿತ್ರವೆಂದರೆ, ಜಾಗತೀಕರಣದ ಈ ಸಂದರ್ಭದಲ್ಲೂ ಕೆಲವರು ಆ ಗಾಯಗಳಿಗೆ ಮತ್ತೆ ಮತ್ತೆ ಉಪ್ಪು ಸವರಿ ಅವುಗಳನ್ನು ನಿರಂತರವಾಗಿ ತಾಜಾ ಆಗಿಡುವ ಪ್ರಯತ್ನವನ್ನು ಮಾಡುತ್ತಿದ್ದಾರೆ (ಹೊಸ ಗಾಯಗಳನ್ನೂ ಮಾಡುತ್ತಿದ್ದಾರೆ). ಸಂದರ್ಶನವೊಂದರಲ್ಲಿ ನಮ್ಮ ಕನ್ನಡದ ಖ್ಯಾತ ರಂಗಕಲಾವಿದರೊಬ್ಬರು "ಜಾತಿ ನಮ್ಮ ಹಿರಿಯರಿಂದ ಮಾಡಿದ್ದು, ಅದು ನಮ್ಮ ಸಂಸ್ಕೃತಿ, ಅದು ಇರಬೇಕು" ಎಂದು ತಮ್ಮ ಘನತೆಗೊಪ್ಪಲಾರದ ಅತ್ಯಂತ ಬಾಲಿಶವಾದ ಹೇಳಿಕೆ ನೀಡಿ ತೀರಾ ಸಣ್ಣವರಾದರು. ಜಾತಿ ಎಂಬುದು ಹಿಂದೂ ಧರ್ಮಕ್ಕಂಟಿದ ಕಳಂಕವಾಗಿದ್ದರೂ ಅಂಥ ವಿಷವನ್ನು 'ಸಂಸ್ಕೃತಿ' ಎಂದು ಹೇಳುವ ಇಂಥ ಸಾಂಸ್ಕೃತಿಕ ನಾಯಕರಿಗೇನು ಹೇಳಬೇಕೋ. ಇಂಥ ಬುದ್ಧಿಜೀವಿಗಳದೇ ಹೀಗಾದರೆ ಇನ್ನು ಅವರನ್ನೇ ತಮ್ಮ ಆದರ್ಶವೆಂದು ತಿಳಿದ ಶ್ರೀಸಾಮಾನ್ಯರ ಪಾಡೇನು ? "ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯಾ ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ" ಎಂದು ವಿಶ್ವಮಾನವತೆಯನ್ನು ಸಾರಿದ ಬಸವಣ್ಣನ ನಾಡಿನಲ್ಲೇ ನಾವೆಲ್ಲ ಇದ್ದೇವೆಯೇ ಎಂದು ಒಮ್ಮೊಮ್ಮೆ ಸಂಶಯ ಬರುತ್ತದೆ.

ಕುವೆಂಪು "ಸಿಲುಕದಿರಿ ಮತವೆಂಬ ಮೋಹದ ಜ್ಞಾನಕ್ಕೆ, ಮತಿಯಿಂದ ದುಡಿಯಿರೈ ಲೋಕ ಹಿತಕೆ" ಎಂದು ಹೇಳಿದರು. ತಮ್ಮ ವಿಶ್ವಮಾನವ ಸಂದೇಶದಲ್ಲಿ "ಮಗು ಹುಟ್ಟುತ್ತ ವಿಶ್ವಮಾನವನೇ ಆಗಿರುತ್ತಾನೆ, ಆದರೆ ಬೆಳೆಸುತ್ತ ನಾವು ಅವನಿಗೆ ಜಾತಿ, ವರ್ಣ, ವರ್ಗ ಮುಂತಾದ ಉಪಾಧಿಗಳಿಂದ ಬದ್ಧನನ್ನಾಗಿಸುತ್ತೇವೆ."; "ಮತದಿಂದ ದೂರಾಗು, ಅಧ್ಯಾತ್ಮ ಶರಣಾಗು, ಮೌಢ್ಯಕ್ಕೆ ದೂರಾಗು, ವಿಜ್ಞಾನಮತಿಯಾಗು" ಎಂದು ಹೇಳಿದರು. ಆದರೆ ಇಂದು ಈ ಮತದ ಮಾದಕತೆ ಹಿಂದಿಗಿಂತಲೂ ಹೆಚ್ಚಾಗಿಯೇ ರಾರಾಜಿಸುತ್ತಿದೆ. ಮೌಢ್ಯವನ್ನು ವೈಜ್ಞಾನಿಕ ರೀತಿಯಲ್ಲಿ ಮರುಸ್ಥಾಪಿಸುವ, ಅಪಾಯಕಾರಿ ಪ್ರಯತ್ನಗಳೂ ನಡೆಯುತ್ತಿವೆ.

ಮಕ್ಕಳಲ್ಲಿ ವೈಚಾರಿಕ ಎಚ್ಚರವನ್ನು ಮೂಡಿಸಬೇಕಾದ ಶಾಲಾ ಕಾಲೇಜುಗಳಲ್ಲೇ ಇಂದು ಮೌಢ್ಯದ ಕತ್ತಲು ಕವಿಯುತ್ತಿದೆ. ಕುವೆಂಪು ಹೇಳುತ್ತಿದ್ದರು, "ವಿಜ್ಞಾನ ಪಾಠ ಹೇಳಿಕೊಡುವ ಅಧ್ಯಾಪಕನೇ ತನ್ನ ಸ್ವಂತ ಬದುಕಿನಲ್ಲಿ ರಾಹುಕಾಲ, ಪಂಚಾಂಗ, ವಾರಭವಿಷ್ಯ ಇತ್ಯಾದಿ ಮೂಢನಂಬಿಕೆಗಳಿಂದ ಮೂರು ಹೊತ್ತೂ ಮತ ಮೂರ್ಖ ನಾಗಿದ್ದರೆ ವಿದ್ಯಾರ್ಥಿಗಳಿಗೆ ಹೇಗೆ ತಾನೆ ಸಿದ್ಧಿಸೀತು ವಿಚಾರದೃಷ್ಟಿ ?" ಈ ಮಾತುಗಳನ್ನು ಅವರು ಸುಮಾರು ಐವತ್ತು ವರ್ಷಗಳ ಹಿಂದೆಯೇ ಹೇಳಿದ್ದರು. ಆದರೆ ಇಂದಿಗೂ ಸ್ಥಿತಿ ಬದಲಾಗಿಲ್ಲ. ಈಗಲೂ ಶಾಲಾ ಕಾಲೇಜುಗಳಲ್ಲಿ ಮಳೆಗಾಗಿ ಪೂಜೆ ಪ್ರಾರ್ಥನೆಗಳು ನಡೆಯುತ್ತವೆ, ಜೊತೆಗೆ ಭೂಗೋಲ ಶಾಸ್ತ್ರ, ವಿಜ್ಞಾನ ತರಗತಿಗಳಲ್ಲಿ ಮಳೆ ಹೇಗಾಗುತ್ತದೆ, ಕಡಿಮೆ ಮಳೆಯಾಗಲು ಕಾರಣಗಳೇನು ಎಂಬುದನ್ನೂ ಬೋಧಿಸ ಲಾಗುತ್ತದೆ. ಹಳ್ಳಿ ಪಟ್ಟಣವೆನ್ನದೆ ಕತ್ತೆಯ ಮೆರವಣಿಗೆಯಾಗುತ್ತದೆ, ಕಪ್ಪೆಯ ಮದುವೆಯಾಗುತ್ತದೆ. ಇವೆಲ್ಲವುಗಳಿಂದ ನಾವು ನಮ್ಮ ಮುಂದಿನ ಪೀಳಿಗೆಗೆ ಯಾವ ಸಂದೇಶವನ್ನು ಕೊಡುತ್ತಿದ್ದೇವೆ ? ಎಳೆಯ ಮನಸ್ಸುಗಳಲ್ಲಿ ಏನನ್ನು ತುಂಬುತ್ತಿದ್ದೇವೆ ?

ಬಸವಣ್ಣ "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂದು ದೇವಾಲಯ ಸಂಸ್ಕೃತಿಯನ್ನು ನಿರಾಕರಿಸಿದ. ಆ ಮೂಲಕ ಧರ್ಮಕ್ಕೆ ಒಂದು ಚಲನಶೀಲತೆಯನ್ನೂ ಗತಿಶೀಲತೆಯನ್ನೂ ಕೊಟ್ಟ. ದೇವಾಲಯ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದ ಸಿದ್ಧರಾಮನನ್ನು ಕಂಡು, "ಸಕಲ ಕಲ್ಲು ಕಡಿದು, ಕಲ್ಲಿಗೆ ಶಿಖರ ದೇಗುಲವೆಂದು ಮಾಡಿಸಿ ಮಕರಿಸುವರಿವರೊಡ್ಡರಲ್ಲದೆ ಸಿದ್ಧರಲ್ಲ" ಎಂದು ಹೇಳಿದ ಅಲ್ಲಮ ಪ್ರಭು ('ಚಾಮರಸನ ಪ್ರಭುಲಿಂಗಲೀಲೆ'ಯಲ್ಲಿ). ಆದರೂ ನಾವಿಂದು ಸ್ಥಾವರಗಳ ನಿರ್ಮಾಣಕ್ಕಾಗಿ ನಮ್ಮೆಲ್ಲ ಹಣ, ಬುದ್ಧಿ ವ್ಯಯ ಮಾಡುತ್ತಿದ್ದೇವೆ. ಆ ಮೂಲಕ ಬಸವಣ್ಣನ ತತ್ವಗಳನ್ನು ಗಾಳಿಗೆ ತೂರಿಬಿಡುತ್ತಿದ್ದೇವೆ.

ಸಾಮಾನ್ಯವಾಗಿ ಸಮಾಜದ ಉದ್ಧಾರಕ್ಕಾಗಿ, ಸಮಾನತೆಗಾಗಿ, ಮಾನವೀಯ ಮೌಲ್ಯಗಳಿಗಾಗಿ ದುಡಿದ ಮಹಾನ್ ಚೇತನಗಳನ್ನನುಸರಿಸುವವರಲ್ಲಿ ಎರಡು ರೀತಿಯ ಜನರನ್ನು ನಾವು ಕಾಣುತ್ತೇವೆ. ಒಂದು, ಅವರ ತತ್ವ ಸಿದ್ಧಾಂತಗಳನ್ನು ಸರಿಯಾಗಿ ಅರಿತುಕೊಂಡು, ಜನಮಾನಸಕ್ಕೆ ತಲುಪಿಸುವ ಮಹತ್ಕಾರ್ಯ ಮಾಡುತ್ತಿರುವವರು (ಇಂಥವರ ಸಂಖ್ಯೆ ತೀರಾ ಕಡಿಮೆ). ಇನ್ನೊಂದು, ಅವರ ತತ್ವಸಿದ್ಧಾಂತಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಅವರನ್ನೊಬ್ಬ ಕೋಮಿನ ನಾಯಕನನ್ನಾಗಿಸಿ ಅವರ ಭಾವಚಿತ್ರವನ್ನು ಹಾಕಿ, ಅವರ ವಿಗ್ರಹವನ್ನು ಪ್ರತಿಷ್ಠಾಪಿಸಿ ಅದರ ಮುಂದೆ ದೊಣ್ಣೆ ಹಿಡಿದು ನಿಲ್ಲುವವರು (ಇಂಥವರ ಸಂಖ್ಯೆ ಈಗ ಗಣನೀಯವಾಗಿ ಹೆಚ್ಚಿದೆ).

ಈ ಮತ ಮೌಢ್ಯದ ಪ್ರಭಾವ ಸಾಹಿತ್ಯ ಚರಿತ್ರೆಕಾರರನ್ನೂ ಬಿಟ್ಟಿಲ್ಲ. ಖ್ಯಾತ ವಿಮರ್ಶಕ ಡಾ॥ ಕಿ. ರಂ. ನಾಗರಾಜ ಅವರು "ನಮ್ಮ ಯಾವ ಸಾಹಿತ್ಯ ಚರಿತ್ರೆಯನ್ನೇ ತೆಗೀರಿ, ಜೈನ ಕವಿಗಳು, ವೀರಶೈವ ಕವಿಗಳು, ವೈದಿಕ ಕವಿಗಳು, ಅಂತ ವರ್ಗೀಕರಣ ಮಾಡಿ ಮಾಡಿ ನಮ್ಮೆಲ್ಲ ಸಾಹಿತ್ಯ ಚರಿತ್ರೆ ಗಬ್ಬೆದ್ದು ಹೋಗಿದೆ" ಎಂದು ಒಂದು ಕಾರ್ಯಕ್ರಮದಲ್ಲಿ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದರು.

ಇಂಥ ಸಂದರ್ಭದಲ್ಲಿ ಸಾಹಿತಿಯ ಸಾಹಿತ್ಯದ ಜವಾಬ್ದಾರಿ ಏನು ? ಸಾಮಾನ್ಯ ಓದುಗನ ನಿರೀಕ್ಷೆಗಳೇನು ? ಎಂಬುದರ ಕುರಿತು ಚಿಂತನ ಮಂಥನ ಮಾಡುವುದು ಇಂದಿನ ಅಗತ್ಯವೆನಿಸುತ್ತದೆ. ಖ್ಯಾತ ಸಂಶೋಧಕರಾದ ಡಾ॥ ಎಂ. ಎಂ. ಕಲಬುರ್ಗಿ ಯವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮವೊಂದರಲ್ಲಿ "ಸಾಹಿತ್ಯ ಪರಿಷತ್ತು ಸಾಂಸ್ಕೃತಿಕ ಪರಿಷತ್ತು ಎಂದೇಕೆ ಆಗಬಾರದು ?" ಎಂಬ ಪ್ರಶ್ನೆಯನ್ನೆತ್ತಿದ್ದರು. ಸಾಹಿತ್ಯ ಪರಿಷತ್ತು ಎಂಬುದು ಸಾಂಸ್ಕೃತಿಕ ಆಯಾಮಗಳನ್ನೂ ಒಳಗೊಳ್ಳ ಬೇಕೆಂಬುದು ಅವರ ಕಾಳಜಿಯಾಗಿತ್ತು. ಸಂಸ್ಕೃತಿ ಬಂಧಗಳನ್ನು ಬೆಸೆದರೆ, ರಾಜಕೀಯ ಸಂಬಂಧಗಳನ್ನು ಒಡೆಯುತ್ತದೆ. ಸಾಹಿತ್ಯವೆಂಬುದು ರೋಗಗ್ರಸ್ತ ಮನಸ್ಸು ಗಳನ್ನು ತಿದ್ದಿ ಮನುಷ್ಯ ಮನುಷ್ಯರನ್ನು ಬೆಸೆಯುವ ಒಂದು ಅಪೂರ್ವ ಸಾಧನ.

ರಾಷ್ಟ್ರಕವಿ ಕುವೆಂಪು ಅವರು ಸಾಹಿತ್ಯ ಹೇಗಿರಬೇಕೆಂಬುದನ್ನು ಕುರಿತು "ಸಾಹಿತ್ಯವು ಸರ್ವೋದಯ, ಸಮನ್ವಯ ಹಾಗೂ ಪೂರ್ಣದೃಷ್ಟಿಯನ್ನು ಆಧರಿಸಬೇಕು. ಸಾಹಿತಿಗಳು ಮನುಜ ಮತ, ವಿಶ್ವಪಥದೆಡೆಗೆ ಹೋಗಬೇಕು. ಆ ಮತ ಈ ಮತ ಅಲ್ಲ. ಮತೀಯತೆಯಂತಹ ಮೂರ್ಖ ಸಂಕುಚಿತತೆ ಹಾಗೂ ಅವಿವೇಕದ ಪ್ರವೃತ್ತಿಯನ್ನು ತೊರೆಯಬೇಕು" ಎಂದು ಹೇಳಿದರು.

ವರ್ಣ, ವರ್ಗಗಳ ಕೊಳಕಿನಿಂದ ಕಲುಷಿತವಾದ ವ್ಯವಸ್ಥೆಯನ್ನು ಪರಿಮಾರ್ಜನೆ ಗೊಳಿಸಿ, 'ಇವ ನಮ್ಮವ, ಇವ ನಮ್ಮವ'ನೆಂದೆನಿಸುವ ಸೋದರಭಾವವನ್ನು ತರಬಲ್ಲ ಪ್ರಾಮಾಣಿಕ ಕಾಳಜಿ ಮತ್ತು ಸಾಮಾಜಿಕ ನ್ಯಾಯ ನಿಷ್ಠೆ ನಮ್ಮ ಸಾಹಿತ್ಯವನ್ನಾವರಿಸಲಿ, ಏನೇ ಟೀಕೆಗಳು ಬಂದರೂ ಎದೆಗುಂದದೆ ಮೌಢ್ಯವನ್ನು ಪ್ರಶ್ನಿಸುವ, ತಿದ್ದುವ ಧೈರ್ಯ ನಾವು ಆರಾಧಿಸುವ, ಮೆಚ್ಚುವ ಸಾಹಿತಿಗಳಿಗೆ ಬರಲಿ ಎಂಬುದು ಒಬ್ಬ ಸಾಮಾನ್ಯ ಸಾಹಿತ್ಯಪ್ರೇಮಿಯಾದ ನನ್ನ ಮತ್ತು ನನ್ನಂಥವರ ಆಶಯ.

**ಮಾರುತಿ ದಾಸಣ್ಣವರ**
ಜವಾಹರ ನವೋದಯ ವಿದ್ಯಾಲಯ, ಟೇವಾ, (ಮಂಝನ್‌ಪುರ್)
ಕೌಶಾಂಬಿ ಜಿಲ್ಲೆ, ಉತ್ತರ ಪ್ರದೇಶ – ೨೧೨ ೨೦೭

**ಶಿವಲಿಂಗಪ್ಪ ಸಿ. ಬಸವಣ್ಣೋರ್**

# ಆಕ್ರಂದನ



ಶಾರ್ಟ್‌ಕಟ್ ರಸ್ತೆ ಯಾವಾಗಲೂ ಕಲ್ಲು ಮುಳ್ಳು ತಗ್ಗು ಹೊಡ್ಡುಗಳಿಂದ ಕೂಡಿರುತ್ತೆ. ಹೀಗೆ ಒಂದು ರಸ್ತೆ. ಈ ರಸ್ತೆಯ ಮೇಲೆ ಓಡಾಡುವ ಜನರು ದ್ವಿಚಕ್ರವಾಹನ ಸವಾರರು ಈ ರಸ್ತೆ ಬಗ್ಗೆ ಮಾತಾಡುತ್ತ, ಹಾಳಾದ ಈ ರಸ್ತೆ ಯಾವಾಗ ಸರಿ ಹೋಗುತ್ತೊ, ಮಹಾನಗರ ಸಭೆ ಮತ್ತು ಲೋಕೋಪಯೋಗಿ ಇಲಾಖೆಯವರು ಅದ್ಯಾವಾಗ ಈ ರಸ್ತೆಗೆ ಡಾಂಬರೀಕರಣ ಮಾಡುತ್ತಾರೋ, 'ಇಂಥ ಹದಗಟ್ಟ ರೋಡ ಮ್ಯಾಲ ಗಾಡಿ ಓಡ್ಸಿ ಓಡ್ಸಿ ಮೈಯೆಲ್ಲಾ ಬ್ಯಾನಿ ಎದ್ದ ಹೋಗ್ಯಾದ' ಎಂದು ಶಪಿಸುತ್ತ ನಿಧಾನಗತಿಯಲ್ಲಿ ಸಾಗುತ್ತಿದ್ದರು. ಮುಂದೊಂದು ದಿನ ಆ ಕಾಲ ಬಂದೇಬಿಟ್ಟಿತು. ಕೆಲವೇ ತಿಂಗಳಲ್ಲಿ ರಸ್ತೆ ಕಲ್ಲು, ಕಂಕರ್, ಮಣ್ಣು ಮತ್ತು ಡಾಂಬರುಗಳಿಂದ ತಯಾರಾದ ಕಿರುಹೈವೇ ತರಹ ಸಮತಲವಾಗಿ ಮಹಾನಗರ ಸಭೆ ಮತ್ತು ಲೋಕೋಪಯೋಗಿ ಇಲಾಖೆಯಿಂದ ತಯಾರಾಗಿ ಮಾರ್ಪಟ್ಟು ನಿಂತುಬಿಟ್ಟಿತು. ಆಗ ವಾಹನ ಸವಾರರೆಲ್ಲ ಆಹಾ... ಈ ರಸ್ತೆ ಮಾಡಿಸಿದವರಿಗೆ ಒಂದಿಷ್ಟು ಪುಣ್ಯಾ ಬರ್‍ಲಿ ಎಂದು ಹರಸುತ್ತಾ ಸಾಗುತ್ತಿದ್ದರು.

ಡಾಂಬರು ರಸ್ತೆ ಮಾಡಿ ಒಂದು ವರ್ಷವಾಗಿತ್ತು. ರಸ್ತೆ ದ್ವಿಚಕ್ರವಾಹನದ ಸವಾರರಿಗೆ ನೆಮ್ಮದಿ ತಂದಿತ್ತು. ಪಡ್ಡೆ ಹುಡುಗರಿಗೆ ಈ ಡಾಂಬರು ರಸ್ತೆಯ ಮೇಲೆ ದ್ವಿಚಕ್ರ ವಾಹನ ಓಡಿಸುವುದೆಂದರೆ ಮಜವೋ ಮಜ. ಏಕೆಂದರೆ ಯಾವುದೇ ಅಡೆತಡೆಯಿಲ್ಲದ, ಹೊಡ್ಡು-ತಗ್ಗು ಇರದ ರಸ್ತೆಯಾಗಿ ಅದು ರೂಪುಗೊಂಡಿತ್ತು. ಆ ರಸ್ತೆಯ ಮೇಲೆ ಯುವಕರು ದ್ವಿಚಕ್ರವಾಹನದ ಮೇಲೆ ಕುಳಿತು ಭರ್‍ರನೆ ಧೂಮ್ ಚಲನಚಿತ್ರದಲ್ಲಿನ ಖಳನಾಯಕರು ಓಡಿಸುವ ಹಾಗೆ ಭ್ಯಾ... ಎಂದು ಧ್ವನಿಸುತ್ತ ಸ್ಪರ್ಧೆ ತರಹ ಪೊಲೀಸರಿಗೆ ಚಳ್ಳೆಹಣ್ಣು ತಿನ್ನಿಸುವ ಹಾಗೆ ಕ್ಷಣ ಮಾತ್ರದಲ್ಲಿ ಬಹುದೂರ ಹೋಗಿ ದಾರಿಹೋಕರ ದೃಷ್ಟಿಯಿಂದ ಮಂಗಮಾಯವಾಗಿ ಬಿಡುತ್ತಿದ್ದರು. ಕೆಲವೊಂದು ಸಲ ಸಣ್ಣಪುಟ್ಟ ದುರ್ಘಟನೆಗಳು ಈ ರಸ್ತೆಯ ಮೇಲೆ ಸಂಭವಿಸಿದ್ದವು. ಈ ಡಾಂಬರು ರಸ್ತೆ ಸರಿಸುಮಾರು ಎರಡು ಕಿಲೋಮೀಟರವರೆಗೆ ಇತ್ತು. ರಸ್ತೆಯ ಪಕ್ಕದಲ್ಲಿ ತೋಟಗಾರಿಕೆ ಇಲಾಖೆ ಅದರಲ್ಲಿ ನಾನಾ ತರಹದ ಹೂ, ಹಣ್ಣು ಮತ್ತು ಮನೆಯ ಮುಂದೆ ಕುಂಡದಲ್ಲಿ ಹಚ್ಚಿಡುವ ಫ್ಯಾಶನ್ ಸಸಿಗಳ ಕಸಿ ಕೆಲಸ ಮಾಡಿ ಮಾರುತ್ತಿದ್ದರು. ಈ ತೋಟಗಾರಿಕೆ ಇಲಾಖೆಗೆ ಹತ್ತಿಕೊಂಡು ಎರಡು ಎಕರೆಯ ಸ್ಥಳ ಸ್ಮಶಾನಕ್ಕಾಗಿ ಬಳಕೆಯಾಗಿತ್ತು. ಪಕ್ಕದಲ್ಲೇ ಒಂದು ಹ್ಯಾಂಡಪಂಪ್ ಬೋರವೆಲ್. ಸ್ಮಶಾನದ ಎದುರುಗಡೆಯೇ ಒಂದು ಸಣ್ಣ ಗುಡಿ ಇತ್ತು. ಜನರು ತಮ್ಮ ಮನೆಯವರು, ನೆಂಟರು, ಬೀಗರು ತೀರಿಕೊಂಡವರ ಅಂತ್ಯಸಂಸ್ಕಾರಕ್ಕಾಗಿ ಇಲ್ಲಿಗೆ ಬಂದು ಆಕ್ರಂದನದಿಂದ ರೋದಿಸಿ ಅತ್ತು ಅತ್ತು ಅಂತ್ಯಸಂಸ್ಕಾರವನ್ನು ಈ ಸ್ಮಶಾನದಲ್ಲಿ ಮುಗಿಸಿ, ಮನೆಗೆ ಮರಳುವ ಮುನ್ನ ಪಕ್ಕದಲ್ಲಿದ್ದ ಹ್ಯಾಂಡಪಂಪ್ ಬೋರವೆಲ್ ಕೆಳಗೆ ತಮ್ಮ ಕೈಕಾಲು-ಮುಖ ತೊಳೆದುಕೊಂಡು, ಪಕ್ಕದಲ್ಲಿದ್ದ ಗುಡಿಯ ದೇವತೆಗೆ ದೀಪ ಹಚ್ಚಿ ನಮಸ್ಕರಿಸಿ ತಮ್ಮ ತಮ್ಮ ಮನೆಗೆ ಮರಳುತ್ತಿದ್ದರು.




ರಸ್ತೆಯ ಎದುರು ಅಲ್ಲಲ್ಲಿ ನಾಲ್ಕಾರು ಮನೆಗಳು ಸಾಲಾಗಿ ಇದ್ದವು. ಈ ಮನೆಗಳ ಹತ್ತಿರ ಹರೆಯಕ್ಕೆ ಬಂದಂತಹ ನಾಲ್ಕಾರು ಹೆಣ್ಣು-ಗಂಡು ಬೀದಿ ನಾಯಿಗಳು ವಾಸವಾಗಿದ್ದವು. ಅವು ತಮ್ಮ ಮುಂದಿನ ಪೀಳಿಗೆಗಾಗಿ ಪ್ರಣಯ ಸಂಗಮದಲ್ಲಿ ತೊಡಗಿ ಚೆಲ್ಲಾಟವಾಡುತ್ತ ಚೆನ್ನಾಗಿದ್ದವು. ಕೆಲವೇ ತಿಂಗಳಲ್ಲಿ ಆ ನಾಯಿಗಳಲ್ಲಿನ ಒಂದು ಹೆಣ್ಣು ನಾಯಿ ಗರ್ಭವತಿಯಾಗಿ ಆರು ಕುನ್ನಿಗಳನ್ನು ಹಾಕಿತ್ತು. ಕರಿ ಬಿಳಿ, ಕೆಂಪು ಬಿಳಿ ಬಣ್ಣಗಳಿಂದ ನೋಡಲು ಅವು ತುಂಬ ಚೆನ್ನಾಗಿದ್ದವು. ಅದರಲ್ಲಿ ಒಂದು ಬಿಳಿ ನಾಯಿ ನೋಡಲು ತುಂಬಾನೆ ಆಕರ್ಷಣೀಯವಾಗಿತ್ತು. ತಾಯಿಯು ಈ ನಾಯಿಮರಿಗಳನ್ನು ತುಂಬ ಜಾಗರೂಕತೆಯಿಂದ ಹಾಲುಣಿಸುತ್ತ ಲಾಲನೆ-ಪಾಲನೆಯಲ್ಲಿ ತೊಡಗಿ, ಅಲ್ಲಲ್ಲಿ ಸಿಕ್ಕ ಆಹಾರ ಹುಡುಕಿ ತಿಂದು ಅವುಗಳೊಂದಿಗೆ ತುಂಟಾಟ ವಾಡುತ್ತ ಮುಂದಿನ ಜೀವನದ ಪರಿಪಾಠವನ್ನು ಅವುಗಳಿಗೆ ಕಲಿಸುತ್ತ ಜೀವನ ಕಳೆಯುತಿತ್ತು. ನಾಯಿಮರಿಗಳಿಗೆ ಸುಮಾರು ಒಂದೂವರೆ ಎರಡು ತಿಂಗಳಾಗಿರಬಹುದು. ಅವು ತಾಯಿಯ ಹಿಂದೆ ಎದೆಹಾಲಿಗಾಗಿ ಬೆನ್ನು ಹತ್ತಿ ಸತಾಯಿಸುತ್ತಿದ್ದವು. ತಾಯಿ ಪ್ರಕೃತಿಯ ನಿಯಮದಂತೆ ಅವುಗಳಿಗೆ ಹಾಲು ಕುಡಿಯುವುದನ್ನು ಮರೆಸಿ ಆಹಾರದ ಕಡೆಗೆ ಗಮನ ಹರಿಸುವಂತೆ ಸೂಚಿಸುತ್ತಿತ್ತು. ಹೀಗೆ ದಿನ ಕಳೆದಂತೆ ಒಂದು ದಿನ ರಾತ್ರಿ ಸುಮಾರು ಎಂಟು, ಎಂಟೂವರೆ ಆಗಿರಬಹುದು, ತಾಯಿ ಮತ್ತು ಅದರ ಮರಿಗಳು ಈ ಡಾಂಬರು ರಸ್ತೆಯ ಪಕ್ಕದಲ್ಲಿ ಚಕ್ಕಂದದಿಂದ ಆಟವಾಡುತ್ತಿರುವಾಗ ರಸ್ತೆಯ ಮೇಲೆ ಭರ್‍ರನೆ ದ್ವಿಚಕ್ರ ವಾಹನಗಳು ಓಡಾಡುತ್ತಿದ್ದವು.

---

ಸತ್ತ ತನ್ನ ನಾಯಿಮರಿಯನ್ನೆ ನೋಡುತ್ತ ಸ್ತಬ್ಧವಾಗಿ ನಿಂತು ತಾಯಿ, ಮೈಯಲ್ಲಿನ ಆಕ್ರಂದನ ತಾಳಲಾರದೆ, ನಾಯಿಗಳು ಪ್ರಕೃತಿಯ ವಿಕೋಪದ ಮುನ್ಸೂಚನೆ ಬಂದಾಗ ಕೂಗುವ ಹಾಗೆ ವೂ... ... ವೂ ಎಂದು ಆಕ್ರಂದನದಿಂದ ಕೂಗತೊಡಗಿತು. ಅದರ ಜೊತೆಗೆ ಇನ್ನಿತರ ನಾಯಿಮರಿಗಳೂ ಕೂಗಿ ಆ ಇಡೀ ಪ್ರದೇಶಕ್ಕೆ ಏನೋ ಗಂಡಾಂತರ ಕಾದಿದೆ ಎನ್ನುವ ಹಾಗೆ ಕೂಗಹತ್ತಿದವು.

ಈ ರಸ್ತೆಯ ಮತ್ತೊಂದು ಬದಿಗೆ ಆಹಾರಕ್ಕಾಗಿ ನಾಯಿಕುನ್ನಿಗಳು ದಾಟುತ್ತಿರುವಾಗ ದ್ವಿಚಕ್ರ ವಾಹನ ಓಡಿಸುತ್ತಿದ್ದ ಇಬ್ಬರು ಯುವಕರು, ಮುಂದಿನವ ಹಿಂದಿನವನಿಗೆ ಏನನ್ನೊ ಮಾತಾಡಿಸುತ್ತ ಗಾಡಿ ನಡೆಸುತ್ತಿದ್ದ, ಹಿಂದಿನವ ಕೈಯಲಿ ಒಂದು ಗಂಟಿನ ಮೂಟೆ ಹಿಡಿದುಕೊಂಡಿದ್ದ, ಅವರೆಲ್ಲಿಗೆ ಹೋಗಬೇಕಿತ್ತೊ ಏನೋ! ಆ ಪುಣ್ಯಾತ್ಮರಿಗೆ ಬಹುವೇಗವಾಗಿ ಬುರ್ರನೆ ಓಡುತ್ತಿದ್ದ ವಾಹನ ಆ ರಸ್ತೆ ದಾಟುತ್ತಿದ್ದ ಬಿಳಿ ನಾಯಿಕುನ್ನಿಯ ಮೇಲೆ ನೋಡನೋಡುತ್ತಲೆ ಹಾದುಹೋಯಿತು. ಬಿಳಿ ನಾಯಿಮರಿ ಒಂದೇ ಸಮನೆ ಕುಯಿಂ ಕುಯಿಂ ಎಂದು ಕಿರುಚುತ್ತ ವಿಲಿವಿಲಿ ಒದ್ದಾಡತೊಡಗಿತು. ನಾಯಿಯ ದೇಹದ ಅರ್ಧಭಾಗ ಚಪ್ಪಟೆಯಾಗಿ ಹೊಟ್ಟೆ ಒಡೆದು, ಕಾಲುಗಳು ಚಪ್ಪಟೆಯಾಗಿ, ಅದರ ರಕ್ತ ಡಾಂಬರು ರಸ್ತೆಯ ಮೇಲೆ ಬಣ್ಣದೋಕುಳಿಯಂತೆ ಕೆಂಪು ಕೆಂಪಾಗಿ ಚಿಮ್ಮಿತ್ತು. ಇದನ್ನು ಗಮನಿಸಿದ ಮರಿಯ ತಾಯಿ ಆಕ್ರಂದನದಿಂದ ಹೌಹಾರಿ ಬೊಗಳುತ್ತ ಕುಯಿಂ, ಕುಯಿಂ ಎಂದು ಮರಿನಾಯಿಯ ಹತ್ತಿರ ಬಂದು ಮೂಸುತ್ತ ಅದರ ಮುಖವನ್ನು ತನ್ನ ನಾಲಿಗೆಯಿಂದ ನೆಕ್ಕುತ್ತ ತನ್ನ ಕರುಳಿನ ವೇದನೆಯನ್ನು ಅಭಿವ್ಯಕ್ತಿಸತೊಡಗಿತು. ವಾಹನ ಸವಾರರು ಅವುಗಳನ್ನು ಲೆಕ್ಕಿಸದೆ ಕ್ಷಣಮಾತ್ರದಲ್ಲಿ ಮಾಯವಾಗಿದ್ದರು. ಇತ್ತ ನಾಯಿಮರಿ ಬದುಕುಳಿಯಲು ಹೋರಾಡುತ್ತಿತ್ತು. ತನ್ನ ಸೋದರ ನಾಯಿಮರಿಗಳೆಲ್ಲಾ ರಕ್ತಸಿಕ್ತವಾಗಿ ಬಿದ್ದ ಸಹೋದರ ಮರಿನಾಯಿಯನ್ನು ಕುಯಿಂ... ಕುಯಿಂ ಎಂದು ಚೀರುತ್ತ ತಮ್ಮ ಮೂತಿಯಿಂದ ಅದುಮಿ ಎಬ್ಬಿಸಲು ಪ್ರಯತ್ನಿಸುತ್ತಿದ್ದವು. ಆದರೆ ನಾಯಿ ಮಾತ್ರ ದೀರ್ಘ ಉಸಿರು ಬಿಡುತ್ತಾ ನಾಲಿಗೆ ಹೊರಚಾಚಿ ಉಸಿರಾಟ ಒಳಹೊರಗೆ ಹಾಕುತ್ತ ಧಾಪಿಸುತ್ತಿತ್ತು. ಕಣ್ಣಲ್ಲಿ ಬದುಕುವ ಆಸೆ ಇತ್ತು. ತನ್ನ ಹಿಂದಿನ ದಿನಗಳ ನೆನಪನ್ನು ನೆನಪಿಸಿಕೊಳ್ಳುತಿತ್ತು. ತಾಯಿ ಸಹಾಯಕ್ಕಾಗಿ ಒಂದು ಕಡೆ ಮರಿಯನ್ನು ನೋಡುತ್ತ ಇನ್ನೊಂದು ಕಡೆ ಅದರ ಸುತ್ತಲೂ ತಿರುಗಿ ಆಕ್ರಂದನದಿಂದ ರೋದಿಸುತ್ತಿತ್ತು. ಸ್ವಲ್ಪ ಹೊತ್ತಿನಲ್ಲೆ ಬಿಳಿ ನಾಯಿಮರಿ ಸ್ತಬ್ಧವಾಗಿ ಚಿರನಿದ್ರೆಯಲ್ಲಿ ಮಲಗಿತ್ತು. ತಾಯಿ ರಸ್ತೆಗೆ ನೋಡಿ ದ್ವಿಚಕ್ರ ವಾಹನಗಳತ್ತ ಬೆನ್ನು ಹತ್ತಿ ಬೊಗಳುತ್ತ ಮತ್ತೆ ತನ್ನ ಮರಿಯ ಹತ್ತಿರ ಬಂದು ನಿಲ್ಲುತ್ತಿತ್ತು.

ಕೆಲಹೊತ್ತು ಸತ್ತ ತನ್ನ ನಾಯಿಮರಿಯನ್ನೆ ನೋಡುತ್ತ ಸ್ತಬ್ಧವಾಗಿ ನಿಂತು ತಾಯಿ, ಮೈಯಲ್ಲಿನ ಆಕ್ರಂದನ ತಾಳಲಾರದೆ, ನಾಯಿಗಳು ಪ್ರಕೃತಿಯ ವಿಕೋಪದ ಮುನ್ಸೂಚನೆ ಬಂದಾಗ ಕೂಗುವ ಹಾಗೆ ವೂ... ... ವೂ ಎಂದು ಆಕ್ರಂದನದಿಂದ ಕೂಗತೊಡಗಿತು. ಅದರ ಜೊತೆಗೆ ಇನ್ನಿತರ ನಾಯಿಮರಿಗಳೂ ಕೂಗಿ ಆ ಇಡೀ ಪ್ರದೇಶಕ್ಕೆ ಏನೋ ಗಂಡಾಂತರ ಕಾದಿದೆ ಎನ್ನುವ ಹಾಗೆ ಕೂಗಹತ್ತಿದವು. ಆ ಕೂಗು ಕೇಳುಗರ ಮೈ ಝಲ್ ಎನ್ನಿಸುವಂತೆ ಮೈಯಲ್ಲಿ ನಡುಕ ಹುಟ್ಟಿಸುವಂತಿತ್ತು. ಸ್ವಲ್ಪ ಸಮಯದ ನಂತರ ತಾಯಿ ಮತ್ತು ಮರಿಗಳು ಏನೋ ಚಿಂತಿಸುತ್ತ ಗರಬಡಿದಂತೆ ಒಂದು ಕಡೆ ಕುಳಿತು ನಿಧನ ಹೊಂದಿದ ನಾಯಿಮರಿಯನ್ನು ಕಂಡು ರೋದಿಸುತ್ತಿದ್ದವು. ಆ ರೋದನ ಮುಗಿಲು ಮುಟ್ಟುವಂತಿತ್ತು.

ಈ ರೋಡ ಮೊದಲಿನಂಗೆ ಇದ್ದುರನೆ ಛಲೋ ಇತ್ತ್ ನೋಡ. ತಗ್ಗು ಹೊಡ್ಡುಗಳಿಂದ, ಮುಳ್ಳುಗಳಿಂದ ಇದ್ದಿದ್ದರೆ ಈ ದುರ್ಘಟನೆ ತಪ್ಪಿ, ನಾಯಿಮರಿ ಬದುಕುತ್ತಿತ್ತೇನೋ? ಎಂದು ದಾರಿಹೋಕರು ಈ ನಾಯಿಯ ಮೇಲೆ ಹಾಯಿಸಿದ ದ್ವಿಚಕ್ರ ವಾಹನದವರಿಗೆ ಪಾಪಾ ಹತ್ತಿ ಎಂದು ಹಿಡಿಶಾಪ ಹಾಕಿ ಮುಂದೆ ಸಾಗುತ್ತಿದ್ದರು. ಸ್ತಬ್ಧವಾಗಿ ಕುಳಿತು ತನ್ನ ಮರಿಗಾಗಿ ಮತ್ತು ಸೋದರನಿಗಾಗಿ ಜಪಿಸುತ್ತ ಆಕ್ರಂದನದಿಂದ ಮೌನಾಚರಣೆಯಲ್ಲಿ ಮಗ್ನವಾಗಿದ್ದ ನಾಯಿಗಳ ಆಶಯವೂ ಅದೇ ಆಗಿತ್ತೇನೊ ?...


ಶಿವಲಿಂಗಪ್ಪ ಸಿ. ಬಸವಣ್ಣೋರ್
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಲಬುರಗಿ


# ಬಹುದೇ ...?






**ಹೊ**ಸ ನಮೂನೆಯಲಿ ಶಬ್ದಗಳು
ಬೆರೆತು ಬರೆದ ಸಾಲು
ಪ್ರೇಮಪತ್ರವಿರಬಹುದೇ...?

ಜಾಗ ಬೇಕು ಎಂದರೆ ಹೃದಯ
ತೋರಿದ ಅವನದು
ಒಲವಿರಬಹುದೇ...?

ಶಿಲುಬೆಗೇರಿದ ಅವನ ಸಲುಗೆ
ಪುನರುತ್ಥಾನದ ಕನಸು ಹೊತ್ತಿರುವುದು
ಕೇವಲ ನನಗಾಗಿ ಇರಬಹುದೇ...?

ಆತ್ಮಾಹುತಿಗೈದ ನೆನಪುಗಳೆಲ್ಲ
ಸರದಿಯಲಿ ಆತ್ಮಾವಲೋಕನ
ಪ್ರೀತಿ ಮೊಳಕೆಯೊಡೆಯಲು
ಕಾದಿರಬಹುದೇ...?

ಮನದೊಳಗಣ ಒಲವು ಕ್ರಮಿಸದ
ಹಾದಿ ಹಿಡಿದಿರುವಾಗ ಪುರದ ಪುಣ್ಯ
ಕಳೆದುಹೋದಂತಾಗಿರಬಹುದೇ...?

ಸಖಿ,
ಬಹುದೇ...? ಆದ ವಿವರಣೆಗಳೆ ತುಂಬಿರುವ
ಜಗದಲಿ ಸಂದೇಹವೆ ಕಾಡಿ
ಮೀರಿ ನಿಲ್ಲುವ ಕಟುಸತ್ಯ ನಾನಾಗಬಹುದೇ...?


ಅಕ್ಷತಾ ಕೃಷ್ಣಮೂರ್ತಿ ಬೇಲೇಕೇರಿ

# ಮುಸುಕಿನ ಹಿಂದಿನ ಕೀಚಕ ಶಕ್ತಿ

**ಇಳಾ ದುಬೆ**

**ನ್ಯೂಯಾರ್ಕಿನ ಕೊಲಂಬಿಯ ವಿಶ್ವವಿದ್ಯಾನಿಲಯದ ಪದವೀಧರೆ ಇಳಾ ತನ್ನ ಅಧ್ಯಯನದ ಅಂಗವಾಗಿ ವಿಶ್ವಸಂಸ್ಥೆಯಲ್ಲಿ ಕೆಲವು ತಿಂಗಳ ಕಾಲ ನಿಯೋಜಿಸಲ್ಪಟ್ಟಿದ್ದಳು. ಆ ಸಂದರ್ಭದಲ್ಲಿ ಬರೆದು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದ ಪ್ರಬಂಧಗಳಲ್ಲಿ ಎರಡನೆಯದು ಇದು. ಭಾರತದ ಪ್ರಸಕ್ತ ವಿದ್ಯಮಾನಗಳ ಹಿನ್ನೆಲೆಯಲ್ಲಿ ಈ ಲೇಖನವು ನಮ್ಮ ವಿಶ್ಲೇಷಣಾ ಕ್ರಮಕ್ಕೆ ಸಾಮಗ್ರಿಯನ್ನೊದಗಿಸುತ್ತದೆ.**

ಯುದ್ಧವೆಂಬುದು ಹಾನಿಕರ, ಅದೊಂದು ಪಾತಕ ಎಂಬುದು ಎಲ್ಲ ಸಾಮಾನ್ಯರೂ ಒಪ್ಪುವ ಸಂಗತಿ. ಭಗವದ್ಗೀತೆಯು ಯುದ್ಧದಿಂದ ಉಂಟಾಗ ಬಹುದಾದ ಸಾಮಾಜಿಕ ಅಸ್ತವ್ಯಸ್ತತೆಯ ಬಗ್ಗೆ ಪ್ರಸ್ತಾಪಿಸಿದೆ. ಅಲ್ಲಿ ನಿರೀಕ್ಷಿಸಲಾಗಿರುವ ಉತ್ಪಾತಕ್ಕೆ ಎಷ್ಟೋಪಟ್ಟು ಹೆಚ್ಚಿನದು ಇಂದಿನ ಯುದ್ಧಗಳ ಭೀಕರತೆ. ಲಕ್ಷಾಂತರ ಜನಗಳ ಮರಣ, ನಿರ್ವಸತೀಕರಣ, ದೇಶಗಳ ಛಿದ್ರತೆ, ಮುಂತಾದವು ಒಂದು ಕಡೆ; ಇನ್ನೊಂದು ಕಡೆ ಯುದ್ಧದ ಪರಿಣಾಮವಾಗಿ ಮೂಡಿಬರಬಹುದಾದ ಸರ್ವಾಧಿಕಾರಿ ಆಡಳಿತ. ಇವೆಲ್ಲಾ ಕೆಡುಕು ನಿಜ, ಆದರೆ ಅವನ್ನು ಆಗುಮಾಡುವ ಯುದ್ಧಗಳ ಕೆಡುಕುತನ ಅವನ್ನೆಲ್ಲಾ ಮೀರಿದ್ದು. ಅತಿಕೆಡುಕಿನ ಕೂಸುಗಳು ಬೇರೆ ಚಿಕ್ಕಪುಟ್ಟ ಕೆಡುಕುಗಳು, ಅಷ್ಟೆ. ಯುದ್ಧವನ್ನು ಒಂದು ಸಾಧನವನ್ನಾಗಿ ಬಳಸಿಕೊಂಡು ತಮ್ಮ ಸಾಮಾಜಿಕ–ಆರ್ಥಿಕ ಲಾಭಗಳನ್ನು, ಉತ್ಪಾದನೆ – ಉದ್ಯೋಗ–ವಿದೇಶಿ ವ್ಯಾಪಾರ ಮುಂತಾದವನ್ನು ಹೆಚ್ಚಿಸಿಕೊಳ್ಳುವ ದೇಶಗಳಿವೆ. ಸದ್ಯದಲ್ಲಿ ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಸುಭದ್ರಗೊಳಿಸಿಕೊಳ್ಳಲು ಅಥವಾ ತಮ್ಮ ಆರ್ಥಿಕ ಸುಸ್ಥಿತಿಯನ್ನು ಬಲಪಡಿಸಿಕೊಳ್ಳಲು ಸಹ ಯುದ್ಧ ಗಳನ್ನು ಪ್ರಚೋದಿಸುವ ಸಾಧ್ಯತೆಗಳಿರುತ್ತವೆ. ಅಂದರೆ, ಯುದ್ಧದ ಅಮಲು ಬೇರೊಂದು ಗಾಢ ಸತ್ಯವನ್ನು ಮರೆಮಾಡುತ್ತದೆ. ಅಂತಹ ಕೆಡುಕು ಬಂಡವಾಳಶಾಹಿಯ ಗರ್ಭದಲ್ಲಿ ಹುದುಗಿದೆ. ಸ್ವತಃ ಬಂಡವಾಳಶಾಹಿಯೇ ಮಹತ್ತಾದ ಒಂದು ಕೆಡುಕು; ಏಕೆಂದರೆ, ಪ್ರಜಾಪ್ರಭುತ್ವವಾದಿ ಎನ್ನಲಾಗುವ ಹಲವು ಸರ್ಕಾರಗಳು ತಮ್ಮ ಪುರೋಭಿವೃದ್ಧಿಯ ಹೆಸರಿನಲ್ಲಿ ಬಂಡವಾಳಶಾಹಿಯನ್ನು ಪೋಷಿಸುತ್ತವೆ ಮತ್ತು ಅದನ್ನು ಬಲಪಡಿಸಲು ಯುದ್ಧವನ್ನು ಒಂದು ಅಸ್ತ್ರವನ್ನಾಗಿಸಿಕೊಳ್ಳುತ್ತವೆ. ಇದೊಂದು ವಿಪರ್ಯಾಸ, ಏಕೆಂದರೆ ಯುದ್ಧ ಮತ್ತು ಆಕ್ರಮಣ ಸಹಜವಾಗಿಯೇ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಧಕ್ಕೆಯುಂಟುಮಾಡುತ್ತವೆ. ನಾಗರಿಕ ಹಕ್ಕುಗಳನ್ನು ಮೊಟಕುಗೊಳಿಸುವುದು ಮತ್ತು ಶ್ರೀಮಂತ ವರ್ಗದ ಆದಾಯವನ್ನು ಹೆಚ್ಚಿಸಿ ಬಡವರ್ಗದೊಂದಿಗಿನ ಕಂದರವನ್ನು ಹೆಚ್ಚಿಸುವುದು ಅಂತಹ ಪರಿಣಾಮ. ಮಾರುಕಟ್ಟೆ ವ್ಯವಸ್ಥೆಯು ಸ್ವಯಂ ನಿಯಂತ್ರಣಕ್ಕೆ ಸಮರ್ಥವಾದ್ದು ಎಂದು ಹೇಳುವುದುಂಟು, ಆದರೆ ಅದು ವಿಶ್ವಸನೀಯ ಮಾತಲ್ಲ. ಅಮೆರಿಕಾದಂತಹ ಪ್ರಜಾಪ್ರಭುತ್ವಗಳಿಗೆ ಬಂಡವಾಳ ಶಾಹಿ ವ್ಯವಸ್ಥೆಯು ಲಾಭದಾಯಕವೇನೋ ಹೌದು, ಆದರೆ ಆ ವ್ಯವಸ್ಥೆಗೆ ರಕ್ಷಣೆ ನೀಡಲು ಪ್ರಭುತ್ವವು ಹೆಣಗಾಡುತ್ತಿರುತ್ತದೆ. ತಾನು ಸುಸ್ಥಿರವಾಗಿ ಉಳಿಯಲು ಬಂಡವಾಳಶಾಹಿಯು ಸದಾ ಯುದ್ಧದ ನೆರಳಲ್ಲಿ ತಂಪಾಗಿರಲು ಪ್ರಜಾಪ್ರಭುತ್ವಗಳ ಮೇಲೆ ಒತ್ತಡ ಹೇರುತ್ತಿರುತ್ತದೆ. ಇದರ ಇನ್ನೊಂದು ಮಗ್ಗುಲೆಂದರೆ ಪ್ರಜಾಪ್ರಭುತ್ವಗಳಿಗೆ ಯುದ್ಧ ಮತ್ತು ಆಕ್ರಮಣ ಒಂದು ನಿರಂತರ ಅಗತ್ಯ ಎಂಬುದು !

ಪ್ರಜಾಪ್ರಭುತ್ವಗಳು ಯುದ್ಧವನ್ನೇಕೆ ಪುರಸ್ಕರಿಸುತ್ತ ವೆಂಬುದನ್ನು ತಿಳಿಯಲು ಈ ಪ್ರಭುತ್ವಗಳು ಆಯಾ ದೇಶಗಳ ಮತ್ತು ಇತರ ದೇಶಗಳ ಕಾರ್ಪೊರೇಟ್ ವಲಯಗಳೊಂದಿಗೆ ಹೇಗೆ ಬೆಸುಗೆ ಹಾಕಿಕೊಂಡಿರುತ್ತವೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಅವೆರಡೂ ಏಕಪ್ರಕಾರವಾದ ಹಿತಾಸಕ್ತಿಗಳನ್ನು ಹೊಂದಿರುತ್ತವೆ. ಸಾಮಾನ್ಯವಾಗಿ ಉದಾರವಾದಿ ಬಹುತ್ವದ ಸಿದ್ಧಾಂತವು ಪ್ರಭುತ್ವವನ್ನು ಒಂದು ನಿಷ್ಪಕ್ಷಪಾತವಾದ ಆಡಳಿತ ಘಟಕವೆಂದು ಭಾವಿಸುತ್ತದೆ. ಅಂದರೆ, ಮಾರುಕಟ್ಟೆಯ ವಹಿವಾಟುಗಳ ನಡುವೆ ತಲೆ ಹಾಕುವುದಿಲ್ಲವೆಂದರ್ಥ. ಈ ಸಿದ್ಧಾಂತದ ಮೂಲಭೂತ ನಂಬಿಕೆಯ ಪ್ರಕಾರ ಪ್ರಭುತ್ವವು ಕೇವಲ ವೀಕ್ಷಕ; ಎಲ್ಲದರ ಮೇಲೂ ನಿಗಾ ಇಟ್ಟಿರುತ್ತದೆ, ಆದರೆ ಯಾವುದರಲ್ಲೂ ಮೂಗು ತೂರಿಸುವುದಿಲ್ಲ. ಅದರ ಕೆಲಸವೇನಿದ್ದರೂ ಸಾಂಸ್ಥಿಕ ಮತ್ತು ಭೌತಿಕ ಅಡಿಪಾಯವನ್ನು ಒದಗಿಸಿಕೊಡುವುದು, ಅಷ್ಟೆ. ಬಂಡವಾಳಶಾಹಿಯು ಬೆಳೆಯುವುದು ಇಲ್ಲವೇ ಅಳಿಯುವುದು ತನ್ನಿಂದಾಗಿಯೇ ಹೊರತು ಪ್ರಭುತ್ವದ ಮಧ್ಯಪ್ರವೇಶದಿಂದ ಅಥವಾ ರಕ್ಷಣೆಯಿಂದಲ್ಲ ಎಂಬುದು ಎಷ್ಟು ಪೊಳ್ಳು ಮಾತೆಂಬುದಕ್ಕೆ ಪುರಾವೆ ಬೇಕಿಲ್ಲ. ಅಮೆರಿಕಾ, ಫ್ರಾನ್ಸ್, ಮುಂತಾದ ದೇಶಗಳ ಅಧ್ಯಕ್ಷರು ಭಾರತದಂತಹ ದೇಶಗಳಿಗೆ ಹೋದಾಗ ಖಾಸಗಿ ಕಂಪನಿಗಳ ವ್ಯಾಪಾರದ ಪಟ್ಟಿಯನ್ನು ಜೇಬಿನಲ್ಲಿಟ್ಟುಕೊಂಡೇ ಹೋಗುತ್ತಾರೆ ಮತ್ತು ವ್ಯವಹಾರ ಕುದುರಿಸಲು ಎಲ್ಲ ಮಸಲತ್ತೂ ಮಾಡುತ್ತಾರೆ. ಅದು ಗುಟ್ಟಾದ ವಿಚಾರವೇನೂ ಅಲ್ಲ. ಬಂಡವಾಳಶಾಹಿಯ ಹಲವು ಸೋಗುಗಳ ಒಂದು ಮುಖ ಇದು. ಅದನ್ನು ಮುಸುಕಿನ ಹಿಂದೆ ಮರೆಮಾಡಿದರೂ ಅದು ಎದ್ದುಕಾಣುತ್ತಲೇ ಇರುತ್ತದೆ. "ಇಂತಿಷ್ಟು ಬೋಯಿಂಗ್ ವಿಮಾನ ಕೊಳ್ಳಿ" ಅಥವಾ "ಇಂತಿಷ್ಟು ಪರಮಾಣು ಸ್ಥಾವರಗಳನ್ನು ಕೊಳ್ಳಿ" ಎಂದು ಯಾವುದೋ ದೇಶದ ಅಧ್ಯಕ್ಷ ಹೇಳಿದರೆ ಅದು ಅವನ ದೇಶದ ಖಾಸಗಿ ಬಂಡವಳಿಗರ ಏಜೆಂಟನಾಗಿಯೇ ಹೇಳಿರುತ್ತಾನೆ (೪). ಇದರಿಂದಾಗಿ ಬಂಡವಾಳಶಾಹಿಯಲ್ಲಿ ಒಂದು ಅನಿವಾರ್ಯ ವೈರುಧ್ಯವಿರುತ್ತದೆ. ಅದರ ಕಾರ್ಯವ್ಯಾಪ್ತಿಯು ಎರಡು ಬಗೆಯದು : (ಅ) ಸಂಪನ್ಮೂಲಗಳನ್ನು ಸಂಗ್ರಹಿಸಿಕೊಳ್ಳುವ ಪ್ರಕ್ರಿಯೆ ಮತ್ತು ಅವನ್ನು ಖಾಸಗಿಯಾಗಿ ವಿನಿಯೋಗಿಸಿಕೊಳ್ಳುವುದು. ಪ್ರಭುತ್ವಕ್ಕೆ






ಆಸರೆ ನೀಡುವುದು ಇದೇ, ಏಕೆಂದರೆ ಖಾಸಗಿಯಾಗಿ ಒಟ್ಟುಗೂಡುವ ಸಂಪತ್ತಿನಿಂದಲೇ ಪ್ರಭುತ್ವವು ತೆರಿಗೆಯ ಮೂಲಕ ತನಗೆ ಅಗತ್ಯವಾದ್ದನ್ನು ಪಡೆದುಕೊಳ್ಳಬೇಕು. (ಆ) ತೋರಿಕೆಗಾದರೂ ಪ್ರಭುತ್ವವು ತನ್ನ ನಿಧಿಯು ಖಾಸಗಿಯಿಂದ ಸೆಳೆದುಕೊಂಡದ್ದಲ್ಲವೆಂಬಂತೆ ನಟಿಸಬೇಕು.

ಇಂತಹ ಇಬ್ಬಂದಿಯಿಂದಾಗಿ ಪ್ರಭುತ್ವ ಮತ್ತು ಆರ್ಥಿಕತೆ ಪ್ರತ್ಯೇಕವೆಂಬಂತೆ ತೋರುವಂತಿರುವಾಗ ಯುದ್ಧವು ಒಂದು ಘನವಾದ ಪರದೆಯನ್ನು ಎಳೆಯುತ್ತದೆ. ಪ್ರಭುತ್ವ ಮತ್ತು ಬಂಡವಾಳಶಾಹಿ ನಡುವಿನ ಸಂಬಂಧವನ್ನು ಅಂದವಾಗಿ ಮುಚ್ಚಿಹಾಕುವ ಮುಸುಕಿನ ತೆರೆಯೇ ಯುದ್ಧ. ಮತದಾರರ ನಂಬಿಕೆಯನ್ನು ಪೋಷಿಸಲು ಸಹ ಇದೊಂದು ಮುದ್ದಾದ ಸಾಧನ ! ಹವರ್ಡ್ ಝಿನ್ ಎಂಬ ಶ್ರೇಷ್ಠ ಇತಿಹಾಸಕಾರನೊಬ್ಬ ಅಮೆರಿಕಾದಲ್ಲಿದ್ದ. ಮೂರು ವರ್ಷಗಳ ಹಿಂದೆ ಅವನು ತೀರಿಕೊಂಡ. ಖಾಸಗಿ ಕಾರ್ಪೊರೇಷನ್‌ಗಳಿಗೆ ಯುದ್ಧದಿಂದ ಉಂಟಾಗುವ ಪರಿಣಾಮಗಳನ್ನು ಆತ ಆಳವಾಗಿ ಅಭ್ಯಾಸ ಮಾಡಿದ್ದ. ವುಡ್ರೋ ವಿಲ್ಸನ್ ಅಮೆರಿಕಾದ ಅಧ್ಯಕ್ಷನಾಗಿದ್ದ ಕಾಲದಲ್ಲಿ ಮೊದಲನೆಯ ಮಹಾಯುದ್ಧ ಜರುಗಿತು. ಆ ಯುದ್ಧಕ್ಕೆ ಮುನ್ನ ಮತ್ತು ಯುದ್ಧದ ಕಾಲದಲ್ಲಿ ವಿಲ್ಸನ್ ಹೇಳುತ್ತಿದ್ದ ಮಾತೊಂದು ಪ್ರಖ್ಯಾತವಾಗಿದೆ : "ಸ್ಥಳೀಯ ಮಾರುಕಟ್ಟೆಗಳು ನಮಗೆ ಏನೇನೂ ಸಾಲದು, ನಮಗೆ ವಿದೇಶಿ ಮಾರುಕಟ್ಟೆಗಳು ಅಗತ್ಯವಾಗಿದೆ." ಅವನ ಕಾಲದ ಆಂತರಿಕ ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ಬೆಲೆ ಕುಸಿದುಹೋಗಿತ್ತು, ಅತೀವ ನಿರುದ್ಯೋಗ ತಾಂಡವವಾಡುತ್ತಿತ್ತು ಮತ್ತು ಭಾರಿ ಉದ್ಯಮಗಳು ಅಷ್ಟಾಗಿ ಉತ್ಪಾದನೆ ಮಾಡುತ್ತಿರಲಿಲ್ಲ. ವಿಲ್ಸನ್‌ಗೆ ಇನ್ನೊಂದು ಆಶಯವಿತ್ತು : ಭಾರಿ ವ್ಯಾಪಾರ ವ್ಯವಹಾರಗಳನ್ನು ನಡೆಸುವ ದೊಡ್ಡ ಕಂಪನಿಗಳ ಹಣದ ಬಲವನ್ನು ಹೇಗಾದರೂ ನಿಯಂತ್ರಿಸಬೇಕು, ಎಂದು. ಉದಾಹರಣೆಗೆ, ಜೆ. ಪಿ. ಮೋರ್ಗನ್ ಕಂಪನಿ. ಆರ್ಥಿಕತೆಯಲ್ಲಿ ಅದರ ವ್ಯಾಪ್ತಿ ಅಗಾಧವಾಗಿತ್ತು. [ಇಂದಿನ ಅಂಬಾನಿ, ಅದಾನಿ, ಟಾಟಾ, ಮಿತ್ತಲ್ ಮುಂತಾದವರನ್ನು ನೆನೆಸಿಕೊಳ್ಳಬಹುದು. – ಸಂ.] ಜೆ. ಪಿ. ಮೋರ್ಗನ್ ಅಮೆರಿಕಾದ ಹಣಕಾಸು ಕ್ಷೇತ್ರವನ್ನು ತನ್ನ ಹತ್ತಾರು ಬ್ಯಾಂಕುಗಳ ಮೂಲಕ ಆಕ್ರಮಿಸಿಕೊಂಡಿದ್ದ ಬೃಹತ್ ಕಂಪನಿ. ಹಣ ಹೂಡಿಕೆ, ಜೀವ ವಿಮೆ, ಹೀಗೆ ಎಲ್ಲ ವಿಭಾಗಗಳ ಮೇಲೂ ಅದರ ಹಿಡಿತವಿತ್ತು. ೧೯೧೨ರಲ್ಲಿ ಅಮೆರಿಕಾದ ಪ್ರಜಾಪ್ರತಿನಿಧಿ ಸಭೆಯು (ಕಾಂಗ್ರೆಸ್) ಮೋರ್ಗನ್ ಕಂಪನಿಯ ವಹಿವಾಟುಗಳನ್ನು ಅಧ್ಯಯನ ನಡೆಸಿದಾಗ ಕಂಡುಬಂದ ಅಂಶಗಳಿವು : ೧೧೨ ಕಾರ್ಪೊರೇಷನ್‌ಗಳಲ್ಲಿ ೩೪೧ ನಿರ್ದೇಶಕ ಹುದ್ದೆಗಳನ್ನು ಆ ಕಂಪನಿ ತನ್ನ ವಶದಲ್ಲಿ ಇರಿಸಿಕೊಂಡಿತ್ತು. ಒಟ್ಟು ೨೨ ಬಿಲಿಯನ್ ಡಾಲರುಗಳ ಮೇಲಿನ ಒಡೆತನ. ಅದೆಷ್ಟು ದೊಡ್ಡ ಮೊತ್ತವೆಂದರೆ ಆಗಿನ ಅಮೆರಿಕಾದ ಮಿಸಿಸಿಪಿಯ ಪಶ್ಚಿಮಕ್ಕಿರುವ ೨೨ ರಾಜ್ಯಗಳ ಒಟ್ಟು ಆಸ್ತಿಯ ಮೌಲ್ಯಕ್ಕಿಂತಲೂ ಹೆಚ್ಚಿನದು; ಅಥವಾ, ದಕ್ಷಿಣದ ೧೩ ರಾಜ್ಯಗಳ ಎಲ್ಲಾ ಸಾಮೂಹಿಕ ಮತ್ತು ವೈಯಕ್ತಿಕ ಆಸ್ತಿಯ ಎರಡು ಪಟ್ಟಿಗಿಂತಲೂ ಹೆಚ್ಚು.

ಪ್ರಭುತ್ವದ ಸ್ವಕೀಯ ಹಿತವು ಸಾಂಸ್ಥಿಕವಾಗಿ ಈ ಸಂಪತ್ತನ್ನು ಆಶ್ರಯಿಸದೆ ಇರಬಲ್ಲುದೆ ? ಚುನಾವಣೆಗಳಲ್ಲಿ ಜಯ ಸಹ ಈ ಸಂಪತ್ತಿನ ನೆರಳಲ್ಲೇ ದಕ್ಕಬೇಕು ! ಅಂತಹ ಪ್ರಭುತ್ವಕ್ಕೆ ಶತ್ರುಗಳ ಭಯವುಂಟೆ ? ಈ ಹಿನ್ನೆಲೆಯಲ್ಲಿ ವಿಲ್ಸನ್ ೧೯೧೩ರಲ್ಲಿ ಕೇಂದ್ರೀಯ ಶಾಸನವೊಂದನ್ನು ಮುನ್ನೆಲೆಗೆ ತಂದ; ಅತ್ಯಧಿಕ ಮೊತ್ತದ ಪ್ರಾಬಲ್ಯ ಸದಾ ಹೆಚ್ಚುತ್ತಿರುವಾಗ ಸರ್ಕಾರದ ಉನ್ನತ ಶಕ್ತಿಯನ್ನು ಸರಿದೂಗಿಸಬೇಕೆಂಬ ಉದ್ದೇಶದಿಂದ. ಆಗ ಮೊದಲ ಮಹಾಯುದ್ಧ ಬಂತು. ಅದೊಂದು ಸುಸಂಧಿ. ಅಮೆರಿಕಾದ ಬಂಡವಾಳವನ್ನು ಬಳಸಿಕೊಂಡು ವಿದೇಶಿ ಮಾರುಕಟ್ಟೆಗೆ ಲಗ್ಗೆಯಿಡಲು ಸಾಧ್ಯವೆನಿಸಿದ ಕಾಲ. ಆಗ ಜೆ. ಪಿ. ಮೋರ್ಗನ್ ಕಾರ್ಪೊರೇಷನ್‌ಗಳನ್ನು ಹಿಮ್ಮೆಟ್ಟಿಸಬಹುದೆಂಬ ಲೆಕ್ಕಾಚಾರ. ೧೯೧೫ರಲ್ಲಿ ವಿಲ್ಸನ್ ಇನ್ನೊಂದು ಹೆಜ್ಜೆಯಿಟ್ಟ ; ಮಿತ್ರರಾಷ್ಟ್ರಗಳಿಗೆ ಅಮೆರಿಕಾದ ಖಾಸಗಿ ಬ್ಯಾಂಕ್‌ಗಳು ಯಥೇಚ್ಛವಾಗಿ ಸಾಲ ನೀಡಬಹುದೆಂದು ಘೋಷಿಸಿದ. ಮೋರ್ಗನ್‌ಗೆ ಸದವಕಾಶ ಅದು. ಅವನಿಗೆ ವಿಪುಲ ಲಾಭ; ಅಂತೆಯೇ, ಅದು ಅಮೆರಿಕಾದ ಹಣವಾದ್ದರಿಂದ ಜರ್ಮನಿಯ ವಿರುದ್ಧ ಬ್ರಿಟನ್ ವಿಜಯಿಯಾಗಬೇಕೆಂಬ ತುರ್ತು ಮತ್ತು ಒತ್ತಡ ಹೆಚ್ಚಿತು. ಇದರಿಂದ ಎರಡು ತೀರ್ಮಾನಗಳು ಸಾಧ್ಯ : ಪ್ರಭುತ್ವ ಮತ್ತು ಖಾಸಗಿ ವಲಯಗಳು ಬೇರೆಬೇರೆ ಎಂಬ ಮಿಥ್ಯೆಯನ್ನು ತೊಡೆದುಹಾಕಿದಂತಾಯಿತು ಮತ್ತು ಯುದ್ಧವು ಮುಸುಕಿನ ಹಿಂದಿನ ಸತ್ಯವನ್ನು ಹೊರಗೆಡಹಿತು. ಜರ್ಮನಿಯ ಸೋಲು ಅಮೆರಿಕಾದ ಬಂಡವಾಳದ ಆದ್ಯ ಆಶಯವಾಯಿತು. ಮಿತ್ರರಾಷ್ಟ್ರಗಳಿಗೆ ಅಮೆರಿಕಾದ ಖಾಸಗಿ ಬ್ಯಾಂಕುಗಳು ಸಾಲ ನೀಡುವುದು ವಿದೇಶಿ ಮಾರುಕಟ್ಟೆಯ ವಿಸ್ತರಣೆಗೆ ಒಂದು ಸಾಧನವೆಂಬುದು ನಿಶ್ಚಯವಾಯಿತು; ಆದ್ದರಿಂದಲೇ ವಿಲ್ಸನ್ ಅದಕ್ಕೆ ಅವಕಾಶ ಕಲ್ಪಿಸಿದ್ದು. ಯುದ್ಧದ ಬಿಕ್ಕಟ್ಟಿಲ್ಲದಿದ್ದರೆ ಈ ನೀತಿ ಅಳವಡಿಕೆಗೆ ಬರುತ್ತಿರಲಿಲ್ಲ. ಅಮೆರಿಕಾದ ಸರಕುಗಳಿಗೆ ಬ್ರಿಟನ್ ಒಳ್ಳೆಯ ಮಾರುಕಟ್ಟೆಯಾಯಿತು ಮತ್ತು ಸಾಲ ಕೊಟ್ಟಿದ್ದರಿಂದ ಅಮೆರಿಕಾದ ಸರಕುಗಳನ್ನು ಕೊಳ್ಳಲು ಬ್ರಿಟನ್ನಿಗೆ ಸಾಧ್ಯವಾಯಿತು. ಇದನ್ನೆಲ್ಲಾ ಗಮನಿಸಿ ದಾಲ್ ಎಂಬ ಅರ್ಥಶಾಸ್ತ್ರಜ್ಞ ಹೇಳುವುದಿದು : "ಕಾರ್ಪೊರೇಷನ್‌ಗಳ ಪ್ರಾಬಲ್ಯವನ್ನು ಗಮನಾರ್ಹವಾಗಿ ಬದಲಿಸದೆ ಅಮೆರಿಕಾದಂತಹ ದೇಶದ ಸ್ವಕೀಯ ಸರ್ಕಾರವನ್ನು ಪರಿಣಾಮಕಾರಿಯಾಗಿ ಮುನ್ನಡೆಸಲಾಗದು." ಮೊದಲ ಯುದ್ಧಕ್ಕಿಂತಲೂ ದೊಡ್ಡ ಯುದ್ಧ ನಡೆದರೆ ಭಾರಿ ವ್ಯವಹಾರ ನಡೆಸುವ ಕಾರ್ಪೊರೇಷನ್‌ಗಳು ಬೇರೆ ದೇಶಗಳಲ್ಲಿ ಇನ್ನೂ ಹೆಚ್ಚಿನ ಸಾಲದ ಹೊರೆಯನ್ನು ಹೇರಲು ಸಮರ್ಥವಾಗುತ್ತವೆ.

ಯುದ್ಧವು ಪ್ರಜಾಪ್ರಭುತ್ವಗಳಿಗೆ ವಿದೇಶಿ ಮಾರುಕಟ್ಟೆಗಳ ವಿಸ್ತರಣೆಗೆ ಅವಕಾಶ ಕಲ್ಪಿಸಿಕೊಡುತ್ತದೆ, ನಿಜ; ಆದರೆ ಅದನ್ನು ಪ್ರಜಾಪ್ರಭುತ್ವ ವಿರೋಧಿ ಕ್ರಮಗಳಿಂದ ಸಾಧಿಸಲಾಗುತ್ತದೆ. ಬಂಡವಾಳಶಾಹಿಯ ಕೆಡುಕನ್ನು ಸಹ ಯುದ್ಧವು ತೆರೆದಿಡುತ್ತದೆ. ಹೇಗೆ ? ವಿವಿಧ ವರ್ಗಗಳಲ್ಲಿ ಸಂಪತ್ತು ಹಂಚಿಹೋಗುವುದರಲ್ಲಿ ಅಗಾಧ ಏರುಪೇರುಗಳನ್ನುಂಟುಮಾಡುವುದರಿಂದ ಎಂಬುದು ಅಪ್ರಕಟಿತ ಸತ್ಯ. ಮೂಲತಃ ಗ್ರಹಿಸಬೇಕಾದ ಅಂಶವೆಂದರೆ, ಪ್ರಜಾಪ್ರಭುತ್ವದ ಘಟಕಗಳು ಸ್ವಭಾವತಃ ಪ್ರಜಾಪ್ರಭುತ್ವದ ನೀತಿಯನ್ನು ಅಂತರ್ಗತಗೊಳಿಸಿಕೊಂಡಿರುವುದಿಲ್ಲ ಎಂಬುದು. ಇದೊಂದು ವಿರೋಧಾಭಾಸ : ಪ್ರಜಾಪ್ರಭುತ್ವದಲ್ಲಿ ಲಭ್ಯವಾಗುವ ಮುಕ್ತಸ್ವಾತಂತ್ರ್ಯದಿಂದ ಅಸಮಾನತೆಯು ಅಂಕುರಿಸುತ್ತದೆ. ಕೆಲವರಲ್ಲಿ ಆರ್ಥಿಕ ಸಂಪನ್ಮೂಲಗಳು ಹೇರಳವಾಗಿ ತುಂಬಿಕೊಳ್ಳುತ್ತವೆ ಮತ್ತು ಆರ್ಥಿಕ ಚಟುವಟಿಕೆಗಳು ಶ್ರೇಣೀಕೃತ ಸಮಾಜವನ್ನು ನಿರ್ಮಿಸುತ್ತವೆ. ಇದೆಂತಹ ವಿಪರ್ಯಾಸ ! ಒಂದೆಡೆ ಸಂಪತ್ತಿನ

ಒಡೆತನ, ಇನ್ನೊಂದೆಡೆ ಸಮಾಜದಲ್ಲಿ ಅಸಮಾನತೆಯ ವಿಭಾಗಗಳು : ಸಂಪತ್ತು, ಸ್ಥಾನಮಾನ, ನೈಪುಣ್ಯ, ಮಾಹಿತಿ, ಎಲ್ಲದರಲ್ಲೂ ಅಸಮಾನತೆ. "ರಾಜಕೀಯ ಸಮಾನತೆ" ಎಂಬುದು ಭಗ್ನವಾಗಿಹೋಗುತ್ತದೆ, ಪ್ರಜಾಪ್ರಭುತ್ವದ ಸಾರ ಕ್ಷೀಣಿಸುತ್ತದೆ.

ಇದಕ್ಕೂ ಯುದ್ಧಕ್ಕೂ ಏನು ಸಂಬಂಧ ? ಅಸಮಾನತೆಗಳನ್ನು ಹೆಚ್ಚಿಸುವುದು ಮತ್ತು ಶ್ರೀಮಂತರಿಂದ ಬಡವರ ಶೋಷಣೆಯನ್ನು ಸುಗಮಗೊಳಿಸುವುದು ಯುದ್ಧ; ಅದೊಂದು ಸಾಧನ. ಹೇಗೆ ಇದೆಲ್ಲಾ ಹೆಣೆದುಕೊಂಡಿದೆ ಎಂಬುದನ್ನು ತಿಳಿಯಲು ಮಾರ್ಕ್ಸ್ ಪ್ರತಿಪಾದಿಸಿರುವ ಪ್ರಭುತ್ವ ಸಿದ್ಧಾಂತದತ್ತ ಕಣ್ಣು ಹೊರಳಿಸಬೇಕು. ಆರ್ಥಿಕವಾಗಿ ಯಾವುದು ಆಳುವ ವರ್ಗದ ಸ್ಥಾನ ಹೊಂದಿರುತ್ತದೋ ಅದರ ಪರವಾಗಿ ಬಲವಂತ ಹೇರುವುದು ಪ್ರಭುತ್ವ. ಆ ವರ್ಗವು ಪ್ರಭುತ್ವವನ್ನು ದಾಳ ಮಾಡಿಕೊಂಡಿರುತ್ತದೆ. ಅಂದರೆ, ಮೇಲುಗೈ ಪಡೆದ ವರ್ಗವು ತನ್ನ ಲಾಭವನ್ನು ಹಿಗ್ಗಿಸಿಕೊಳ್ಳಲು ಪ್ರಭುತ್ವವನ್ನು ಉಪಕರಣವನ್ನಾಗಿಸಿ ಕೊಳ್ಳುತ್ತದೆ, ದುಡಿಮೆಯ ವಿಭಜನೆಯನ್ನು ತನ್ನ ಹಿತಾಸಕ್ತಿಗೆ ತಕ್ಕಂತೆ ರೂಪಿಸಿಕೊಳ್ಳುತ್ತದೆ. ಜ಼ಿನ್ ಹೇಳಿರುವುದರತ್ತ ಹೊರಳೋಣ : ಜೆ. ಪಿ. ಮೋರ್ಗನ್ ಮಿತ್ರರಾಷ್ಟ್ರವಾಗಿದ್ದ ಬ್ರಿಟನ್ನಿಗೆ ಹೇರಳವಾಗಿ ಸಾಲ ಕೊಟ್ಟ. ಅದರಿಂದ ಬ್ರಿಟನ್ನಿನಲ್ಲಿ ಯಾರ ಏಳಿಗೆಯಾಯಿತು ? ನಿರ್ದಿಷ್ಟವಾದ ಒಂದು ವರ್ಗದ್ದು ತಾನೆ ? ಯುದ್ಧವು ಉತ್ಪಾದನೆಯ ಮತ್ತು ಉದ್ಯೋಗದ ಹೆಚ್ಚಳಕ್ಕೆ ಕಾರಣ ಆಯಿತೆಂಬುದು ನಿಜ; ಆದರೆ ಸಂಪತ್ತಿನ ವಿತರಣೆಯು ಸಮಾನವಾಗೇನೂ ಆಗಲಿಲ್ಲ. ಶ್ರೀಮಂತ ವರ್ಗವು ಆರ್ಥಿಕತೆಯ ಮೇಲೆ ಹಿಡಿತ ಸಾಧಿಸಿತು, ದುಡಿಯುವ ವರ್ಗಗಳನ್ನು ಹಿಗ್ಗಾಮುಗ್ಗಾ ಶೋಷಣೆಗೆ ಗುರಿಮಾಡಿತು. ಯುದ್ಧದ ಬಾಬ್ತಿನ ಉದ್ಯಮಗಳ ಬೋರ್ಡ್‌ನ ಮುಖ್ಯಸ್ಥ ಯಾರಾಗಿದ್ದ ? ಒಬ್ಬ ಹಣಕಾಸು ವಹಿವಾಟಿನ ದೊಡ್ಡ ಶ್ರೀಮಂತ. ಪ್ರಭುತ್ವವು ಯುದ್ಧಕಾಲೀನ ಸನ್ನಿವೇಶದ ಪ್ರಯೋಜನ ಪಡೆದು ಹೆಚ್ಚು ಉತ್ಪಾದನೆಯತ್ತ

# ಏನೂ ಬೆಳೆಯುವುದಿಲ್ಲ !






**ಕ**ಲ್ಲಾಗಿದ್ದರೇ ಚಂದವಿತ್ತು !
ಗಡ್ಡದ ಗೌತಮನ ಚಾಕರಿ ತಪ್ಪಿತ್ತು
ಇಂದ್ರಚಂದ್ರರು ಕಲ್ಲಮೇಲೆ ಮಲಗುವುದಿಲ್ಲ
ಯಾವನೋ ನನ್ನ ಕೆತ್ತಿ ಕೂರಿಸುತ್ತಿದ್ದ
ಇನ್ಯಾವನೋ ಗುಡಿಯಲ್ಲಿ ಮಡಗುತ್ತಿದ್ದ
ಪುಕ್ಕಟ್ಟೆ ನೈವೇದ್ಯ – ಪೀತಾಂಬರ – ಆಭರಣ
ವಿಗ್ರಹ ಚೋರ – ಭಂಜಕರಿಂದ ಸುರಕ್ಷೆ
ಲಿಂಗದಿಂದ ಬಿಡಿ ಬಾಯಿಂದ ನನ್ನ ಮೇಲೆ
ವಿಸರ್ಜಿಸಿದರೂ ಅವರ ನಾಲಗೆಗೆ ಕತ್ತರಿ !
ಕಲ್ಲು ದೇಹವ ಗುಡಿಯಲ್ಲೇ ಬಿಟ್ಟು
ಹಾರಿಹೋಗುತ್ತಿದ್ದೆ ಹಕ್ಕಿ ಗರಿ ಮೇಲೆ ಕೂತು
ಸ್ವಚ್ಛ ಜಲದಲ್ಲಿ ಮಿಂದು ಹಸಿರುಗೂದಲ ಹರಡಿ
ಹುಲ್ಲಮೇಲೆ ಒರಗಿದರೆ ಬಾಯ್ತುಂಬ ಜೇನು
ಎಳೆ ಸೂರ್ಯರಶ್ಮಿಗಳ ಸಾಂಬ್ರಾಣಿ
ಝುಯ್ಯನೆ ಹೊಂಬಣ್ಣದ ಮೋಡಗುದುರೆ ಏರಿದೆ–
ನೆಂದರೆ ಲಗಾಮಿಲ್ಲದ ನಾಗಾಲೋಟ
ಜ್ಯೋತಿಷಿಯೊಪ್ಪದ ನಕ್ಷತ್ರದೊಂದಿಗೆ ಕೂಟ
ಭುವಿ ಕಣ್ತೆರೆವುದರಲ್ಲಿ ನೋವು ನೆತ್ತರಿಲ್ಲದೆ
ಇಬ್ಬನಿ ತೊಟ್ಟಿಲ ತುಂಬ ಹೂ ಹಣ್ಣು ಮಕ್ಕಳು
ನಾನಿಲ್ಲದ ಕಲ್ಲಮುಂದೆ ಬೋರಲು ಬೀಳುವ ಭಂಡರು
ಉರಿನಾಲಗೆಯೊಂದಿಗೆ ಗಂಟೆಯಾಡಿಸುವ ಪೂಜಾರಿಪುಕ್ಕರ
ಕಂಡು ನಾ ನಕ್ಕ ನಗು ಮಿಂಚು ಗುಡುಗುಗಳಾಗಿ
ಮಳೆಯಾಗಿ ಎಲ್ಲ ಅರಿಷ್ಟಗಳು ಕೊಚ್ಚಿಹೋಗುತ್ತಿದ್ದವು
ಮಳೆಯಾಗಿ ಎಲ್ಲ ಅರಿಷ್ಟಗಳು ಕೊಚ್ಚಿಹೋಗುತ್ತಿದ್ದವು
ಸ್ವಾರ್ಥಿ ರಾಮ ನನ್ನ ತುಳಿದೆಬ್ಬಿಸಿಬಿಟ್ಟ
ಮತ್ತೆ ಚಾಕರಿ ಬಸಿರು ಬಾಣಂತನಕ್ಕೆ
ಇವರಿಗೆ ಬೀಜ ಬಿತ್ತಲು ಬೇಕಲ್ಲ
ಮೆತ್ತನೆಯ ಫಲವತ್ತು ನೆಲ
ಇವರದು ಕಲ್ಲೆದೆ : ಏನೂ ಬೆಳೆಯುವುದಿಲ್ಲ !

**ಕೆ. ವಿ. ಚಂದ್ರಜ್ಯೋತಿ**
ಪಿ–೨೬, ಹದಿನೈದನೇ ಅಡ್ಡರಸ್ತೆ, ಸೋಮೇಶ್ವರಪುರಂ, ತುಮಕೂರು – ೫೭೨ ೧೦೨

ಧಾವಿಸಿತು, ಅದಕ್ಕೆ ಬೇರೆ ದೇಶದಿಂದ ಸಾಲ ಪಡೆಯಿತು, ಆದರೆ ನಿಜವಾಗಿ ಫಲಭೋಗ ದೊರೆತದ್ದು ಸಮಾಜದ ಉಚ್ಚ ಶ್ರೇಣಿಯವರಿಗೆ; ಬ್ಯಾಂಕರುಗಳು ಮತ್ತು ಉದ್ಯಮಿಗಳು ಲಾಭವನ್ನು ಸೆಳೆದುಕೊಂಡರು, ಅಷ್ಟೆ. ಅದು ದುಡಿಯುವ ವರ್ಗದ ತಲೆಯ ಮೇಲೆ ಕಲ್ಲು ಚಪ್ಪಡಿ ಎಳೆದು ಗಳಿಸಿಕೊಂಡ ಲಾಭ, ಅದಕ್ಕೆ ಪ್ರಭುತ್ವದ ಪೂರ್ಣ ಸಹಕಾರವಿದ್ದಿತು. ಈ ಅರ್ಥದಲ್ಲಿ ಬಂಡವಾಳಶಾಹಿಯು ಘೋರ ಕೆಡುಕು ಎನಿಸಿಕೊಳ್ಳಲು ಅರ್ಹವಾಗಿದೆ. ಯುದ್ಧ ಮತ್ತು ಆಕ್ರಮಣಗಳಿಂದ ಲಾಭವಾಗುವುದಾದರೆ ಅವನ್ನು ಪ್ರಚೋದಿಸಲು ಸಹ ಬಂಡವಳಿಗ ವರ್ಗವು ಪ್ರಭುತ್ವವನ್ನು ಪುಸಲಾಯಿಸುತ್ತದೆಯಲ್ಲವೆ ? ಸಮಕಾಲೀನ ಸಂದರ್ಭದಲ್ಲಿ, ಪಶ್ಚಿಮ ಏಷ್ಯದಲ್ಲಿ ಅನಾವರಣಗೊಂಡಿರುವ ತೈಲ ರಾಜಕೀಯವನ್ನು ಪರಿಶೀಲಿಸಿದರೆ ಇದು ಇನ್ನಷ್ಟು ಸ್ಪಷ್ಟವಾಗುತ್ತದೆ. ಅಮೇರಿಕಾದ ತೈಲೋದ್ಯಮಗಳು ಪಶ್ಚಿಮ ಏಷ್ಯದಿಂದ ಪಡೆಯುವ ಲಾಭವು ಅಸೀಮಿತ; ಅದು ಸಾಧ್ಯವಾಗಬೇಕಾದರೆ ಆ ಭಾಗದಲ್ಲಿ ಮನಸ್ವೀ ಆಡಳಿತ ನಡೆಸುವಂತಹ ಸರ್ಕಾರಗಳಿರಬೇಕು. ಅದೇ ತೈಲದ ರಾಜಕೀಯ ಆರ್ಥಿಕತೆ. ಮಾನವ ಹಕ್ಕುಗಳ ಬಗ್ಗೆ ಉದ್ದುದ್ದದ ಭಾಷಣ ಮಾಡುವ ಅಮೇರಿಕಾದ ಅಧ್ಯಕ್ಷರಿಗೆ ಸೌದಿ ಅರೇಬಿಯ, ಬಹ್ರೇನ್, ಕತಾರ್, ಮುಂತಾದ ದೇಶಗಳ ಅಮಾನವೀಯ ಆಡಳಿತದ ಧೋರಣೆಯು ತಿಳಿಯದೆ ? ಅದನ್ನೇಕೆ ತಡೆಯುವುದಿಲ್ಲ ಅಥವಾ ನಿಗ್ರಹಿಸುವುದಿಲ್ಲ ? ಇರಾಕ್ – ಇರಾನ್‌ಗಳ ಮೇಲೆ ಗದಾಪ್ರಹಾರ ಮಾಡುವ ಅಮೇರಿಕಾ, ಸೌದಿ ಅರೇಬಿಯದ ಕ್ರೂರ ವ್ಯವಸ್ಥೆಯನ್ನು ನವಿಲು ಗರಿಯಿಂದ ಮಾತ್ರವೇ ಸ್ಪರ್ಶಿಸುತ್ತದೆ. ಇಲ್ಲದಿದ್ದರೆ ಅಮೇರಿಕಾದ 'ಅರ್ಮಾಕೊ' ಕಂಪನಿಗೆ ಬಿಲಿಯನ್‌ಗಟ್ಟಲೆ ಲಾಭಗಳಿಕೆ ಸಾಧ್ಯವಾದೀತೆ ! ಈ ಮನಸ್ವೀ ಅಥವಾ ಕ್ರೂರ ಸರ್ವಾಧಿಕಾರಿ ಸರ್ಕಾರಗಳಿಗೆ ಆಯಾ ದೇಶಗಳ ಜನರಿಂದ ಪ್ರತಿರೋಧವೇನಾದರೂ ಇದ್ದರೆ ಸರ್ವಾಧಿಕಾರಿಗಳ ರಕ್ಷಣೆಗೆ ಅಮೇರಿಕಾ ಧಾವಿಸುತ್ತದೆ. ಕಳೆದ ಎರಡು ಮೂರು ವರ್ಷಗಳಲ್ಲಿ ಬಹ್ರೇನ್‌ನಲ್ಲಿ ಇದನ್ನು ನೋಡಿದ್ದೇವೆ. ಅಥವಾ, ಕಳೆದ ಮೂವತ್ತೈದು ವರ್ಷಗಳಲ್ಲಿ ಆಫ್ಘಾನಿಸ್ತಾನದ ಚರಿತ್ರೆಯನ್ನು ಗಮನಿಸೋಣ : ಅಲ್ಲಿಯ ಸೇನೆಯು ದೊರೆಯನ್ನು ಉಚ್ಚಾಟಿಸಿ ಅಧಿಕಾರಕ್ಕೆ ಬಂತು. ತಕ್ಷಣದ ಅದರ ಕ್ರಮ ಭೂಸುಧಾರಣೆಯನ್ನು ಕುರಿತಾದದ್ದು, ಸಾಮಾಜಿಕ ಬದಲಾವಣೆಗೆ ಯತ್ನಿಸುವುದು. ಇರಾನಿನ ಷಾ ಆಗ್ಗೆ ಅಮೇರಿಕಾದ ಪ್ರೇಮಪುತ್ಥಳಿಯಾಗಿದ್ದ. ಅಮೇರಿಕಾದೊಡನೆ ಕೈ ಜೋಡಿಸಿ ಆಫ್ಘಾನಿಸ್ತಾನದಲ್ಲಿ ಜನಪರವಾಗಿದ್ದ ಸೇನೆಯ ಆಡಳಿತವನ್ನು ವಿರೋಧಿಸಿದ. ನಾಗರಿಕ ಸರ್ಕಾರವು ತರಾಕಿಯಂಥವರ ನಾಯಕತ್ವ ಹೊಂದಿತ್ತು, ಸೇನೆಯು ತರಾಕಿಯ ಪಕ್ಷದ ಬೆಂಬಲಕ್ಕೆ ನಿಂತಿತ್ತು. ಅಮೇರಿಕಾ ಮತ್ತು ಇರಾನಿನ ಷಾ ಆ ಪಕ್ಷವನ್ನು ಬುಡಮೇಲು ಮಾಡಲು ತವಕಿಸಿ ಮಧ್ಯಪ್ರವೇಶ ಮಾಡಹೊರಟಿದ್ದು ಇತಿಹಾಸ, ಅದನ್ನು ಮರೆಯಲಾಗದು. ತರಾಕಿ ಸರ್ಕಾರವು ಸೇನೆಯನ್ನು ಆಡಳಿತದಿಂದ ದೂರವಿರಿಸಿ ಭೂಸುಧಾರಣೆಯನ್ನು ಜಾರಿಗೆ ತರಲು ಹೊರಟು ಸೋವಿಯೆತ್ ಒಕ್ಕೂಟದ ಬೆಂಬಲವನ್ನು ಅಪೇಕ್ಷಿಸಿತು. ಅದರ ಪರಿಣಾಮ ತಿಳಿದೇ ಇದೆ. ಆಂತರಿಕ ಬಿಕ್ಕಟ್ಟು, ತರಾಕಿ ಸರ್ಕಾರದ ಪತನ, ವಿಶ್ವಸಂಸ್ಥೆಯ ಕಚೇರಿಯಲ್ಲೇ ನಜೀಬುಲ್ಲಾನ ಹತ್ಯೆ, ಸೋವಿಯೆತ್ ಸೈನ್ಯವು ಹಿಂದಕ್ಕೆ ಸರಿದಿದ್ದು, ತಾಲಿಬಾನ್ ಧೋರಣೆಗೆ ಯಶಸ್ಸು, ಅಂತರ್ಯುದ್ಧ, ಅಮೇರಿಕಾವು ಪರದೆ ಹಿಂದೆ ನಿಂತು ಕೈಗೊಂಬೆಗಳನ್ನು ಆಡಿಸಿದ್ದು, ಇತ್ಯಾದಿ. ಆಗ ಅಮೇರಿಕಾದ ಅಧ್ಯಕ್ಷನಾಗಿದ್ದವನು ಜಿಮ್ಮಿ ಕಾರ್ಟರ್. ಆತ ಮುಜಾಹಿದೀನ್‌ಗೆ ಶಸ್ತ್ರಾಸ್ತ್ರ ಸರಬರಾಜು ಮಾಡುವ ಗುಟ್ಟಿನ ಸಂಚು ರೂಪಿಸಿದ. ಅದು ಅಮೇರಿಕಾದ ಹಣದಿಂದ ಆಯುಧಗಳನ್ನು ಖರೀದಿಸಿತು. ಈಜಿಪ್ಟ್, ಚೀಣಾ, ಇಸ್ರೇಲ್ ದೇಶಗಳಿಂದ ! ಸೋವಿಯೆತ್ ಒಕ್ಕೂಟವು ಆಫ್ಘಾನಿಸ್ತಾನಕ್ಕೆ ಪ್ರವೇಶಿಸಿದ್ದುದರಿಂದ ಮುಜಾಹಿದೀನ್‌ಗೆ ಬೆಂಬಲವು ಸರಿಯಾದ ಕ್ರಮವೆಂದು ಅಮೇರಿಕಾ ವಾದಿಸಿತು. ಇದೆಲ್ಲಾ ೧೯೭೯ರ ಮುಂಚಿನ ಮತ್ತು ನಂತರದ ಘಟನೆಗಳು. ಆದರೆ ಮುಂಚಿನ ಘಟನೆಗಳನ್ನು ಮುಚ್ಚಿಡಲಾಗಿದೆ. ಸೋವಿಯೆತ್ ಸೈನ್ಯವು ಆಫ್ಘಾನಿಸ್ತಾನವನ್ನು ಪ್ರವೇಶಿಸುವ ಆರು ತಿಂಗಳ ಮುನ್ನವೇ ಮುಜಾಹಿದೀನ್ ಇಸ್ಲಾಮಿ ಬಂಡುಕೋರರಿಗೆ ಶಸ್ತ್ರಾಸ್ತ್ರಗಳನ್ನು ಅಮೇರಿಕಾ ಸರಬರಾಜು ಮಾಡಿತ್ತು. ಸೋವಿಯೆತ್ ಸೈನ್ಯದ ಪ್ರವೇಶವಾಗಲಿ, ಯುದ್ಧ ನಡೆಯಲಿ, ಎಂಬುದು ಅಮೇರಿಕಾದ ಹುನ್ನಾರ. "ಸೋವಿಯೆತ್ ಒಕ್ಕೂಟದ ವಿಯೆಟ್ನಾಂ ಆಗಿ ಆಫ್ಘಾನಿಸ್ತಾನ" ಎಂಬ ಉದ್ದೇಶ ಅಮೇರಿಕಾದ್ದು. ಅಮೇರಿಕಾಕ್ಕೆ ಯುದ್ಧ ಬೇಕಾಗಿತ್ತು, ಅಷ್ಟೆ. ಒಂದು ಪ್ರಜಾಪ್ರಭುತ್ವವಾದಿ ದೇಶವು ಪ್ರಜಾಪ್ರಭುತ್ವ ವಿರೋಧಿ ನೀತಿಯನ್ನು ಅನುಸರಿಸಿದ್ದಕ್ಕೆ ಆಫ್ಘಾನಿಸ್ತಾನ್ ಪ್ರಸಂಗ ಒಂದು ಉದಾಹರಣೆ. ತನ್ನ ಆರ್ಥಿಕ ಲಾಭವಷ್ಟೇ ಅದರ ಗುರಿ. ಹಿಂಸೆ ಮತ್ತು ಯುದ್ಧಕ್ಕೆ ಮುಜಾಹಿದೀನ್‌ಗಳ ಸಹಕಾರ ಸಹ ಅಮೇರಿಕಾಕ್ಕೆ ಅಸಹ್ಯವೆನಿಸಲಿಲ್ಲ. ಪಶ್ಚಿಮ ಏಷ್ಯದಲ್ಲಿ ಪ್ರಸಕ್ತ ನಡೆಯುತ್ತಿರುವ ವಿಪತ್ಕಾರಿ ಯುದ್ಧಗಳು ಸಹ ಅಮೇರಿಕಾದ ತೈಲ ರಾಜಕೀಯದ ಒಂದು ಭಾಗವೇ ಆಗಿವೆ. ಸೌದಿ ಅರೇಬಿಯದಲ್ಲಿ ಅರ್ಮಾಕೊ ಕಂಪನಿ, ಇತರ ದೇಶಗಳಲ್ಲಿ ಅದು ಮತ್ತು ಬೇರೆಯವು !

ಹವರ್ಡ್ ಝಿನ್ ಈ ಇಡೀ ಕರ್ಮಕಾಂಡವನ್ನು ತನ್ನ ಹಲವು ಲೇಖನಗಳಲ್ಲಿ ಸಾಧಾರವಾಗಿ ಬಿಚ್ಚಿಟ್ಟಿದ್ದಾನೆ. ಮೊದಲ ಮಹಾಯುದ್ಧದ ಘಟನಾವಳಿಗಳ ಒಂದು ಪಾರ್ಶ್ವ ನೋಟ ಹೀಗಿದೆ : ಅಮೇರಿಕಾ ಮೊದಲಲ್ಲಿ ಯುದ್ಧದ ಭಾಗಿಯಾಗಿರಲಿಲ್ಲ, ಮಿತ್ರರಾಷ್ಟ್ರವಾಗಿದ್ದ ಬ್ರಿಟನ್ನಿಗೆ ಸಾಲ ನೀಡಿ ಮಾರುಕಟ್ಟೆ ವಿಸ್ತರಣೆಗೆ ಆದ್ಯತೆ ನೀಡಿತ್ತು. ಅದರ ಭಾಗವಾಗಿ ಬ್ರಿಟನ್ನಿಗೆ ಯುದ್ಧಸಾಮಗ್ರಿ ಹರಿಯಲಾರಂಭಿಸಿತು. ೧೯೧೫ರಲ್ಲಿ ಜರ್ಮನಿಯು ಬ್ರಿಟನ್ನಿನ ಲೂಸಿಟಾನಿಯ ಎಂಬ ಹಡಗನ್ನು ಧ್ವಂಸ ಮಾಡಿತು. ಆಗ ಅಮೇರಿಕಾ ಹೇಳಿತು, "ಬ್ರಿಟನ್ನಿನ ಹಡಗಿನಲ್ಲಿ ಯುದ್ಧಸಾಮಗ್ರಿ ಇರಲಿಲ್ಲವಾದ್ದರಿಂದ ಜರ್ಮನಿಯ ಹೇಯಕೃತ್ಯವು ಖಂಡನೀಯ" ಎಂದು. ಸತ್ಯವು ಬೇರೆಯೇ ಇದೆ; ಹಡಗಿನ ತುಂಬ ಇದ್ದುದೆಲ್ಲಾ ಯುದ್ಧ ಸಾಮಗ್ರಿಗಳೇ. ಅದನ್ನು ಅಮೇರಿಕಾ ಮತ್ತು ಬ್ರಿಟನ್ ಮುಚ್ಚಿಹಾಕಿದವು. ಕ್ರಮೇಣ ಅಮೇರಿಕಾ ರಣರಂಗವನ್ನು ನೇರವಾಗಿ ಪ್ರವೇಶಿಸಿತು. "ಅಮೇರಿಕಾದ ಪ್ರಜೆಗಳ ಹಕ್ಕುಗಳನ್ನು ಎಳ್ಳಷ್ಟೂ ಕಡಿಮೆ ಮಾಡಲಾಗುವುದಿಲ್ಲ. ಯುದ್ಧ ಜಾರಿಯಿರುವೆಡೆಗಳಲ್ಲೂ ವ್ಯಾಪಾರಕ್ಕಾಗಿ ಹಡಗುಗಳು ಸಂಚರಿಸುವ ಹಕ್ಕು ಹೊಂದಿವೆ," ಎಂಬುದು ಅಮೇರಿಕಾದ ಘೋಷಣೆಯಾಗಿತ್ತು. ಎಷ್ಟು ಪ್ರಜಾಪ್ರಭುತ್ವವಾದಿ ಧೋರಣೆ, ಎಂದು ಅದನ್ನು ಶ್ಲಾಘಿಸಲಾಗಿತ್ತು. ಅಮೇರಿಕಾ ಯುದ್ಧದಲ್ಲಿ ಪಾಲ್ಗೊಂಡಿದ್ದು ತನ್ನ ಪ್ರಜೆಗಳ ಹಕ್ಕುಗಳ ರಕ್ಷಣೆಗಾಗಿ ಎಂಬ ಐತಿಹ್ಯವನ್ನು ಪ್ರಚಾರ ಮಾಡಲಾಯಿತು. ಆದರೆ ನಿಜವಾದ ಆಕಾಂಕ್ಷೆಯು ಆರ್ಥಿಕ ಲಾಭ ಗಳಿಕೆಯೇ ಆಗಿತ್ತು. ಅದಕ್ಕಾಗಿ "ಮುಕ್ತ ವ್ಯಾಪಾರದ ವಾತಾವರಣ" ವೆಂಬ ಘೋಷಣೆಯನ್ನು ಮುಂದುಮಾಡಲಾಗಿತ್ತು.

ಯುದ್ಧವನ್ನು "ಘೋರ ಪಾತಕ"ವೆಂದು ಹೇಳಿ ತಣ್ಣಗೆ ಕೂರುವುದು ಅರ್ಥವಿಲ್ಲದ ನಡತೆ. ಬಂಡವಾಳಶಾಹಿಯು ಯುದ್ಧವನ್ನು ಹೇಗೆ ಮತ್ತು ಏಕೆ ಪೋಷಿಸುತ್ತದೆ ಎಂಬುದರ ಪರಾಮರ್ಶೆ ಅತಿ ಮುಖ್ಯವಾದ್ದು. ತನ್ನ "ಪ್ರಜೆಗಳ ರಕ್ಷಣೆ"ಗಾಗಿ ವಿಶ್ವದಲ್ಲೆಲ್ಲಾ ಯುದ್ಧವನ್ನು ಹಬ್ಬಿಸುವುದು ಅಮೇರಿಕಾದ ಪರಂಪರೆ, ಆದರೆ ನಿಜವಾಗಿ ಅದಕ್ಕೆ ಪ್ರೇರಣೆಯು ಬಂಡವಾಳಶಾಹಿಯ ಲಾಭಕೋರತನ. ಯಾವ ಸಂಕೋಚವೂ ಇಲ್ಲದೆ ಭಾರತ ಮತ್ತು ಪಾಕಿಸ್ತಾನಗಳೆರಡಕ್ಕೂ ಅಮೇರಿಕಾ ಎಫ್–೧೬ ಯುದ್ಧ ವಿಮಾನಗಳನ್ನು ಮಾರುವ "ಪ್ರಜಾಪ್ರಭುತ್ವದ ಭದ್ರತೆ"ಯ ಢೋಂಗಿ ಮಾತಿನ ಸಾರಾಂಶ ತಿಳಿಯಿತಲ್ಲವೆ ?

*(ಸಂಗ್ರಹಾನುವಾದ : ಜಿ. ರಾಮಕೃಷ್ಣ )*

---

## ತೃಪ್ತಿ

ಬಿರಿದ ಹೂವಿನ
ಪಕಳೆಗೆ ಜಾರಿದ
ಮಳೆ ಹನಿಯೊಂದು
ಆಲದ ಮರದ
ಬೊಡ್ಡೆಯನಪ್ಪಿತು !
ಆಹ್ಲಾದಕರವಾಗಿ
ಮರ
ನಸುನಕ್ಕಿತು !

**ಅಂಬಾದಾಸ ವಡೆ**
ಕಪಡಾ ಬಜಾರ್
ಬಾಗಲಕೋಟೆ – ೫೮೭೧೦೧

---

**ಇಳಾ ದುಬೆ**
ಕೇರಾಫ್ : ಕೈವಲ್ಯಧಾಮ
ಲೋನಾವ್ಲ – ೪೧೦ ೪೦೩

# ಎಚ್. ವಿ. ಸಾವಿತ್ರಮ್ಮ ಅವರು ಚಿತ್ರಿಸಿದ ಕುಟುಂಬ ಮತ್ತು ಸಮಾಜ

**ಪ್ರೊ॥ ಸಬಿಹಾ ಭೂಮೀಗೌಡ**



ಕನ್ನಡದ ಮಹತ್ವದ ಲೇಖಕಿಯರಲ್ಲಿ ಎಚ್. ವಿ. ಸಾವಿತ್ರಮ್ಮನವರೂ ಒಬ್ಬರು. ಮೂವತ್ತರ ದಶಕದಲ್ಲಿ ಬರವಣಿಗೆ ಆರಂಭಿಸಿದ ಅವರು, ೯೦ರ ದಶಕದ ವರೆಗೂ ಸಾಹಿತ್ಯಕೃಷಿಯನ್ನು ಮುಂದುವರಿಸಿಕೊಂಡು ಬಂದವರು. ಅಂದರೆ ಐದು ದಶಕಗಳಲ್ಲಿ ನಮ್ಮ ಕುಟುಂಬ ವ್ಯವಸ್ಥೆ ಮತ್ತು ಸಮಾಜಗಳು ಎದುರುಗೊಂಡ ಹತ್ತುಹಲವು ವಿಪತ್ತುಗಳು, ಸ್ಥಿತ್ಯಂತರಗಳು ಮತ್ತು ಅವುಗಳ ಮೌಲ್ಯವ್ಯವಸ್ಥೆ ಯಲ್ಲಿನ ತಿಕ್ಕಾಟಗಳು ಮುಂತಾದುವನ್ನು ಇವರ ಕಥನ ಸಾಹಿತ್ಯವು ಚರ್ಚಿಸಿದೆ.

ಸಾವಿತ್ರಮ್ಮ ಅವರ ಕತೆಗಳಲ್ಲಿ 'ಕುಟುಂಬ' ಎಂಬ ಸಂಸ್ಥೆಯು ಮೂರ್ತರೂಪದಲ್ಲೂ, 'ಸಮಾಜ'ವು ಅಮೂರ್ತರೂಪದಲ್ಲೂ ಚಿತ್ರಣಗೊಂಡಿದೆ. ಎಂದರೆ ಇವರ ಸಾಹಿತ್ಯದಲ್ಲಿ ಸಮಾಜದ ಸ್ವರೂಪವನ್ನು ಈ ಮೂರ್ತರೂಪದ ಕುಟುಂಬದ ಮೂಲಕವೇ ಗ್ರಹಿಸುವುದು ಸಹಜವೂ ಅನಿವಾರ್ಯವೂ ಆಗಿದೆ. ಇವರು ಚಿತ್ರಿಸಿದ ಕುಟುಂಬದ ಸ್ವರೂಪದಲ್ಲಿ ಏಕರೂಪದ ಕೆಲವು ಅಂಶಗಳನ್ನು ಮೇಲ್ನೋಟಕ್ಕೇ ಗ್ರಹಿಸಬಹುದು. ಇವರ ಕಥನದಲ್ಲಿ ಕುಟುಂಬ ಎಂದರೆ ದಂಪತಿಗಳು ಮತ್ತು ಒಂದು ಮಗು ಮಾತ್ರವೇ ಇರುವಂತಹ ಪುಟ್ಟ ಕುಟುಂಬ. ಬೆಂಗಳೂರು ಮತ್ತು ಅದರ ಆಸುಪಾಸಿನ ಪ್ರದೇಶಗಳು ಇವರ ಕಥಾಜಗತ್ತಿನ ಕರ್ಮಭೂಮಿಯಾಗಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಹೆಣ್ಣುಮಕ್ಕಳಲ್ಲೇ ಕುಟುಂಬದ ಒಡೆತನ, ಹೊಣೆಗಾರಿಕೆ ಇರುವುದು ಕಂಡುಬರುತ್ತದೆ. ಬಹುತೇಕ ಕತೆಗಳಲ್ಲಿ ಕುಟುಂಬದಲ್ಲಿ ಹೆಣ್ಣುಮಕ್ಕಳದೇ ಕೊನೆಯ ನಿರ್ಧಾರ ಆಗಿರುವುದೂ ವಿಶಿಷ್ಟವಾಗಿದೆ. ಕುಟುಂಬದ ಒಳಗಿನ ಮತ್ತು ಹೊರಗಿನ ವಿದ್ಯಮಾನಗಳು ದಂಪತಿಗಳ ಭಾವಜಗತ್ತಿನ ಮೇಲೆ ಬೀರುವ ಪರಿಣಾಮಗಳ ಶೋಧನೆ ಹಲವು ಕತೆಗಳ ಕೇಂದ್ರವಾಗಿದೆ.

ಹೀಗೆ 'ಕುಟುಂಬ' ಎಂಬ ಪುಟ್ಟ ಘಟಕದ ಮೂಲಕ ಸಾವಿತ್ರಮ್ಮನವರು ತಮ್ಮ ಕಾಲದ ಸಮಾಜವು ಹಾದುಬಂದ ತಲ್ಲಣಗಳನ್ನು ಗ್ರಹಿಸಲು ಉದ್ದೇಶಿಸಿದ್ದಾರೆ. ಸ್ವಾತಂತ್ರ್ಯ ಹೋರಾಟ, ದೇಶ ವಿಭಜನೆಯ ಕಾಲದ ಹಿಂಸೆಗಳು, ರಾಜಕೀಯ ಭ್ರಷ್ಟಾಚಾರ, ಶಿಕ್ಷಣ ಮತ್ತು ಉದ್ಯೋಗ ಅರಸಿ ಜರುಗುವ ಹೊರವಲಸೆ (ವಿದೇಶಯಾತ್ರೆ), ಹೊಟ್ಟೆಪಾಡಿಗೆ ನಡೆಯುವ ಒಳವಲಸೆ (ಹಳ್ಳಿಯಿಂದ ನಗರಕ್ಕೆ) ಮುಂತಾದ ಚಾರಿತ್ರಿಕ ಹಾಗೂ ಸಾಮಾಜಿಕ ವಿದ್ಯಮಾನಗಳು ಅಂತಿಮವಾಗಿ ಕುಟುಂಬವನ್ನು ಮತ್ತು ದಾಂಪತ್ಯವನ್ನು ಸಂಕೀರ್ಣವಾಗಿ ಅಲುಗಾಡಿಸುವ, ಬುಡಮೇಲು ಮಾಡುವ, ಛಿದ್ರಗೊಳಿಸುವ ಬಗೆಯನ್ನು ಶೋಧಿಸುವ ಕೆಲಸ ಇವರ ಕತೆಗಳ ಕೇಂದ್ರ ಕಾಳಜಿಯಾಗಿದೆ. ಅದಕ್ಕಾಗಿ ಮಧ್ಯಮ ಮತ್ತು ಕೆಳಮಧ್ಯಮ ವರ್ಗದ ಕುಟುಂಬ ಗಳನ್ನು ಪ್ರಧಾನ ಭೂಮಿಕೆಯಾಗಿ ಆಯ್ದುಕೊಂಡಿದ್ದಾರೆ.

✴ ರಾಮಾಯಣ ಆಧಾರಿತ ಕಾದಂಬರಿಗಳನ್ನು ಹೊರತುಪಡಿಸಿದರೆ, ಇಡಿಯಾಗಿ ಇವರ ಸಾಹಿತ್ಯ ಕೃತಿಗಳಲ್ಲಿ ಆವರಿಸಿದ್ದು 'ವೈದಿಕ' ಸಮಾಜವೇ. ಇದು ಸಾವಿತ್ರಮ್ಮನವರ ಕಥಾಜಗತ್ತಿನ ಪರಿಮಿತಿಯೂ ಹೌದು; ಅವಕಾಶವೂ ಹೌದು. ನಿರ್ದಿಷ್ಟ ಸಮಾಜ ಎಂಬುದು ಸಾಹಿತ್ಯದಲ್ಲಿ ಅದನ್ನು ಬಳಸಿಕೊಳ್ಳುವವರ ಮೇಲೆ, ಬಳಸಿಕೊಂಡ ರೀತಿಯ ಮೇಲೆ ತೀರ್ಮಾನ ಆಗುತ್ತದೆ. ಸಾವಿತ್ರಮ್ಮ ಆ ಸಮಾಜದ ಪ್ರತಿನಿಧಿಯಾಗಿ, ಒಳಗಿನವರೂ, ವಿಮರ್ಶಕರೂ ಆಗಿ ಆ ಸಮಾಜವನ್ನು ನೋಡಿದ್ದಾರೆ, ಟೀಕಿಸಿದ್ದಾರೆ, ವಿಮರ್ಶಿಸಿದ್ದಾರೆ, ಮರಳಿ ಕಟ್ಟಿದ್ದಾರೆ.

✴ ಇವರು ಈ ವೈದಿಕ ಸಮಾಜ ಮತ್ತು ಕುಟುಂಬವನ್ನು ಕೇಂದ್ರವಾಗಿ ಇರಿಸಿಕೊಂಡು ಚರ್ಚೆಯನ್ನು ನಡೆಸಿದರೂ ಅದು ಒಟ್ಟಾಗಿ ಮಹಿಳಾ ಸಮುದಾಯವನ್ನು ಪ್ರತಿನಿಧಿಸುತ್ತದೆ. ಏಕೆಂದರೆ

ಸಮಾಜ, ಸಾಮಾಜಿಕರು ಎಂದು ನಿರ್ದಿಷ್ಟವಾಗಿ ಇವರ ಕತೆಗಳಲ್ಲಿ ಗುರುತಿಸುವುದು ಕಷ್ಟ. ಸಾಮಾಜಿಕ ವಿದ್ಯಮಾನಗಳು ಅಂತಿಮವಾಗಿ ಕುಟುಂಬ ಪದ್ಧತಿಯ ಮೇಲೆ ಬೀರುವ ಪ್ರಭಾವದ ಅನ್ವೇಷಣೆಯೇ ಸಾವಿತ್ರಮ್ಮನವರ ಆಸ್ಥೆಯಾಗಿದೆ.

ಹಿಂದೂ-ಕ್ರೈಸ್ತ, ಮುಸ್ಲಿಂ-ಹಿಂದೂ ವೈವಾಹಿಕ ಸಂಬಂಧಗಳು ವಿರಳವಾಗಿ ಕತೆಗಳಲ್ಲಿ ಜರುಗಿದರೂ, ಅವು ವೈಯಕ್ತಿಕ ನೆಲೆಯಲ್ಲಿ ಉಳಿದುಬಿಟ್ಟು, ಸಮಾಜದಲ್ಲಿ ಅದರ ಪ್ರತಿಕ್ರಿಯೆಯ ರೂಪಗಳು ಎಲ್ಲೂ ಕಾಣುವುದಿಲ್ಲ.

'ಸೀತೆ-ರಾಮ-ರಾವಣ' ಮತ್ತು 'ವಿಮುಕ್ತಿ'ಗಳಲ್ಲಿ ಕ್ಷತ್ರಿಯ ಸಮಾಜ, ವಾನರ ಸಮಾಜ ಮತ್ತು ಲಂಕೆಯ ದಾನವ ಸಮಾಜದ ರೀತಿ-ನೀತಿ, ಸಂಸ್ಕಾರ, ಗಂಡು-ಹೆಣ್ಣಿನ ಸಂಬಂಧದಲ್ಲಿನ ತುಲನೆ ಹಲವು ಕಡೆಗಳಲ್ಲಿ ಪ್ರಖರವಾಗಿ ನಡೆದಿವೆ. ಹಾಗೂ ಯಾವುದು ಶ್ರೇಷ್ಠ ಸಮಾಜ ಎಂದು ಭಾವಿಸಲಾಗಿದೆಯೋ ಅದು ಮಹಿಳೆಯ ನೆಲೆಯಿಂದ ಎಷ್ಟು ರೂಕ್ಷವಾಗಿದೆ ಎಂಬುದರ ವಿಮರ್ಶೆ ನಡೆದಿದೆ. ಇಂಥ ಕಡೆಗಳಲ್ಲಿ ಸಾವಿತ್ರಮ್ಮನವರ ಸ್ತ್ರೀವಾದಿ ಚಿಂತನೆಯ ಜೊತೆಗೆ ಸಮಾಜಶಾಸ್ತ್ರೀಯ, ಮನಶ್ಶಾಸ್ತ್ರೀಯ ನೆಲೆಯ ಪ್ರಭಾವಗಳನ್ನೂ ಗುರುತಿಸಲು ಸಾಧ್ಯವಿದೆ.

ಇವರು ವೈದಿಕ ಕುಟುಂಬದ ಮಹಿಳೆಯ ಮೂಲಕ ಪ್ರಶ್ನಿಸುವ ದಾಂಪತ್ಯದಲ್ಲಿ ಮಹಿಳೆಯ ಅಸ್ಮಿತೆಯ ಪ್ರಶ್ನೆಗಳು, ಆಯ್ಕೆಯ ಪ್ರಶ್ನೆಗಳು, ಲೈಂಗಿಕತೆಯ ವಿಚಾರಗಳು, ಅಧಿಕಾರದ ಪ್ರಶ್ನೆಗಳು ಇತ್ಯಾದಿ ಏನಿವೆಯೋ ಇವು ಜಾತಿ, ಧರ್ಮ, ವರ್ಗ, ಪ್ರಾಂತ್ಯ ಮತ್ತು ಕಾಲದ ಗಡಿಗಳನ್ನು ಮೀರಿ ಎಲ್ಲ ಮಹಿಳೆಯರವೂ ಆಗಿವೆ. ಇದು ಸಾವಿತ್ರಮ್ಮನವರ ಬರಹಗಳ ಹೆಚ್ಚುಗಾರಿಕೆಯಾಗಿದೆ.

✶ ಕುಟುಂಬ ಎಂದೊಡನೆ, ಇವರು ಚಿತ್ರಿಸಿರುವ ಕುಟುಂಬ ಅವಿಭಕ್ತ ಕುಟುಂಬ; ಸಣ್ಣ, ಮಿತಸಂತಾನದ ಕುಟುಂಬ. ಅವರು ತಮ್ಮ ನಲವತ್ತರ ವಯಸ್ಸಿನಲ್ಲಿ ಬರವಣಿಗೆ ಆರಂಭಿಸಿದ ಕಾಲದಿಂದಲೇ ಈ ಸಂಗತಿ ಸುವ್ಯಕ್ತವಾಗಿದೆ. ಅದೇ ರೀತಿಯಲ್ಲಿ ಅಂದು ಎಲ್ಲ ಸಮುದಾಯಗಳಲ್ಲೂ ಸಹಜವಾಗಿದ್ದ 'ಸೋದರಿಕೆ ಸಂಬಂಧ'ದಲ್ಲಿ ಜರುಗುತ್ತಿದ್ದ ವಿವಾಹ ಪದ್ಧತಿಯೇ ಇವರ ಅನೇಕ ಕತೆಗಳಲ್ಲಿ ಅನುರಣನಗೊಂಡಿದೆ. ಚಿಕ್ಕ ವಯಸ್ಸಿನಲ್ಲೇ ಗಂಡ–ಹೆಂಡತಿ ಎಂಬ ಭಾವದಿಂದ ಬೆಳೆಯುವ ಎಳೆಯರ ಮನಃಸ್ಥಿತಿ; ಹಿರಿಯರ ಇಂಥ ತೀರ್ಮಾನಗಳು ಎಳೆಯರ ಬದುಕಿನ ಮುಂದಿನ ಅವಧಿಯಲ್ಲಿ ಹೆಣ್ಣಿನಿಂದಲೋ, ಗಂಡಿನಿಂದಲೋ ಮರುವಿಮರ್ಶೆಗೆ, ನಿರಾಕರಣೆಗೆ ಒಳಗಾದಾಗ ತಿರಸ್ಕೃತರಾದವರ ಮೇಲೆ ಬೀರುವ ಪರಿಣಾಮಗಳ ಗಾಢತೆಯನ್ನು ಇಲ್ಲಿನ ಹಲವು ಕತೆಗಳು ವಿಮರ್ಶೆಗೆ ಒಡ್ಡಿವೆ. ಸಾವಿತ್ರಮ್ಮನವರು ಈ ಸೋದರ ಸಂಬಂಧದೊಳಗಿನ ವಿವಾಹದ ಕುರಿತು ಯಾವುದೇ ನಿರ್ದಿಷ್ಟ ನಿಲುವನ್ನು ಹೊಂದಿರದೆ, ಅದನ್ನು ದಾಂಪತ್ಯದ ಸಾರ್ಥಕ್ಯದ ಶೋಧಕ್ಕೆ ನಿಕಷವಾಗಿ ಬಳಸಿಕೊಂಡಿದ್ದಾರೆ. 'ಸ್ಮರಣೆ', 'ಮಣ್ಣಿನ ಕರೆ', 'ಪಾತು ಕಥೆ', 'ದೇವರ ಸತ್ಯ', 'ನಿರಾಶ್ರಿತೆ', 'ಸೋದರಿಕೆ', 'ಮಾಯದ ನೆನಪು' ಇತ್ಯಾದಿ ಕತೆಗಳನ್ನು ಈ ನೆಲೆಯಲ್ಲಿ ಗುರುತಿಸಬಹುದು. ಇಂಥ ಸಂದರ್ಭದಲ್ಲಿ ನೋಯುವ ವ್ಯಕ್ತಿ ಸಾಮಾನ್ಯವಾಗಿ ಹೆಣ್ಣೇ ಆಗಿದ್ದರೂ, ಗಂಡಿನ ನೆಲೆಯಿಂದಲೂ ಇಂಥ ಇಕ್ಕಟ್ಟುಗಳನ್ನು ಸಾವಿತ್ರಮ್ಮ ವಿಶ್ಲೇಷಿಸಿದ್ದಾರೆ.

✶ ದಾಂಪತ್ಯದೊಳಗಿನ ಏಕತಾನತೆ ಮತ್ತು ದಂಪತಿಗಳ ಮನಸ್ಸುಗಳ ಜಿಡ್ಡುಗಟ್ಟುವಿಕೆಯು ಸಾವಿತ್ರಮ್ಮನವರ ಕತೆಗಳಲ್ಲಿ ಮತ್ತೆ ಮತ್ತೆ ವಿಮರ್ಶೆಗೆ ಒಳಗಾಗಿದೆ. ವ್ಯಕ್ತಿಯ ೪೦–೫೦ರ ನಡುವಿನ ಕಾಲವು ದಾಂಪತ್ಯದೊಳಗೆ ಹುಟ್ಟಿಸುವ ತಲ್ಲಣಗಳನ್ನು ಗಂಡು ಮತ್ತು ಹೆಣ್ಣು ಇಬ್ಬರ ನೆಲೆಯಿಂದಲೂ ವಿಶ್ಲೇಷಿಸುವ ಆಸ್ಥೆ ಇವರ ಕತೆಗಳಲ್ಲಿ ಕಾಣಿಸಿಕೊಂಡಿದೆ. 'ಹಳೆಯ ಜೋಡು' ಕತೆಯಲ್ಲಿ ಬರುವ ಮಾತು ಹೀಗಿದೆ : "ಮನೆಯಲ್ಲಿನ ಮೇಜು ಕುರ್ಚಿಗಳಂತೆ ಅವಳೂ ಒಂದು ವಸ್ತು ; ಸ್ವಲ್ಪ ಹೆಚ್ಚು ಆವಶ್ಯಕವಾದ ವಸ್ತು" ಎಂದು ಭಾವಿಸುವ ಪುರುಷ, ತನ್ನ ಸಂಪರ್ಕಕ್ಕೆ ಬರುವ ಹರಯದ, ಸಲಿಗೆಯಿಂದ, ಸಾಲಂಕೃತಳಾಗಿ ತನ್ನನ್ನು ಆಕರ್ಷಿಸುವ ಉದ್ದೇಶದಿಂದಲೇ ಬಳಿ ಬರುವ ಯುವತಿಯ ಕಡೆ ವಾಲುವುದು ಒಂದು ಬಗೆ. ಮಧ್ಯ ವಯಸ್ಸಿನ ಇಂಥ ಸಂಕ್ರಮಣ ಸ್ಥಿತಿಯನ್ನು 'ಹಳೆಯ ಜೋಡು' ಕತೆ ದಂಪತಿಗಳಿಬ್ಬರ ನೆಲೆಯಲ್ಲಿ ಮುಖಾಮುಖಿ ಮಾಡುತ್ತದೆ. ಗಂಡ 'ಸ್ವಾಮಿ'ಗೆ ರಾಧೆ ಎದುರಾದರೆ, ಪತ್ನಿ 'ರುಕ್ಮಿಣಿ'ಗೆ ಬಾಲ್ಯದ ಗೆಳೆಯ ಶ್ರೀಕಂಠನ ಪ್ರೀತಿಯ ಹಸ್ತ ಅವಕಾಶವಾಗಿ ತೆರೆದುಕೊಂಡಿದೆ. ಆದರೆ ನೈತಿಕ ಎಚ್ಚರ ಇಬ್ಬರೊಳಗೂ ಜಾಗೃತವಾಗಿ, ದಾಂಪತ್ಯದಾಚೆಗಿನ ಸಂಬಂಧ ಏರ್ಪಡುವುದಿಲ್ಲ. 'ಭ್ರಾಂತಿ', 'ಮನಸ್ಸಿನಾಳದಲ್ಲಿ', 'ಮಣ್ಣಿನ ಕರೆ', 'ಮರುಮದುವೆ' ಮುಂತಾದವು ಈ ಮಾದರಿಯವು.

✶ ಇಂಥ ವಸ್ತುವಿನಲ್ಲಿ ಸಾವಿತ್ರಮ್ಮ ತೋರುವ ಹೆಚ್ಚುಗಾರಿಕೆ ಎಂದರೆ, ದಾಂಪತ್ಯದೊಳಗಿನ 'ಏಕತಾನತೆ' ಪುರುಷನಂತೆ ಮಹಿಳೆಗೂ ಅಸಹನೀಯವಾಗಿದೆ; ನಡುವಯಸ್ಸಿನಲ್ಲಿಯೂ ಮಹಿಳೆ ತನ್ನ ಬಾಲ್ಯದ ಸ್ನೇಹ/ಸ್ನೇಹಿತನ ನೆನಪನ್ನು ಜೀವಂತವಾಗಿಟ್ಟುಕೊಂಡಿರಬಹುದು; ಆ ಪ್ರೀತಿಯ ಅಥವಾ ಸ್ನೇಹದ ಆಪ್ತಹಸ್ತ ಅವಳಿಗಾಗಿ ಅದುವರೆಗೆ ಕಾದಿರಬಹುದು ಎಂಬುದನ್ನು ಕಾಣಿಸುತ್ತಾರೆ. ಎಂದರೆ ವಿವಾಹವಾದೊಡನೆ ಮಹಿಳೆಗೆ ಎಲ್ಲ ಬಾಗಿಲುಗಳೂ ಮುಚ್ಚಿದಂತೆ ಆಗಬೇಕಿಲ್ಲ; ಹುಡುಕಿದರೆ ಬಿಡುಗಡೆಯ ರಾಜಮಾರ್ಗಗಳೋ, ಕಿರುಮಾರ್ಗಗಳೋ ಇವೆ ಎಂಬ ನಿಲುವು ಇಲ್ಲಿ ಪ್ರಕಟವಾಗಿದೆ. ಇದೊಂದು ಕ್ರಾಂತಿಕಾರಕ ಹೆಜ್ಜೆಯಾದರೆ, ಮಡದಿಗೆ ಅಂತಹ ಅವಕಾಶದ ಸಾಧ್ಯತೆಗಳಿವೆ ಎಂಬುದು ಗಂಡನ ಅರಿವಿಗೆ ಬಂದಾಗ, ಅವನಲ್ಲಿ ಹುಟ್ಟುವ ಅತಂತ್ರತೆಯ, ಅಭದ್ರತೆಯ ಭಾವದ ಚಿತ್ರಣವೂ ಇವರ ಕತೆಗಳಲ್ಲಿ ಪರಿಣಾಮಕಾರಿಯಾಗಿ ಒಡಮೂಡಿದೆ. ದಾಂಪತ್ಯದೊಳಗಿನ ಏಕತಾನತೆಗೆ ಅದರಲ್ಲಿನ ಅಧಿಕಾರದ ಸಂಬಂಧಗಳು ಬಹುಮುಖ್ಯ ಪಾತ್ರವನ್ನು ವಹಿಸಿವೆ ಎಂಬ ತೀರ್ಮಾನ ಇವರ ಕತೆಗಳಲ್ಲಿ ಕಂಡುಬರುತ್ತದೆ. ಈ ಅಧಿಕಾರದ ಸಂಬಂಧದ 'ಒಪ್ಪಿತ ಯಾಜಮಾನ್ಯ'ವು ಎಷ್ಟು ನವಿರಾಗಿ ಮತ್ತು ಬಲಿಷ್ಠವಾಗಿ ಇದೆಯೆಂದರೆ, ಇದು ಜೇಡದ ಮೋಹಕ ಬಲೆಯೊಳಗೆ ಸಿಲುಕಿ ಒದ್ದಾಡುವ ಕೀಟದ ಸ್ಥಿತಿಗೆ ಸಮಾನವಾಗಿದೆ. ಮನೆಯೊಳಗಿನ ಮಡದಿಯ ಒಟ್ಟು ಕೆಲಸ–ಕಾರ್ಯಗಳು, ಸಂಗೋಪನೆ ಮುಂತಾದವುಗಳನ್ನು ಪುರುಷ 'ಲೆಕ್ಕಕ್ಕೇ ತೆಗೆದುಕೊಳ್ಳದಂತಹ' ಮನಃಸ್ಥಿತಿಯು, ಆಕೆಯ ಅನುಪಸ್ಥಿತಿಯಲ್ಲಿ ಮಾತ್ರ ಅವನ ಪ್ರಜ್ಞಾಸ್ತರಕ್ಕೆ ಅರ್ಥವಾಗುತ್ತದೆ. ಆಗ ಆತ ತನ್ನ ಎಂದಿನ ಕಾಠಿಣ್ಯ ಕಳೆದುಕೊಂಡು ಮೆದುವಾಗುತ್ತಾನೆ. ಆದರೆ ಪುರುಷನ ಇಂಥ ಪರಿವರ್ತನೆ ಕಾಲಿಕವಾದುದು ಮತ್ತು ಕ್ಷಣಿಕವಾದುದು. 'ಭಿನ್ನ ಪರಿಸರ'ದಲ್ಲಿ ಅವಳೊಡನೆ ಪ್ರೀತಿಯ, ದಾಂಪತ್ಯದ ನವೀಕರಣಕ್ಕೆ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗುವ ಪತಿ, ತನ್ನ ಸ್ವಗೃಹವನ್ನು ಪ್ರವೇಶಿಸಿದೊಡನೆ ಮಾಮೂಲಿನಂತಾಗುತ್ತಾನೆ. ಅಂತೆಯೇ ಮಡದಿಯೂ 'ಇದು ಇರೋದೇ ಹೀಗೆ' ಎಂದು ವಿಷಾದದಿಂದ ಪೂರ್ವಸ್ಥಿತಿಯನ್ನು ಸ್ವೀಕರಿಸುವುದನ್ನು ಕತೆಗಳು ಚರ್ಚಿಸಿವೆ. ಎಂದರೆ, 'ಮನೆ' ಎಂಬ ನಾಲ್ಕು ಗೋಡೆಗಳು, ದಾಂಪತ್ಯದೊಳಗಿನ ಅಧಿಕಾರದ ಸಂಬಂಧವನ್ನು ಊರ್ಜಿತಗೊಳಿಸುವ, ಇಬ್ಬರಲ್ಲೂ ಅಂತಸ್ಥಗೊಳಿಸುವ ಬಗೆಯಲ್ಲಿನ ವಿಸ್ಮಯ ಸಾವಿತ್ರಮ್ಮನವರನ್ನು ಗಾಢವಾಗಿ ಕಾಡಿದಂತಿದೆ. ಈ ಬಗೆಯ 'ಸಾಮಾಜೀಕರಣ'ದ ಪರಿಣಾಮಗಳನ್ನು ಅವರಂತೆ ಸೂಕ್ಷ್ಮ ವಿವರಗಳಲ್ಲಿ ಹಿಡಿದಿಟ್ಟ ಲೇಖಕಿಯರು ವಿರಳ.

✶ 'ಅಧಿಕಾರ'ದ ನೆಲೆ ಕುಟುಂಬದೊಳಗೆ ಏಕಪಕ್ಷೀಯ ತೀರ್ಮಾನ ಕೈಗೊಳ್ಳುವ ಕ್ರಮದ ಕುರಿತ ಟೀಕೆ ಇದೆ.

✶ ಲೈಂಗಿಕತೆಯಲ್ಲಿ ಅಡಗಿರುವ ಅಧಿಕಾರದ ಸಂಬಂಧಗಳ ಚರ್ಚೆ ಇವರ ಅನೇಕ ಕತೆಗಳಲ್ಲಿ ಕಾಣಿಸಿಕೊಂಡಿದೆ. 'ಪಂಥ' ಅಂತಹ ಒಂದು ಕತೆ. ಚಪಲ ಚೆನ್ನಿಗರಾಯ ಗೆಳೆಯನ ಜೊತೆ ತನ್ನ 'ಪತ್ನಿಯ ನಿಷ್ಠೆ'ಯ ಕುರಿತು ಪಂಥಕ್ಕೆ ಒಪ್ಪಿದ ಗಂಡ ಚಂದ್ರಕಾಂತನು ಅನಂತರ ಆಕೆಯ ಧೃತಿಯ ಕುರಿತಂತೆ ಅನುಭವಿಸುವ ತಲ್ಲಣದೊಳಗೆ ಈ ಅಧಿಕಾರದ ಸಂಬಂಧ ಗಾಢವಾಗಿದೆ. ಪತಿಯಾಗಿ ಅದುವರೆಗೆ ಪತ್ನಿಯ ಅಗತ್ಯಗಳ ಕುರಿತು ತಾನು ತೋರಿದ ಅವಜ್ಞೆ, ಉಪೇಕ್ಷೆಯ ಅರಿವು ಅವನಿಗೆ ಆದರೂ, ತನ್ನ ಪತ್ನಿಯ ನಿಷ್ಠೆಯಲ್ಲಿ ನಂಬಿಕೆ ಇದ್ದರೂ, ಗೆಳೆಯನ ಸ್ನೇಹಮಯ ಸಂಬಂಧಕ್ಕೆ ಪತ್ನಿ ಒಲಿದರೇನು ಮಾಡುವುದೆಂಬ ತಲ್ಲಣದಲ್ಲಿ ಇದುವರೆಗೆ ತಾನು ಅವಗಣಿಸಿದ 'ಅವಳ ಲೈಂಗಿಕ ಅಪೇಕ್ಷೆ'ಗಳ ಬಗ್ಗೆ ಅಪರಾಧೀ ಭಾವ ಮಾತ್ರ ಎಲ್ಲೂ ಮೂಡುವುದೇ ಇಲ್ಲ. 'ದಮಯಂತಿ' ಕತೆಯ ಭಾಸ್ಕರ, ಕೋಮುಗಲಭೆಯಲ್ಲಿ ಮಡದಿಯ ರಕ್ಷಣೆ ಮಾಡದೆ ಪಲಾಯನ ಮಾಡಿದ ತನ್ನ ಕೃತ್ಯಕ್ಕೆ ಹತ್ತಾರು ನೆಪಗಳನ್ನು ಎಳೆದು ತರುವಾತ. ಆಕೆ 'ನರ್ಸ್ ದಮಯಂತಿ'ಯಾಗಿ ಎದುರಾದಾಗ, ಗೆಳೆಯ ವೈದ್ಯ ಅವಳ ಕಾರ್ಯಕುಶಲತೆಯನ್ನು ಹೊಗಳಿದಾಗ, ಅವಳು ಮಾಂಗಲ್ಯಸರ ಧರಿಸದ್ದು ಕಂಡಾಗ, ಭಾಸ್ಕರನು ಈರ್ಷ್ಯೆ, ಸಿಟ್ಟು, ಕ್ರೋಧಗಳಿಂದ ನರಳುವಲ್ಲಿ ಇರುವುದೂ ಪತಿ ಎಂಬ ಅಧಿಕಾರವೇ. ತನ್ನ ಕಡೆಗಿನ ಅವಳ ಉಪೇಕ್ಷೆ ಅವನಿಗೆ ನುಂಗಲಾಗದ ತುತ್ತು. ಗೆಳೆಯ ಡಾ॥ ಮಹಮ್ಮದ್ ಜೊತೆಗಿನ ಅವಳ ಮರುವಿವಾಹ ಭಾಸ್ಕರನನ್ನು ಹತಾಶೆಯ ಪರಮಾವಧಿಗೆ ತಳ್ಳುತ್ತದೆ. ಎಂದರೆ ಪತಿ ಏನೇ ಆಗಿರಲಿ, ಹೇಗೇ ನಡೆದುಕೊಂಡಿರಲಿ, ಪತ್ನಿಯ ದೇಹ, ಮನಸ್ಸು, ಆಯ್ಕೆ, ಬದುಕಿನ ಸ್ವಾತಂತ್ರ್ಯ ಎಲ್ಲವುಗಳ ಮೇಲೆ ಪತಿಯ ಅಧಿಕಾರ ಎಂದಿಗೂ ಇರುತ್ತದೆ, ಇರಬೇಕು ಎಂಬ ಚಿಂತನೆ ಕುಟುಂಬ ವ್ಯವಸ್ಥೆಯಲ್ಲಿ ಅಂತಸ್ಥವಾಗಿರುವುದನ್ನು ಸಾವಿತ್ರಮ್ಮನವರು ಚಿತ್ರಿಸುತ್ತಲೇ, ಅದನ್ನು ಮುರಿಯುವ ಪ್ರಯತ್ನವನ್ನು ಕತೆಯೊಳಗೆ ಮಾಡುವುದು ಅವರ ಸ್ವತಂತ್ರ ಮತ್ತು ಸ್ವಸ್ಥ ಚಿಂತನೆಯ ದ್ಯೋತಕವಾಗಿದೆ.

✶ ದಾಂಪತ್ಯ ಜೀವನಕ್ಕೆ ಸಿದ್ಧವಾಗಿಲ್ಲದ, ಅಪಕ್ವ ವ್ಯಕ್ತಿತ್ವಗಳು ಮತ್ತು ಅಂಥ ವ್ಯಕ್ತಿಗಳ ಜೊತೆ ಬಾಳಬೇಕಾದ ಸಂಗಾತಿಯ ಸಂಕಟಗಳು ಇವರ ಹಲವು ಕತೆಗಳಲ್ಲಿ ವಸ್ತುವಾಗಿವೆ. 'ಪ್ರಶಸ್ತಿ' ಕತೆಯ ಸತ್ಯ, 'ಅನಾಥೆ'ಯ ರಾಮಯ್ಯ, 'ದುರಭಿಮಾನ'ದ ಕೃಷ್ಣಪ್ಪ, 'ಸ್ಮರಣೆ'ಯ ಸದಾನಂದ ಅಂಥ ಕೆಲವು ವ್ಯಕ್ತಿಗಳು. 'ಬಿಸಿಲುಗುದುರೆ'ಯ ಸುಶೀಲೆ, 'ಚಿರದುಃಖಿ'ಯ ನಳಿನಿ ಮುಂತಾದವರು ಅದರ ಇನ್ನೊಂದು ಮುಖ. ದಾಂಪತ್ಯದ ಮೂಲತತ್ವಗಳಾದ ಪರಸ್ಪರ ನಂಬಿಕೆ, ಸಮಾನತೆ, ಗೌರವ ಮುಂತಾದ ಭಾವಗಳೇ ಇಲ್ಲದೆ, ಜವಾಬ್ದಾರಿ, ಕರ್ತವ್ಯಗಳ ಅರಿವೇ ಇಲ್ಲದ ಸ್ತ್ರೀ–ಪುರುಷರಿಂದ ಕುಟುಂಬದ ಸಂಬಂಧ ಮತ್ತು ಕುಟುಂಬದೊಳಗೆ ಬದುಕುವ ಹಲವು ವ್ಯಕ್ತಿತ್ವಗಳು ನಲುಗುವ ಬಗೆಯನ್ನು ಮೇಲಿನ ಕತೆಗಳು ಚರ್ಚಿಸಿವೆ.

✶ ಕುಟುಂಬದೊಳಗಿನ ಲಿಂಗರಾಜಕಾರಣ ಮತ್ತು ಮುಖ್ಯವಾಗಿ ಲಿಂಗ

ಅಸಮಾನತೆಗಳನ್ನು ಇವರ ಕತೆಗಳು ಪರೀಕ್ಷಿಸುತ್ತ, ಪ್ರತಿರೋಧ ತೋರುತ್ತ ಬಂದಿವೆ. ಹೀಗಾಗಿ ಸಮಾಜದ ಸಿದ್ಧ ಪಡಿಯಚ್ಚಿಗಿಂತ ಭಿನ್ನ ಗುಣ–ಸ್ವಭಾವದ ಸ್ತ್ರೀಪಾತ್ರಗಳು ಕತೆಗಳಲ್ಲಿ ಇತ್ಯಾತ್ಮಕವಾಗಿ ಮೂಡಿಬಂದಿವೆ. ಮಹಿಳೆಯ ಲೈಂಗಿಕತೆಯನ್ನು ಅತ್ಯಂತ ಸಹಜವೆಂದು ಪ್ರತಿಪಾದಿಸಿರುವುದರ ಜೊತೆಗೆ, ಅದರಲ್ಲಿ ಅವಳ ಆಯ್ಕೆಯ ಸ್ವಾತಂತ್ರ್ಯವನ್ನು ಕತೆಗಳಲ್ಲಿ ಮೌಲ್ಯವಾಗಿ ಪ್ರತಿಪಾದಿಸಲಾಗಿದೆ. ಪ್ರೀತಿಯ ಪ್ರಕಟಣೆಯಲ್ಲಿ ಮಹಿಳೆಯೇ ಮೊದಲ ಹೆಜ್ಜೆ ಇಡುವ ಮೂಲಕ, ಪ್ರೀತಿಯ ನಿರ್ವಹಣೆಯಲ್ಲಿ ಪುರುಷನಿಗಿಂತ ದೃಢ ಹೆಜ್ಜೆ ಇಡುವ ಸ್ತ್ರೀ ಪಾತ್ರಗಳ ಮೂಲಕ ಮೇಲಿನ ಅಂಶವು ಸ್ಫುಟವಾಗಿದೆ. 'ಸುಪ್ತ ಬಯಕೆ'ಯ ಸೀತಾ, 'ಪ್ರತೀಕ್ಷೆ'ಯ ಲಕ್ಷ್ಮಿ ಅಂಥ ಕೆಲವು ಮಾದರಿ ಪಾತ್ರಗಳು. 'ಮಣ್ಣಿನ ಕರೆ'ಯ ಲೈಲಿ, 'ಒಂದು ಪ್ರಕರಣ'ದ ಗ್ರೇಸ್, ಪ್ರೀತಿಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸಿದ ಛಾತಿಗಾರ್ತಿಯರು.

'ನಿರಾಶ್ರಿತೆ'ಯ ತುಳಸಿ, 'ದಮಯಂತಿ', 'ಆದರ್ಶ', 'ಮೇನಕಾ' ಕತೆಗಳ ನಾಯಕಿಯರದು ಇನ್ನೊಂದು ನೆಲೆ. ತಮ್ಮ ನಿಯಂತ್ರಣದಾಚೆಗಿನ ವಿದ್ಯಮಾನಗಳಿಂದ ಅವರ ಕೌಟುಂಬಿಕ ಬದುಕು ಛಿದ್ರವಾಗುತ್ತದೆ. ಸುಭದ್ರ, ಸುರಕ್ಷಿತ ಎಂದು ಭಾವಿಸಿದ 'ಮನೆ'ಯ ನೆಲೆಗಟ್ಟು ತಪ್ಪಿದಾಗ, ಬದುಕುವ ಅನಿವಾರ್ಯಕ್ಕಾಗಿ ಅವರು ಪರ್ಯಾಯ ಆಧಾರದ ಹುಡುಕಾಟಕ್ಕೆ ತೊಡಗುತ್ತಾರೆ; ಅದೇನೂ ಸುಖದ ಹಾದಿಯಲ್ಲ; ಹೋರಾಟದ ಹಾದಿ. ಗೃಹಬಂಧಿನಿಯರಾಗಿದ್ದ ಅವರು ಈ ಬದಲಾದ ಪರಿಸ್ಥಿತಿಯಲ್ಲಿ ತಮ್ಮ ಬದುಕನ್ನು ಹಾಗೂ ತಮ್ಮನ್ನು ಅವಲಂಬಿಸಿದವರ ಬದುಕನ್ನು ಊರ್ಜಿತಕ್ಕೆ ತರುವ ಸಾಮರ್ಥ್ಯ ಹೊಂದುವುದು ಕುಟುಂಬದ ಸ್ವರೂಪದ ಕುರಿತು ಸಾವಿತ್ರಮ್ಮನವರು ಹೊಂದಿದ್ದ ಜೀವನದೃಷ್ಟಿಗೆ ದ್ಯೋತಕವಾಗಿದೆ.

✴ ದಾಂಪತ್ಯದೊಳಗೆ ಸಾವಿತ್ರಮ್ಮ ನಡೆಸುವ ಇನ್ನೊಂದು ಶೋಧ ಸಂಗಾತಿತನಕ್ಕೆ ಸಂಬಂಧಿಸಿದ್ದು. ಯಾವ ವಿವಾಹ ಪದ್ಧತಿ ದಾಂಪತ್ಯದೊಳಗೆ ಇಬ್ಬರಿಗೂ ಮುಕ್ತ ವಾತಾವರಣವನ್ನು, ಸಮಾನತೆಯ ಅವಕಾಶವನ್ನು ನೀಡಬಲ್ಲದು ಎಂಬ ಚರ್ಚೆ, ಶೋಧವನ್ನು ಅವರು ನಿರಂತರವಾಗಿ ನಡೆಸಿದ್ದಾರೆ. ನೂರು ವರ್ಷಗಳ ಸ್ಥಾಗಿತ್ಯದ ಬದುಕಿಗಿಂತ ಕೆಲವೇ ದಿನಗಳ ಜೀವಂತ ಬದುಕು ಅವರ ಕತೆಗಳಲ್ಲಿ ಆದರ್ಶವೆನಿಸಿದೆ. ಪರಿಚಿತ ನಿರ್ಭಾವುಕ ಸಂಬಂಧಕ್ಕಿಂತ, ಹೊಸ ಸಾಧ್ಯತೆಗಳ ಅಪರಿಚಿತ ಸಂಬಂಧ ಆಹ್ಲಾದದಾಯಕ ಎನಿಸಿದೆ. 'ಸಂಗಾತಿತನ' ಅವರಿಗೆ ಬಹುದೊಡ್ಡ ಮೌಲ್ಯ ಎನಿಸಿದೆ. 'ನಿರಾಶ್ರಿತೆ'ಯ ತುಳಸಿಯು ಗಂಡನಿಗೆ ಒಡ್ಡುವ ಸವಾಲು ಈ ಮಾದರಿಯದು. ಕೋಮುದಳ್ಳುರಿಯಲ್ಲಿ ಲೈಂಗಿಕ ದೌರ್ಜನ್ಯಕ್ಕೆ ತುತ್ತಾಗಿ, ಮಗುವನ್ನೂ ಪಡೆದ ಆಕೆ, ತನ್ನನ್ನು ಸ್ವೀಕರಿಸುವುದಾದರೆ, ಆ ಮಗುವನ್ನೂ ಸ್ವೀಕರಿಸಬೇಕು ಎಂದು ಶರತ್ತು ಹಾಕುವುದು ಈ ಕಾರಣಕ್ಕೆ. ತನ್ನ ಕುರಿತ ಕನಿಕರದಿಂದ, ತನ್ನ ತಂದೆಯ ಉಪಕಾರದ ಋಣ ತೀರಿಸಲು ಗಂಡ ತನ್ನನ್ನು ಸ್ವೀಕರಿಸುವುದನ್ನು ಅವಳು ಒಪ್ಪಲಾರಳು. ಸಾಂಗತ್ಯದ ಬದುಕು ಮತ್ತು ಘನತೆಯ ಬದುಕು ಮಾತ್ರ ತನ್ನತನವನ್ನು ಉಳಿಸಬಲ್ಲದು ಎಂಬ ಎಚ್ಚರ ಆಕೆಯದು. ಹೀಗಾಗಿ ಇಂಥ ಧೀಮಂತ ಸ್ತ್ರೀಪಾತ್ರಗಳು ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆ ಮತ್ತು ದಾಂಪತ್ಯ ಎರಡನ್ನೂ ಆಮೂಲಾಗ್ರ ಅಲ್ಲಾಡಿಸಿ, ಪುರುಷರೊಳಗಿನ ಅಹಂಗೆ ತೀವ್ರವಾದ ಏಟನ್ನು ನೀಡುತ್ತವೆ. 'ಸುಪ್ತ ಬಯಕೆ'ಯ ರಮಾಗಿಂತ 'ಸೀತಾ' ಗೆಲ್ಲುವುದು ಈ ಅರ್ಥದಲ್ಲಿ.

✴ ಕುಟುಂಬದ ಕುರಿತ ಸಾಂಪ್ರದಾಯಿಕ ನಿಲುವು ಸಾವಿತ್ರಮ್ಮನವರ ಕತೆಗಳಲ್ಲಿ ಸ್ಥಿತ್ಯಂತರಕ್ಕೆ ಒಳಗಾಗಿದೆ, ಅಭದ್ರವಾಗಿದೆ, ಛಿದ್ರವಾಗಿದೆ. ಇಲ್ಲಿ ಪುರುಷನ ಚಿತ್ರವೂ ಬದಲಾಗಿದೆ. ಪೂರ್ವದ ಅಧಿಕಾರ ಚಲಾಯಿಸುವ ಪುರುಷನ ಚಿತ್ರದ ಬದಲು ಅಸಹಾಯಕನಾದ, ತೊಳಲಾಟದಲ್ಲಿ ಸಿಲುಕಿದ, ತನ್ನ ದೌರ್ಬಲ್ಯಕ್ಕಾಗಿ ಸ್ವಮರುಕದಲ್ಲಿ ಮುಳುಗಿದ ಪುರುಷರು ಹಲವರು ಕಾಣುತ್ತಾರೆ. ಆಧುನಿಕ ಸಂದರ್ಭದ ವಿದ್ಯಮಾನಗಳು, ಸ್ವಾತಂತ್ರ್ಯ ಹೋರಾಟ, ದೇಶವಿಭಜನೆಯ ವಸ್ತುವನ್ನುಳ್ಳ ಕತೆಗಳಲ್ಲಿ ಗಾಢವಾಗಿ ಕಂಡುಬಂದಿವೆ. ಸ್ತ್ರೀ–ಪುರುಷರ ಸಂಬಂಧವನ್ನು ಬಂಧನದಿಂದ ಬಿಡಿಸಿ, ಸಹಜ ಸಾಹಚರ್ಯವಾಗಿ ಮಾಡುವ ಆಸ್ಥೆ ಇಲ್ಲಿನ ಕತೆಗಳಲ್ಲಿದೆ.

✴ ವರ್ತಮಾನದ ಮಹಿಳಾಲೋಕದ ಅನೇಕ ತಲ್ಲಣಗಳ ಅನಾವರಣದ ಬಳಿಕ ಸಾವಿತ್ರಮ್ಮ ರಾಮಾಯಣದ ಜಗತ್ತಿಗೆ ತಿರುಗಿದವರು. 'ವಿಮುಕ್ತಿ' ಈ ನೆಲೆಯಲ್ಲಿ ಮುಖ್ಯ ಕೃತಿ. 'ಸೀತೆ'ಯ ಮನೋವಿಶ್ಲೇಷಣೆಯಲ್ಲಿ ಆಧುನಿಕ ಮಹಿಳೆಯರ ಸ್ವಾಭಿಮಾನ, ಸಂಕಟ, ಯಾತನೆಗಳು ಹರಳುಗಟ್ಟಿವೆ.

✴ ಲಕ್ಷ್ಮಣನ ಪಾತ್ರದ ಬೆಳವಣಿಗೆ ಕೂಡ ಚರ್ಚಾರ್ಹ. ದಾಂಪತ್ಯ / ಗೃಹಸ್ಥಾಶ್ರಮಕ್ಕೆ ಅನುವಾಗಿಲ್ಲದ ಲಕ್ಷ್ಮಣ ವನವಾಸದಿಂದ ಹಿಂದಿರುಗಿ ಬರುವಾಗ ಪರಿಪಕ್ವ ವ್ಯಕ್ತಿಯಾಗಿ ಅರಳಿರುವುದು ಇದರ ಸೂಚಕವಾಗಿದೆ. ನಂದಿಗ್ರಾಮದಲ್ಲಿ ಊರ್ಮಿಳೆಯನ್ನು ಕಾಣದಾಗಿನ ತಹತಹಿಕೆ, ೧೪ ವರ್ಷಗಳ ಅವಧಿಯಲ್ಲಿ ಅವಳ ನಿಷ್ಠೆಯ ಕುರಿತು ಅನುಮಾನವನ್ನು ತಾಳದ ಸ್ಥಿತಿಯಲ್ಲಿ ಅವನ ಪರಿಪಕ್ವತೆ ಪ್ರಕಟವಾಗಿದೆ. 'ವಿಮುಕ್ತಿ'ಯಲ್ಲಿ ರಾಮನನ್ನು ಎದುರಿಸಿ ಮಾತನಾಡುವಲ್ಲಿ, ಊರ್ಮಿಳೆಯೊಡನೆ ದೀರ್ಘ ಪ್ರವಾಸ ಕೈಗೊಳ್ಳುವಲ್ಲಿ, ಕೊನೆಯದಾಗಿ ಸೀತೆ ಪುನಃ ಪ್ರಮಾಣ ಮಾಡಬೇಕೆಂಬ ರಾಮನ ತೀರ್ಮಾನಕ್ಕೆ "ಅತ್ತಿಗೆ ಮಾತ್ರವಲ್ಲ; ಯಾವ ಹೆಣ್ಣಿನಿಂದಲೂ ಆತ್ಮಾಭಿಮಾನದ ಕೊಲೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ" ಎಂಬ ನಿಲುವು ತಾಳುವಲ್ಲಿ ಲಕ್ಷ್ಮಣನ ವ್ಯಕ್ತಿತ್ವದ ವಿಕಸನ, ಗಟ್ಟಿತನ ಮತ್ತು ಸ್ತ್ರೀಪರ ಸಂವೇದನೆಗಳು ಪ್ರಕಟವಾಗಿವೆ. ಲಕ್ಷ್ಮಣನಿಗೆ ಅರಿವಾದ ಈ ತಣ್ಣನೆಯ ಹಿಂಸೆ / ಕ್ರೌರ್ಯಗಳು ವಾಲ್ಮೀಕಿಯ ಅರಿವಿಗೆ ಎಟುಕದಿರುವಲ್ಲಿನ ವ್ಯಂಗ್ಯವೂ ಕಾದಂಬರಿಯಲ್ಲಿ ಸೂಚಿತವಾಗಿದೆ.

**ಸಮಾಜ**

ಸಮಾಜ, ಸಾಮಾಜಿಕರು ಎಂದು ನಿರ್ದಿಷ್ಟವಾಗಿ ಇವರ ಕತೆಗಳಲ್ಲಿ ಗುರುತಿಸುವುದು ಕಷ್ಟ. ಸಾಮಾಜಿಕ ವಿದ್ಯಮಾನಗಳು ಅಂತಿಮವಾಗಿ ಕುಟುಂಬ ಪದ್ಧತಿಯ ಮೇಲೆ ಬೀರುವ ಪ್ರಭಾವದ ಅನ್ವೇಷಣೆಯೇ ಸಾವಿತ್ರಮ್ಮನವರ ಆಸ್ಥೆಯಾಗಿದೆ.

ಹಿಂದೂ–ಕ್ರೈಸ್ತ, ಮುಸ್ಲಿಂ–ಹಿಂದೂ ವೈವಾಹಿಕ ಸಂಬಂಧಗಳು ವಿರಳವಾಗಿ ಕತೆಗಳಲ್ಲಿ ಜರುಗಿದರೂ, ಅವು ವೈಯಕ್ತಿಕ ನೆಲೆಯಲ್ಲಿ ಉಳಿದುಬಿಟ್ಟು, ಸಮಾಜದಲ್ಲಿ ಅದರ ಪ್ರತಿಕ್ರಿಯೆಯ ರೂಪಗಳು ಎಲ್ಲೂ ಕಾಣುವುದಿಲ್ಲ.

'ಸೀತೆ–ರಾಮ–ರಾವಣ' ಮತ್ತು 'ವಿಮುಕ್ತಿ'ಗಳಲ್ಲಿ ಕ್ಷತ್ರಿಯ ಸಮಾಜ, ವಾನರ ಸಮಾಜ ಮತ್ತು ಲಂಕೆಯ ದಾನವ ಸಮಾಜದ ರೀತಿ–ನೀತಿ, ಸಂಸ್ಕಾರ, ಗಂಡು–ಹೆಣ್ಣಿನ ಸಂಬಂಧದಲ್ಲಿನ ತುಲನೆ ಹಲವು ಕಡೆಗಳಲ್ಲಿ ಪ್ರಖರವಾಗಿ ನಡೆದಿವೆ. ಹಾಗೂ ಯಾವುದು ಶ್ರೇಷ್ಠ ಸಮಾಜ ಎಂದು ಭಾವಿಸಲಾಗಿದೆಯೋ ಅದು ಮಹಿಳೆಯ ನೆಲೆಯಿಂದ ಎಷ್ಟು ರೂಕ್ಷವಾಗಿದೆ ಎಂಬುದರ ವಿಮರ್ಶೆ ನಡೆದಿದೆ. ಇಂಥ ಕಡೆಗಳಲ್ಲಿ ಸಾವಿತ್ರಮ್ಮನವರ ಸ್ತ್ರೀವಾದಿ ಚಿಂತನೆಯ ಜೊತೆಗೆ ಸಮಾಜ ಶಾಸ್ತ್ರೀಯ, ಮನಶ್ಶಾಸ್ತ್ರೀಯ ನೆಲೆಯ ಪ್ರಭಾವಗಳನ್ನೂ ಗುರುತಿಸಲು ಸಾಧ್ಯವಿದೆ.

**ಪ್ರೊ॥ ಸಬಿಹಾ ಭೂಮೀಗೌಡ**
ಪ್ರಾಧ್ಯಾಪಕರು, ಎಸ್. ವಿ. ಪಿ. ಕನ್ನಡ ಅಧ್ಯಯನ ಕೇಂದ್ರ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ – ೫೭೪ ೧೯೯



# ಬುಧ ಗ್ರಹದ ವಿಶೇಷಗಳು

**ಮೇ** ತಿಂಗಳ ಅತಿ ಮುಖ್ಯ ಖಗೋಳ ಕೌತುಕ ಎಂದರೆ ಬುಧ ಗ್ರಹ ಸೂರ್ಯನಿಗೆ ಅಡ್ಡವಾಗಿ ಹೋಗುವ ಬುಧ ಸಂಕ್ರಮ. ೨೦೧೨ರಲ್ಲಿ ಶುಕ್ರ ಹೀಗೆ ಹಾದುಹೋಗಿದ್ದು ಅನೇಕರಿಗೆ ನೆನಪಿರಬಹುದು. ೧೩ ವರ್ಷದ ಹಿಂದೆ ೨೦೦೩ರಲ್ಲಿ ಬುಧ ಗ್ರಹ ಹೀಗೆಯೇ ಸೂರ್ಯನಿಗೆ ಅಡ್ಡವಾಗಿ ಹಾದುಹೋಗಿತ್ತು. ಎರಡೂ ಘಟನೆಗಳ ಮುಖ್ಯ ವ್ಯತ್ಯಾಸವೆಂದರೆ ಶುಕ್ರ ಕಪ್ಪು ಬೊಟ್ಟಿನಂತೆ ಸ್ಫುಟವಾಗಿ ಕಂಡಿತ್ತು. ಬುಧ ಬಹಳ ಸಣ್ಣ ಚುಕ್ಕೆ. ಆದ್ದರಿಂದ ದೂರದರ್ಶಕದ ನೆರವು ಬೇಕಾಯಿತು. ಈ ಬಾರಿ ಸಂಜೆ ೪:೩೦ರ ಹೊತ್ತಿಗೆ ಬುಧ ಸಂಕ್ರಮ ಆರಂಭವಾಗುವುದು. ದೂರದರ್ಶಕ ಇರುವವರು ಸೂರ್ಯಬಿಂಬವನ್ನು ತೆರೆಯ ಮೇಲೆ ಮೂಡಿಸಿ ಚುಕ್ಕೆಯನ್ನು ಹುಡುಕಬಹುದು. ಆದರೆ ಮೊದಲ ಹತ್ತು ಹದಿನೈದು ನಿಮಿಷಗಳು ಇದು ಬಹಳ ಕಷ್ಟವಾಗುವುದು. ಆಮೇಲೆ ಸೌರಕಲೆಯಲ್ಲಿ ಪರಿಪೂರ್ಣ ವೃತ್ತಾಕಾರದ ಚುಕ್ಕೆಯೊಂದು ಕಾಣ ತೊಡಗುತ್ತದೆ. ಅದು ಸುಮಾರಾಗಿ ಬಿಂಬದ ಮಧ್ಯಭಾಗಕ್ಕೆ ಬರುವಷ್ಟರಲ್ಲಿ ಸೂರ್ಯಾಸ್ತ ಆಗುತ್ತದೆ. ಸೂರ್ಯಾಸ್ತವನ್ನು ಬರಿಗಣ್ಣಿನಿಂದ ನೋಡುವುದು ಸುರಕ್ಷಿತ. ಆದರೆ ಬರಿಗಣ್ಣಿಗೆ ಈ ಚುಕ್ಕೆ ಕಾಣುವುದಿಲ್ಲ. ಆದ್ದರಿಂದ ದುರ್ಬೀನಾದರೂ ಬೇಕೇ ಬೇಕಾಗುತ್ತದೆ.

ಮೇ ತಿಂಗಳ ಇನ್ನೊಂದು ವಿಶೇಷ ವೆಂದರೆ ಅಮಾವಾಸ್ಯೆಯಂದು ಭೂಮಿ – ಚಂದ್ರ ನಡುವಿನ ದೂರ ಕನಿಷ್ಠ ಇರುತ್ತದೆ. ಆ ಕಾರಣ ಕಡಲಿನ ಭರತ – ಇಳಿತಗಳು ಬೇರೆ ಯಾವುದೇ ಅಮಾವಾಸ್ಯೆಗಿಂತ ಜೋರು ಇರುತ್ತದೆ. ಆ ದಿನ ಸಂಜೆ ಬುಧ ಗ್ರಹವೂ ಚಂದ್ರನ ಸಮೀಪವೇ ಇರುತ್ತದೆ. ಇದನ್ನು ಬರಿಗಣ್ಣಿನಿಂದ ನೋಡುವುದಂತೂ ಸಾಧ್ಯವಿಲ್ಲ. ಆದರೆ ಸೋಹೋ ಎಂಬ ಗಗನ ವೀಕ್ಷಣಾಲಯ ಕಳುಹಿಸುವ ಚಿತ್ರಗಳಲ್ಲಿ ಕಾಣಬಹುದು. ಅದರ ಹಿಂದಿನ ದಿನ ಅಂದರೆ ೬ರಂದು ಶುಕ್ರ ಮತ್ತು ಚಂದ್ರ ಒಟ್ಟಿಗೆ ಕಾಣುವುವು. ಆದರೆ ಸೂರ್ಯೋದಯಕ್ಕೆ ಕೇವಲ ಅರ್ಧ ಗಂಟೆ ಮುಂಚೆ ಇವೆರಡೂ ಉದಯಿಸು ವುದರಿಂದ ಬರಿಗಣ್ಣಿಗೆ ಕಾಣುವ ಸಂಭವ ಇಲ್ಲ. ಶುಕ್ರವನ್ನು ಗುರುತಿಸುವುದು ಸಾಧ್ಯವಾದರೆ ೧೩ರಂದು ಅದರ ಪಕ್ಕ ಬುಧವನ್ನೂ ನೋಡಬಹುದು.




ಬುಧ ಗ್ರಹ ಹೀಗೆ ಮುಂದುವರೆದು ತಿಂಗಳ ಕೊನೆಗೆ ಬೆಳಗಿನ ಆಕಾಶ ದಲ್ಲಿ ಕಾಣತೊಡಗುತ್ತದೆ. ಅದರ ಹಿನ್ನಡೆ ೨೧ರಂದು ಮುಕ್ತಾಯವಾಗುತ್ತದೆ.

ಅದು ಬರುವ ತಿಂಗಳ ೩ರಂದು ಚಂದ್ರನಿಂದ ಆಚ್ಛಾದನೆಗೆ ಒಳಪಡುತ್ತದೆ. ಆದರೆ ಅದು ನಮಗೆ ಕಾಣುವುದಿಲ್ಲ. ಎರಡೂ ಸಮೀಪ ಇರುವಂತೆ ಮಾತ್ರ ತೋರುತ್ತದೆ.

ಸಂಜೆ ಕಾಣುವ ಗ್ರಹ ಗುರು. ಇದರ ಹಿನ್ನಡೆ ೯ರಂದು ಮುಕ್ತಾಯವಾಗುತ್ತದೆ. ೧೫ರಂದು ಚಂದ್ರನ ಪಕ್ಕ ಕಾಣುತ್ತದೆ. ೨೧ರಂದು ಚಂದ್ರ ಮಂಗಳ ಗ್ರಹದ ಪಕ್ಕ ಕಾಣುತ್ತದೆ. ಮಂಗಳ ಮತ್ತು ಶನಿ ಇವೆರಡೂ ಅಕ್ಕಪಕ್ಕದಲ್ಲೇ ಇವೆ. ರಾತ್ರಿ ೮ ಗಂಟೆಯ ನಂತರ ಪೂರ್ವದಲ್ಲಿ ಕಾಣುತ್ತವೆ. ರಾತ್ರಿ ಇಡೀ ನೋಡಲು ಲಭ್ಯವಿದ್ದು ಮುಂಜಾವಿನಲ್ಲಿ ಪಶ್ಚಿಮದ ಅಂಚಿನಲ್ಲಿ ಕಾಣುತ್ತವೆ. ೨೨ರಂದು ಚಂದ್ರ ಶನಿಯ ಪಕ್ಕ ಕಾಣುತ್ತದೆ. ಹುಣ್ಣಿಮೆಯ ಪ್ರಖರ ಬೆಳಕಿನಲ್ಲಿಯೂ ಮಂಗಳ, ಶನಿ ಅಲ್ಲದೆ ಇನ್ನೂ ಒಂದು ಚುಕ್ಕೆ ಕಾಣುತ್ತದೆ. ಅದೇ ಜ್ಯೇಷ್ಠಾ ನಕ್ಷತ್ರ. ಆದ್ದರಿಂದ ಈ ತಿಂಗಳ ಹೆಸರು ಜ್ಯೇಷ್ಠಾ ಎಂದಾಗಬೇಕಿತ್ತಲ್ಲವೇ? ಹಾಗಾಗು ವುದಿಲ್ಲ. ಮೂರು ವರ್ಷಕ್ಕೊಮ್ಮೆ ಮಾಡ ಬೇಕಾದ ತಿದ್ದುಪಡಿ ಬಾಕಿ ಇದೆ ಎಂದು ಈ ಅಂಶ ತೋರಿಸಿ ಕೊಡುತ್ತದೆ. ಈ ಅವಧಿಯಲ್ಲಿ ಚಂದ್ರ ಮಂಗಳ ಮತ್ತು ಶನಿ ಒಟ್ಟಿಗೆ ಗುಂಪುಗೂಡಿರುವುದನ್ನು ಚಿತ್ರೀಕರಿಸುವ ಪ್ರಯತ್ನ ಮಾಡಬಹುದು.

೨೯ರಂದು ಮಂಗಳ ಗ್ರಹದ ವಿಯುತಿ; ಅದಾದ ಮರುದಿನ ಮಂಗಳ ಮತ್ತು ಭೂಮಿಯ ನಡುವಿನ ಅಂತರ ಕನಿಷ್ಠ. ಅಂದರೆ ಈ ತಿಂಗಳುದ್ದಕ್ಕೂ ಮಂಗಳ ದೊಡ್ಡ ದಾಗಿ (ದೂರದರ್ಶಕದ ಮೂಲಕ) ಮತ್ತು ಪ್ರಕಾಶಮಾನವಾಗಿ ಕಾಣುತ್ತದೆ.

ಹ್ಯಾಲೀ ಧೂಮಕೇತುವಿನ ಕಣಗಳು ಸೃಷ್ಟಿಸುವ ಅಕ್ವಾರಿಡ್ಸ್ ಉಲ್ಕಾವೃಷ್ಟಿ ಮೇ ತಿಂಗಳ ಮೊದಲ ವಾರದಲ್ಲಿ ಕಾಣಲಿದೆ. ಗಂಟೆಗೆ ೨೦ ಉಲ್ಕೆಗಳು ಕಾಣಬಹುದು.

(ಬುಧ ಸಂಕ್ರಮವನ್ನು ನೋಡಲು ಸೂರ್ಯನನ್ನು ನೋಡಬೇಕಾದರೆ ಪಾಲಿಸುವ ಎಲ್ಲ ಮುನ್ನೆಚ್ಚರಿಕೆಗಳನ್ನೂ ಪಾಲಿಸಿ; ದೃಷ್ಟಿ ಕಳೆದುಕೊಳ್ಳಬೇಡಿ)

**ಮೇ ತಿಂಗಳ ಖಗೋಳ ದಿನಚರಿ**

೫ ಅಕ್ವಾರಿಡ್ಸ್ ಉಲ್ಕಾವೃಷ್ಟಿ
೬ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ; ಚಂದ್ರ – ಶುಕ್ರ ಜೋಡಿ
೭ ಅಮಾವಾಸ್ಯೆ ೦೦:೨೯ಕ್ಕೆ ; ಬುಧ – ಚಂದ್ರ ಜೋಡಿ
೯ ಬುಧ ಸಂಕ್ರಮ; ಸಂಜೆ ೪:೩೦ರಿಂದ ಸೂರ್ಯಾಸ್ತದವರೆಗೆ
೧೩ ಬುಧ – ಶುಕ್ರ ಜೋಡಿ ; ಚಾಂದ್ರಮಾಸದ ಮೊದಲ ಪಾದ
೧೫ ಗುರು –ಚಂದ್ರ ಜೋಡಿ
೧೮ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೨೧ ಚಂದ್ರ – ಮಂಗಳ ಜೋಡಿ ; ಬುಧ ಗ್ರಹದ ಹಿನ್ನಡೆ ಮುಕ್ತಾಯ
೨೨ ಶನಿ – ಚಂದ್ರ ಜೋಡಿ ; ಮಂಗಳದ ವಿಯುತಿ ; ಹುಣ್ಣಿಮೆ ೦೨:೪೪ಕ್ಕೆ
೨೯ ಚಾಂದ್ರಮಾಸದ ಕೊನೆಯ ಪಾದ
೩೦ ಮಂಗಳ – ಭೂಮಿ ನಡುವೆ ಅಂತರ ಕನಿಷ್ಠ

**ಡಾ|| ಬಿ. ಎಸ್. ಶೈಲಜಾ,** ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೧

ಮೂಲ : **ಪಿ. ಸಾಯಿನಾಥ್**

ಕನ್ನಡಕ್ಕೆ : **ಸಾಕ್ಷಿ**

ಎಡಮಾಲಕುಡಿಯ ೬೦ ಮಹಿಳೆಯರು ಸುಮಾರು ನೂರು ಸೋಲಾರ್ ಪ್ಯಾನೆಲ್‌ಗಳನ್ನು ತಲೆಯ ಮೇಲೆ ಹೊತ್ತು, ೧೮ ಕಿಲೋಮೀಟರ್‌ಗಳಷ್ಟು ಬೆಟ್ಟ ಹತ್ತಿಳಿದು, ಕಾಡೊಳಗೆ ಕಾಡಾನೆಗಳ ಪ್ರದೇಶವನ್ನು ದಾಟಿ ಬಂದಾಗಲೇ ಇತಿಹಾಸ ಬರೆದು ಬಿಟ್ಟಿದ್ದರು. ಕೇರಳದ ಕಾಡುಮೂಲೆಯಲ್ಲಿರುವ ಈ ಗ್ರಾಮ ಪಂಚಾಯಿತಿಯಲ್ಲಿ ಕರೆಂಟಿಲ್ಲ. ಇಲ್ಲಿನ ೨೪೦ ಕುಟುಂಬಗಳಿಗೆ ಸೋಲಾರ್ ಪ್ಯಾನೆಲ್ ಮತ್ತು ಬ್ಯಾಟರಿಗಳೇ ದಿಕ್ಕು. ಈ ಶಕ್ತಿ ಮೂಲದಿಂದ ಇಲ್ಲಿ ಟಿ. ವಿ.ಯನ್ನು ಕೂಡ ಚಲಾಯಿಸಬಹುದು. ಇಲ್ಲಿನ ಗ್ರಾಮ ಪಂಚಾಯಿತಿ ಮೊದಲು ಸೋಲಾರ್ ಶಕ್ತಿಯನ್ನು ಪರಿಚಯಿಸಲು ಹೊರಟಾಗ, ಇಲ್ಲಿನ ಹೆಂಗಸರೇ ಅದರ ಪೂರ್ತಿ ಹೊಣೆ ಹೊತ್ತರು. ಪೆಟ್ಟಿಮುಡಿಯಿಂದ ಇಲ್ಲಿಯವರೆಗೆ, ಒಂಭತ್ತು ಕಿಲೋ ತೂಕದ ಪ್ಯಾನೆಲ್‌ಗಳನ್ನು ತಲೆಯ ಮೇಲೆ ಹೊತ್ತು ಕಾಲ್ನಡಿಗೆಯಲ್ಲೇ ಬೆಟ್ಟದ ನಡುವಿನ ದುರ್ಗಮ ಹಾದಿಯನ್ನು ಸವೆಸಿದರು. ತಮ್ಮ ಗುಂಪನ್ನು 'ಚುಮಟ್ಟು ಕೂಟಂ' ಎಂದು ಕರೆದುಕೊಳ್ಳುತ್ತಾರೆ ಆ ಮಹಿಳೆಯರು. ಹಾಗೆಂದರೆ 'ತಲೆಯ ಮೇಲೆ ಭಾರ ಹೊರುವವರ ಕೂಟ' ಎಂದರ್ಥ. ಇಲ್ಲಿಯ ತನಕ ಇಂತಹ ದೈಹಿಕ ಶ್ರಮದ ಕೆಲಸಗಳ ಮೇಲೆ ಏಕಸ್ವಾಮ್ಯ ಹೊಂದಿದ್ದ ಗಂಡಸರನ್ನು ಅಣಕಿಸುವಂತಿತ್ತು ಇವರ ಗುಂಪು.

ಇಲ್ಲಿನ ಎಲ್ಲ ಮಹಿಳೆಯರೂ ಆದಿವಾಸಿ ಮುತವನ ಗುಂಪಿಗೆ ಸೇರಿದವರು. ಅಷ್ಟೇ ಅಲ್ಲ, ಇವರೆಲ್ಲರೂ ಬಡತನ ನಿರ್ಮೂಲನೆ ಮತ್ತು ಸ್ತ್ರೀ ಸಮಾನತೆ ಚಳುವಳಿಗಳಿಂದ ಹುಟ್ಟಿಕೊಂಡ, ಕೇರಳದ ಅಸಾಮಾನ್ಯ ಯೋಜನೆಯಾದ 'ಕುಟುಂಬಶ್ರೀ'ಯ ಸದಸ್ಯೆಯರು. ಈಗಾಗಲೇ ಈ ಯೋಜನೆಯಡಿ ೪ ಮಿಲಿಯನ್ ಮಹಿಳೆಯರಿದ್ದಾರೆ. "ನಮಗಿಲ್ಲಿ ಬಂದು ತಲುಪಲು ಸುಮಾರು ಒಂಭತ್ತು ಘಂಟೆಗಳು ಹಿಡಿದವು. ಗಟ್ಟಿಯಾಗಿದ್ದವರು ಎರಡು ಪ್ಯಾನೆಲ್‌ಗಳನ್ನು ಹೊತ್ತರೆ, ಉಳಿದವರು ಒಂದೊಂದನ್ನೇ ಹೊತ್ತರು. ನೀವೇ ನೋಡಿದಿರಲ್ಲಾ, ಬರುವ ದಾರಿ ಅದೆಷ್ಟು ದುರ್ಗಮವಾಗಿದೆಯೆಂದು. ಆದರೂ ನಾವದನ್ನು ಮಾಡಿ ಮುಗಿಸಿದೆವು" ಎನ್ನುತ್ತಾರೆ ಪಂಚಾಯಿತಿಯ ಕುಟುಂಬಶ್ರೀ ಯೂನಿಟ್‌ಗಳ ಮುಖ್ಯಸ್ಥೆ ರಮಣಿ ಅರ್ಜುನನ್. ಪ್ರತಿ ಪ್ಯಾನೆಲ್ ಹೊತ್ತದ್ದಕ್ಕೆ ೮೫ ರೂಪಾಯಿ ಕೊಡಲಾಯ್ತು. ಅಲ್ಲದೆ ಇದು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯಡಿ ಬಂದ ಕಾರಣ ಪ್ರತಿ ಮಹಿಳೆಗೆ ದಿನಕ್ಕೆ ೧೮೦ ರೂಪಾಯಿಗಳನ್ನು ಕೊಡಲಾಯ್ತು. ಹಾಗಾಗಿ, ಎರಡು ಪ್ಯಾನೆಲ್ ಹೊತ್ತವರು ಸುಮಾರು ೩೫೦ ರೂಪಾಯಿ ಸಂಪಾದನೆ ಆ ದಿನ. ಅಷ್ಟು ಶ್ರಮವಹಿಸಿ ಮಾಡಿದ ಕೆಲಸಕ್ಕೆ ಇದು ಸಾಲದೆ ಹೋದರೂ, ಆ ಕುಗ್ರಾಮದಲ್ಲಿ ವರ್ಷದ ಇತರ ದಿನಗಳಲ್ಲಿ ಅಷ್ಟನ್ನಾದರೂ ಸಂಪಾದಿಸುವುದು ಕಷ್ಟವೇ ಸರಿ. ಇಂತಹ ಇನ್ನಷ್ಟು ಕೆಲಸ ಬಂದರೂ ತಯಾರಿದ್ದೇವೆ ಎನ್ನುತ್ತಾರೆ ರಮಣಿ. ಮೆಲುಮಾತಿನ ಈಕೆ ಬಹಳ ಗಟ್ಟಿಗಿತ್ತಿ ನಾಯಕಿ.

ಆದರೆ ಎಡಮಾಲಕುಡಿಯ ಕುಟುಂಬಶ್ರೀ ಗುಂಪಿನವರು ಇನ್ನಷ್ಟು ಸವಾಲಿನ ಕೆಲಸಗಳನ್ನು ಈಗಾಗಲೇ ಕೈಗೆತ್ತಿಕೊಂಡಿದ್ದಾರೆ. ಇವರು ಪುಟ್ಟ ಜಾಗಗಳಲ್ಲೇ 'ಗ್ರೂಪ್ ಫಾರ್ಮಿಂಗ್' ಅಥವಾ 'ಕಮ್ಯೂನಿಟಿ ಫಾರ್ಮಿಂಗ್'ಗಳನ್ನು ಪರಿಚಯಿಸಿದ್ದಾರೆ. ಇವರ ಆದ್ಯತೆ ಇರುವುದು ಸಾವಯವ ಕೃಷಿ ಮತ್ತು ಆಹಾರ ಧಾನ್ಯಗಳನ್ನು ಬೆಳೆಯುವುದರೆಡೆಗೆ. ಅಲ್ಲದೆ, ಇಲ್ಲಿ 'ಶಿಫ್ಟಿಂಗ್' ಬೇಸಾಯವನ್ನೂ ನಡೆಸುತ್ತಾರೆ. ಯಾವ ರಾಸಾಯನಿಕಗಳನ್ನೂ ಬಳಸಬೇಕಾಗಿಲ್ಲ, ಯಾವ ಮರಗಳನ್ನೂ ಕಡಿಯಬೇಕಾಗಿಲ್ಲ. ಹೇಳಲು ಸುಲಭವಾದರೂ ಇದು ಕಷ್ಟದ ಕೆಲಸ. ಆದರೂ ಇಲ್ಲಿ ಮಹಿಳೆಯರು ಕೃಷಿಕರಾಗಿ ಯಶಸ್ವಿಯಾಗಿದ್ದಾರೆ. ಸಮಸ್ಯೆಯೇನಿದ್ದರೂ ಅದು ಕಾಡು ಪ್ರಾಣಿಗಳ ಹಾವಳಿ. ಆನೆ, ಕಾಡು ಹಂದಿ ಮುಂತಾದುವು ಇಲ್ಲಿ ಸದಾ ಬೆಳೆಗಳ ಮೇಲೆ ದಾಳಿ ಮಾಡುತ್ತಲೇ ಇರುತ್ತವೆ. ಹಾಗಾಗಿ ಇವರದ್ದು ಅಪಾಯಕಾರಿ ಮತ್ತು ಸಾಹಸಮಯ ಬದುಕು. ಇದು ಅರಣ್ಯ ಪ್ರದೇಶವಾದ ಕಾರಣ ಜಾಗಗಳ ಮೇಲಿನ ಹಕ್ಕು ಪತ್ರ ಇವರಿಗೆ ಸಿಗಲಾರದು. ಆದರೂ ಕಾಲ್ಪನಿಕ ಗೆರೆ ಎಳೆದುಕೊಂಡಂತೆ, ಇವರು ಯಾವ ಘರ್ಷಣೆಗಳೂ ಇಲ್ಲದೆ ಅವರವರ ಜಾಗದಲ್ಲಿ ಉಳುಮೆ ಮಾಡಿಕೊಂಡಿದ್ದಾರೆ.

"ಎಡಮಾಲಕುಡಿಯ ೪೦ ಕುಟುಂಬಶ್ರೀ ಗುಂಪುಗಳಲ್ಲಿ ೩೪ ಗುಂಪುಗಳು ಕೃಷಿಯಲ್ಲಿ ತೊಡಗಿಕೊಂಡಿವೆ. ಪ್ರತಿ ಗುಂಪಿನಲ್ಲಿ ಐದು ಮಂದಿ ಸದಸ್ಯರೋ ಕುಟುಂಬದವರೋ ಇರುತ್ತಾರೆ" ಎಂದು ರಮಣಿಯವರು ವಿವರಿಸುತ್ತಾರೆ. ಆಕೆಯ ಸುತ್ತಲು ಕುಳಿತಿರುವ ಕುಟುಂಬಶ್ರೀಯ ಬೇರೆ ೩೦ ಸದಸ್ಯರು ಮಧ್ಯದಲ್ಲಿ ಮಾತಿಗೆ ಸೇರಿಕೊಳ್ಳುತ್ತಾರೆ. ಶಾಂತಿ ಶಿವಂ,

# ಸೌರಶಕ್ತಿ ತಂದ ಒಗ್ಗಟ್ಟು



ಕಾಮಾಕ್ಷಿ ದೇವೇಂದ್ರನ್, ಕೌಸಲ್ಯ ಲೋಗನನ್, ಮಲ್ಲಿಕಾ ಮುತುಪಂಡಿ... ಹೀಗೆ ಹಲವರು ನಮ್ಮ ಸಂಭಾಷಣೆಗೆ ದನಿಗೂಡಿಸುತ್ತಾರೆ. "ನಮ್ಮ ಕೃಷಿ ಸಂಘದಲ್ಲೀಗ ಭತ್ತ, ರಾಗಿ ಮತ್ತಿತರ ಆಹಾರ ಧಾನ್ಯಗಳನ್ನು ಬೆಳೆಯುತ್ತೇವೆ. ಜೊತೆಗೆ ಟ್ಯಾಪಿಯೋಕ ಮತ್ತು ಬಾಳೆಯನ್ನೂ ಬೆಳೆಯುತ್ತಿದ್ದೇವೆ. ಈಗೀಗ ಸಹಜವಾಗಿಯೇ ಏಲಕ್ಕಿಯನ್ನು ಜೊತೆಯಲ್ಲಿ ಬೆಳೆಯಲು ಪ್ರಯತ್ನಿಸುತ್ತಿದ್ದೇವೆ. ಆದರೆ ಇಲ್ಲಿ ಆಹಾರ ಧಾನ್ಯಗಳ ಬೆಳೆಯೇ ಪ್ರಮುಖವಾದ್ದು."

"ಇಲ್ಲಿ ಬೆಳೆಯೇನೋ ಚೆನ್ನಾಗಿಯೇ ಬಂದು ಪರಿಸ್ಥಿತಿ ಸುಧಾರಿಸಿದೆ. ಆದರಿಲ್ಲಿ ಮುಖ್ಯವಾಗಿ ಎರಡು ಸಮಸ್ಯೆಗಳು. ಒಂದು, ನಾವು ಬೆಳೆದ ಅರ್ಧದಷ್ಟನ್ನು ಕಾಡು ಪ್ರಾಣಿಗಳೇ ಹಾಳುಗೆಡುವುತ್ತಿವೆ. ಇನ್ನು ನಾವು ಹೆಚ್ಚುವರಿ ಬೆಳೆದರೂ, ನಮಗೆ ಮಾರುಕಟ್ಟೆ ಎಲ್ಲಿದೆ ? ಹತ್ತಿರದ ಮಾರುಕಟ್ಟೆಯೆಂದರೆ ಕಾಡಾನೆಗಳ ಪ್ರದೇಶ ದಾಟಿ ೧೮ ಮೈಲುಗಳಾಚೆ ಇರುವ ಊರಷ್ಟೆ."

"ಮಾರುಕಟ್ಟೆ ಏಕೆ ಮುಖ್ಯ ಎನ್ನುತ್ತೀರಾ ? ಹೌದು, ನಾವು ಬೆಳೆದದ್ದು ನಮ್ಮ ಮನೆಗಳಿಗೇ ಆಗುತ್ತದೆ. ಏನಾದರೂ ಮಿಕ್ಕರೆ, ಬೇರೆ ಸಾಮಾನು ಕೊಳ್ಳಲು ಬೇಕಾಗುವ ಹಣಕ್ಕಾಗಿ ಅದನ್ನು ಮಾರುಕಟ್ಟೆಗೆ ಕೊಂಡೊಯ್ಯುತ್ತೇವೆ. ಆದರೇನು, ಇಲ್ಲಿ ರಸ್ತೆ ಇಲ್ಲ, ಸಂಚಾರಕ್ಕೆ ವಾಹನಗಳಿಲ್ಲ."

"ನಮಗಿಲ್ಲಿ ಬ್ಯಾಂಕೊಂದು ಬೇಕಾಗಿದೆ. ಬ್ಯಾಂಕ್ ಅಕೌಂಟ್ ಉಳ್ಳವರು ನಮ್ಮಲ್ಲಿ ಕೆಲವರು ಮಾತ್ರ."

ಇಲ್ಲಿನ ಪಂಚಾಯಿತಿಯ ಅಧ್ಯಕ್ಷೆ ಈಗಷ್ಟೆ ತನ್ನ ಹೆಸರನ್ನು ಸಹಿ ಮಾಡಲು ಕಲಿತಿದ್ದಾರೆ. ಕೇರಳಕ್ಕೆ ಇದು ಅಪರೂಪವೇ ಆದರೂ ನಿಜ. ಇಲ್ಲಿನ ಮಹಿಳೆಯರಿಗೆ ಬ್ಯಾಂಕ್ ಖಾತೆಗಳನ್ನು ನಿಭಾಯಿಸುವ ಧೈರ್ಯವಿದೆ. ಇಲ್ಲಿನ ಗುಂಪುಗಳು ತಮ್ಮ ಕೆಲಸಗಳಿಗಾಗಿ ಒಗ್ಗೂಡಿಸಿದ ೫೦ ಲಕ್ಷ ರೂಪಾಯಿಗಳನ್ನು ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಜಮಾ ಮಾಡಿದ್ದಾರೆ. ಮಾರುಕಟ್ಟೆ ಹೂಡಿಕೆಯ ಪರಿಚಯ ಇವರಿಗಿಲ್ಲ.

ಎಲ್ಲರೂ ಒಟ್ಟಾಗಿ ನಡೆಸುವ ವ್ಯವಸಾಯ ಮತ್ತು ಒಬ್ಬರೇ ನಡೆಸುವ ಬೇಸಾಯಗಳಲ್ಲಿ ಯಾವುದು ನಿಮಗೆ ನೆಚ್ಚು ? ಎಂದು ಕೇಳಿದರೆ : "ಸಮುದಾಯದವರು ಕೂಡಿ ಮಾಡುವ ಕೃಷಿ ಒಂದು ರೀತಿಯಲ್ಲಿ ಹೆಚ್ಚು ಒಳ್ಳೆಯದು. ಒಟ್ಟಾಗಿ ಕೆಲಸ ಮಾಡುವಾಗ ಒಬ್ಬರು ಹಿಂದೆ ಬಿದ್ದರೂ ಉಳಿದವರು ಅವರ ನೆರವಿಗೆ ಬರುತ್ತಾರೆ" ಎಂಬ ರಮಣಿಯವರ ಮಾತಿಗೆ ಎಲ್ಲರೂ ತಲೆದೂಗುತ್ತಾರೆ. "ನನಗೇನೋ ಒಬ್ಬರೇ ನಡೆಸುವ ಬೇಸಾಯವೆಂದರೆ ಇಷ್ಟ" ಎನ್ನುತ್ತಾರೆ ಇನ್ನೊಬ್ಬಾಕೆ. "ಆದರೂ ಎಲ್ಲರೂ ಒಟ್ಟಾಗಿ ಬೇಸಾಯ ನೋಡಿಕೊಂಡರೆ ನಮ್ಮ ನಮ್ಮ ಕುಟುಂಬಗಳಿಗೆ ಉತ್ತಮ ಲಾಭವಾಗುತ್ತದೆ. ಅಲ್ಲದೆ, ಇಲ್ಲಿನ ಸದಸ್ಯರು ಒಂದೇ ಕುಟುಂಬ ದವರಂತೆ ಒಬ್ಬರಿಗೊಬ್ಬರು ಬೆಂಬಲವಾಗಿ ನಿಲ್ಲುತ್ತಾರೆ. ಇದು ಕೆಲಸದಷ್ಟೇ ಮುಖ್ಯ."

ಟೊರಾಂಟೋದ ಯಾರ್ಕ್ ವಿಶ್ವವಿದ್ಯಾನಿಲಯದ ಪ್ರೊ॥ ಅನನ್ಯ ಮುಖರ್ಜಿಯವರು ಈ



ಗುಂಪುಗಳು ಆಹಾರ ಭದ್ರತೆಯನ್ನು ಸಾಧಿಸಿರುವ ಹೊಸ ವಿಧಾನದ ಬಗ್ಗೆ, ಹೀಗೆ ಬರೆಯುತ್ತಾರೆ : "ಇದೀಗ ಕೇರಳದ ಸುಮಾರು ೨,೫೦,೦೦೦ ಮಹಿಳೆಯರು ಕುಟುಂಬಶ್ರೀ ಯೋಜನೆಯ ಮುಖಾಂತರ ಸಮುದಾಯ ಕೃಷಿ ಯೆಡೆಗೆ ವಾಲುತ್ತಿದ್ದಾರೆ. ಇವರೆಲ್ಲಾ ಒಟ್ಟಾಗಿ, ಇರುವಷ್ಟು ಜಾಗವನ್ನು ಉತ್ತಿ, ಬಿತ್ತಿ, ಬೆಳೆದದ್ದನ್ನು ಮನೆಗೂ ಬಳಸಿ, ಹೆಚ್ಚುವರಿಯನ್ನು ಮಾರುಕಟ್ಟೆಗಳಿಗೂ ಕೊಂಡೊಯ್ಯುತ್ತಿದ್ದಾರೆ. ಈ ಮುಖಾಂತರ ಕೃಷಿಯಲ್ಲಿ ಮಹಿಳೆಯರ ಭಾಗ ವಹಿಸುವಿಕೆ ಹೆಚ್ಚಿರುವುದಷ್ಟೇ ಅಲ್ಲದೆ ಆಹಾರದ ಉತ್ಪಾದನೆ, ಅನುಭೋಗ ಮತ್ತು ಹಂಚುವಿಕೆಯಲ್ಲಿ ಮಹಿಳೆಯರಿಗೆ ಪೂರ್ಣಪ್ರಮಾಣದ ನಿಯಂತ್ರಣ ದೊರಕಿದೆ."

"ನೀವು ನಿಮ್ಮನ್ನು ಆಹಾರ ಉತ್ಪಾದಕರಾಗಿ ಕಾಣಬಯಸುತ್ತೀರೋ ಇಲ್ಲಾ ಕೆಲಸಗಾರರಾಗಿ ಕಾಣಬಯಸುವಿರೋ" ಎಂದು ಕೇಳಿದರೆ ಪ್ರತಿ ಮಹಿಳೆಯೂ ಒಕ್ಕೊರಲಿನಿಂದ 'ಉತ್ಪಾದಕರಂತೆ' ಎಂದು ಘೋಷಿಸುತ್ತಾರೆ. ರಮಣಿಯವರಿಗೆ ನಾವು ಕೊನೆಯದಾಗಿ ಅಲ್ಲಿ ಮಾಡಹೊರಟಿರುವ ರಸ್ತೆಯ ಬಗ್ಗೆ ಕೇಳುತ್ತೇವೆ. "ನೀವೇ ಹೇಳಿದಂತೆ ಕಾಡು ಆದಿವಾಸಿಗಳ ಕೈಯಲ್ಲಿರಬೇಕು. ಈಗ ಸರ್ಕಾರ ಮಾಡಹೊರಟಿರುವ ಹೊಸ ರಸ್ತೆ ಕಾಡನ್ನು ಕೊಂದು, ಮುತವನರನ್ನು ನಾಶ ಮಾಡುತ್ತದೆ. ಆದರೆ ನಿಮಗೆ ಮಾರುಕಟ್ಟೆ ತಲುಪಲು ರಸ್ತೆ ಇಲ್ಲವೆನ್ನುತ್ತೀರಿ. ಇದು ವಿರೋಧಾಭಾಸವಲ್ಲವೇ ?" ಎಂದು ಕೇಳಿದರೆ, "ಅದು ಹಾಗಲ್ಲ. ನಾವು ಹೆದ್ದಾರಿ ಮಾಡಿ ಎಂದು ಕೇಳುತ್ತಿಲ್ಲ. ನಾವು ಕೇಳುತ್ತಿರುವುದು ಬರೀ ಜೀಪು, ಸಾದಾ ಗಾಡಿಗಳು ತಿರುಗುವಂತಹ ರಸ್ತೆ. ಇದನ್ನು ಗಣಿಯವರು, ಟಿಂಬರ್ ನವರು ಬಳಸಿಕೊಳ್ಳಲು ಸಾಧ್ಯವಿಲ್ಲ. ಹಾಗಿದ್ದಾಗ ಕಾಡೂ ಉಳಿದಂತಾಯ್ತು, ನಮಗೆ ಮಾರುಕಟ್ಟೆಯೂ ಸಿಕ್ಕಂತಾಯ್ತು" ಎಂದುತ್ತರಿಸುತ್ತಾರೆ ರಮಣಿ.

ಅದಾಗಲೇ ಕತ್ತಲಾಗುತ್ತಿದ್ದ ಕಾರಣ ದೂರದ ಹಳ್ಳಿಗಳಿಂದ ಬಂದಿದ್ದ ಮಹಿಳೆಯರು ನಿಧಾನವಾಗಿ ಮರಳತೊಡಗಿದರು. ಅತಿ ಕಡಿಮೆ ಬೆಳಕಿನಲ್ಲಿ ಅವರು ಕಾಡುದಾರಿಯ ಮುಖಾಂತರ ಸಾಗಬೇಕಿತ್ತು. ನಮ್ಮ ೮ ಜನ ಅಲೆಮಾರಿಗಳ ತಂಡಕ್ಕೆ ಇಲ್ಲಿಗೆ ೧೮ ಮೈಲುಗಳನ್ನು ಸವೆಸಿ ಬರುವಾಗಲೇ ಸಾಕುಸಾಕೆನಿಸಿತ್ತು. ನಮ್ಮ ತಲೆಗಳ ಮೇಲೆ ಯಾವ ಸೋಲಾರ್ ಪ್ಯಾನೆಲ್ಲೂ ಇರಲಿಲ್ಲ. ಕೇರಳದ ಮಂತ್ರಿಗಳೇ ಮೆಚ್ಚುಗೆ ಸೂಚಿಸಿದ್ದ, ಎಡಮಾಲಕುಡಿಯ 'ಕುಟುಂಬಶ್ರೀ'ಯ ವಿಶೇಷ ಕಾರ್ಯ ವೈಖರಿಯನ್ನು ನೋಡಲು ನಾವಿಲ್ಲಿಯ ತನಕ ಬಂದಿದ್ದೆವು. ಆಗ ನನಗೆ ಮಂತ್ರಿಗಳ ಮಾತಿನ ಮೇಲೆ ಅಷ್ಟು ನಂಬಿಕೆ ಇರಲಿಲ್ಲ. ಅವರದ್ದೇ ಸರ್ಕಾರ ಇರುವಾಗ ಯಾರು ಮಂತ್ರಿಯ ಮಾತನ್ನು ನಂಬುತ್ತಾರೆ ಹೇಳಿ ? ಆದರೆ ಎಡಮಾಲಕುಡಿಯ ಮಹಿಳೆಯರನ್ನು ಭೇಟಿಯಾದ ಮೇಲೆ ಅವರ ಅಸಾಮಾನ್ಯತೆ ನಿಧಾನವಾಗಿ ಅರ್ಥವಾಗತೊಡಗಿತು.

*(ಪಿ. ಸಾಯಿನಾಥ್‌ರ 'Solar Panels and Solidarity'ಯ ಅನುವಾದ)*


ಮೂಲ : **ಪಿ. ಸಾಯಿನಾಥ್**

ಕನ್ನಡಕ್ಕೆ : **ಸಾಕ್ಷಿ**

ಕೇರಾಫ್ : ಕೆ. ಅರವಿಂದ
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ
ಬೆಂಗಳೂರು ಪ್ರಧಾನ ಕಛೇರಿ
ಅವಿನ್ಯೂ ರಸ್ತೆ
ಬೆಂಗಳೂರು – ೫೬೦ ೦೦೨




## ಗಝಲ್

ತಲವಾರಗಳನು ಹಿಡಿದು ತಿವಿಯಲು ನಿಂತಿದ್ದಾರೆ ನನ್ನ ಜನ ಯಾಕಾಗಿ
ಬಂದೂಕುಗಳನು ಹಿಡಿದು ಹೊಡೆಯಲು ನಿಂತಿದ್ದಾರೆ ನನ್ನ ಜನ ಯಾಕಾಗಿ

ತಮ್ಮ ನೆರಳಿಗೆ ತಾವೇ ಅಂಜುವ ಬೂಟಾಟಿಕೆಯರಿಯದ ಜನ
ರಕ್ತದ ಜೊತೆ ಓಕುಳಿಯಾಡಿ ಕೇಕೆ ಹಾಕಲು ನಿಂತಿದ್ದಾರೆ ನನ್ನ ಜನ ಯಾಕಾಗಿ

ಏಕತಾರಿ ನುಡಿಸುತ್ತ ನೀತಿ ಪದವಾಡುವುದು ಕೇಳುತ್ತಿಲ್ಲ
ಮುಖವಾಡ ಧರಿಸಿ ನಿಜಮುಖ ಮರೆಮಾಚಿ ನಿಂತಿದ್ದಾರೆ ನನ್ನ ಜನ ಯಾಕಾಗಿ

ಯಾವ ಧರ್ಮದ ಅಫೀಮು ಬಂಧಿಸಿಟ್ಟಿದೆ ಇವರ ಹಸಿವನು
ಜೀವವನು ಲೆಕ್ಕಿಸದೆ ಮದ್ದಿನ ಚೀಲವಿಡಿದು ನಿಂತಿದ್ದಾರೆ ನನ್ನ ಜನ ಯಾಕಾಗಿ

ಸಕಲ ಜೀವಕೆ ಲೇಸ ಬಯಸುವುದು ಮರೆತ ಮಾತು
ಯಾರ ಕೈಯ ದಾಳವಾಗಿ ತ್ರಿಶೂಲವಿಡಿದು ನಿಂತಿದ್ದಾರೆ ನನ್ನ ಜನ ಯಾಕಾಗಿ

'ದಿನ್ನಿ' ಬೀದಿಯ ಮೇಲೆಲ್ಲ ರಕ್ತ ಮತ್ತದರ ಮೇಲೆ ಬೀದಿ
ಏನೂ ಆಗಿಲ್ಲವೆನ್ನುವಂತೆ ಫಿರಂಗಿಗಳ ಜೊತೆ ನಿಂತಿದ್ದಾರೆ ನನ್ನ ಜನ ಯಾಕಾಗಿ


**ಡಾ॥ ದಸ್ತಗೀರ್‌ಸಾಬ್ ದಿನ್ನಿ**
ಸಹಾಯಕ ಪ್ರಾಧ್ಯಾಪಕ, ಸರಕಾರಿ ಪ್ರಥಮ ದರ್ಜೆ ಕಾಲೇಜು, ರಾಯಚೂರು

# ಗಾಳಿಯಂತ್ರಗಳ ಸುಳಿಯಲ್ಲಿ ಜೋಗಿಮಟ್ಟಿ ಗಿರಿಧಾಮ



ಕ್ರಿ. ಶ. ೧೯೯೨ರಿಂದೀಚೆಗೆ ಚಿತ್ರದುರ್ಗದ ಹೊರವಲಯ ಸೇರಿದಂತೆ ಜೋಗಿಮಟ್ಟಿಯ ಸುತ್ತಮುತ್ತಲಿನ ಅರಣ್ಯ ವ್ಯಾಪ್ತಿಗಳಲ್ಲಿ ಖಾಸಗಿ ಗಾಳಿಯಂತ್ರಗಳು ಈಗಾಗಲೇ ತಮ್ಮ ಅಸ್ತಿತ್ವ ಸಾಧಿಸಿರುವುದು ಗಮನಾರ್ಹ ಸಂಗತಿ. ಸುಮಾರು ೨೩ ವರ್ಷಗಳಿಂದ ನಿರಂತರವಾಗಿ ಮರಗಿಡಗಳನ್ನು ಕಡಿದು, ಸುತ್ತಲಿನ ಗುಡ್ಡಗಳನ್ನು ಅಗೆದು, ವಿದ್ಯುತ್ ಉತ್ಪಾದನೆಗಾಗಿ ಬೃಹದಾಕಾರವಾದ ಗಾಳಿಯಂತ್ರಗಳನ್ನು ಸ್ಥಾಪಿಸಲಾಗಿದೆ. ಆರಂಭದಲ್ಲಿ ಒಂದೆರಡು ಖಾಸಗಿ ಕಂಪನಿಗಳಂತೆ ಕ್ರಮೇಣ ಹತ್ತಾರು ಕಂಪನಿಗಳು ದುರ್ಗದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ತಮ್ಮ ಹಿಡಿತ ಸಾಧಿಸಿವೆ. ಇಷ್ಟು ಸಾಲದೆಂಬಂತೆ ಈಗ ನೇರವಾಗಿ ಜೋಗಿಮಟ್ಟಿ ಅರಣ್ಯ ಪ್ರದೇಶದ ಭೂಗರ್ಭಕ್ಕೆ ಲಗ್ಗೆ ಹಾಕಲು ಸಜ್ಜಾಗಿ ನಿಂತಿವೆ ಖಾಸಗಿ ಗಾಳಿಯಂತ್ರಗಳ ಕಂಪನಿಗಳು. ಮೊದಲ ಹಂತದಲ್ಲಿ ಒಟ್ಟು ೨೪.೮೩ ಹೆ. ಕಾಯ್ದಿಟ್ಟ ಅರಣ್ಯ ಪ್ರದೇಶದ ಭೂಮಿಯನ್ನು ನೀಡಲು ಮುಂದಾಗಿರುವ ಅರಣ್ಯ ಇಲಾಖೆಯ ನೀತಿಗೆ ಸ್ಥಳೀಯರು ಆಕ್ರೋಶ ವ್ಯಕ್ತಪಡಿಸಿದ್ದಾರೆ.

ಸುಮಾರು ಎರಡು ದಶಕಗಳಿಂದ ನಿರಂತರವಾಗಿ ನೈಸರ್ಗಿಕ ಲಾಭ ಪಡೆದುಕೊಳ್ಳುತ್ತಿರುವ ಕಂಪನಿಗಳ ವಿರುದ್ಧ ಯಾವುದೇ ಧ್ವನಿ ಎತ್ತದಿರುವುದೇ ಇದಕ್ಕೆಲ್ಲಾ ಕಾರಣ ಎಂದು ಸಾರ್ವಜನಿಕರು ಮತ್ತು ಹಲವು ಸಂಘ ಸಂಸ್ಥೆಗಳು ತಮ್ಮ ಅಸಮಾಧಾನ ವ್ಯಕ್ತಪಡಿಸಿವೆ. ೧೦,೦೪೮ ಹೆ. ಪ್ರದೇಶಗಳ ಎಲ್ಲಾ ಭಾಗಗಳಲ್ಲೂ ಈಗಾಗಲೇ ಗಾಳಿಯಂತ್ರಗಳು ತಲೆ ಎತ್ತಿವೆ. ಅಳಿದುಳಿದ ಅರಣ್ಯ ಪ್ರದೇಶವನ್ನಾದರೂ ನಮ್ಮ ಮುಂದಿನ ಪೀಳಿಗೆಗಾಗಿ ಉಳಿಸಿಕೊಳ್ಳುವ ಅನಿವಾರ್ಯತೆ ಇದೆ ಎಂಬ ಅಭಿಪ್ರಾಯಗಳು ಸಾರ್ವಜನಿಕ ವಲಯದಲ್ಲಿ ಕೇಳಿಬರುತ್ತಿವೆ. ಇದನ್ನಾವುದನ್ನೂ ಲೆಕ್ಕಿಸದೆ ಸರ್ಕಾರವು ಹೊಸದಾಗಿ, ಮೆ॥ ಫೋರ್. ಇ. ಎಫ್. ವಿಂಡ್ ಪವರ್ ಲಿ. ಎಂಬ ಬೆಂಗಳೂರಿನ ಖಾಸಗಿ ಕಂಪನಿಯೊಂದಕ್ಕೆ ಗುತ್ತಿಗೆ ಆಧಾರದ ಮೇಲೆ ಪ್ರಥಮ ಹಂತದಲ್ಲಿ ೧೪ ಗಾಳಿಯಂತ್ರಗಳನ್ನು ಸ್ಥಾಪಿಸಲು ತಾತ್ವಿಕ ಅನುಮೋದನೆ ನೀಡಿದೆ. ಸರ್ಕಾರದ ಈ ನೀತಿಯಿಂದ ಪರಿಸರ ಪ್ರಿಯರು ಮತ್ತು ಸಾರ್ವಜನಿಕರು ಆತಂಕ ವ್ಯಕ್ತಪಡಿಸಿದ್ದಾರೆ.

ಇದು ನಿಜಕ್ಕೂ ಪರಿಸರ ಹಾಗೂ ಜನವಿರೋಧಿ ನೀತಿಯಾಗಿದೆ ಎಂದು ಪರಿಗಣಿಸಿದ ಸ್ಥಳೀಯರು ಯಾವುದೇ ಕಾರಣಕ್ಕೂ ಮತ್ತೊಮ್ಮೆ ಜೋಗಿಮಟ್ಟಿಯಲ್ಲಿ ಗಾಳಿಯಂತ್ರಗಳ ಸ್ಥಾಪನೆಗೆ ಅವಕಾಶ ಮಾಡಿಕೊಡಲಾಗದು ಎಂಬ ಸಂದೇಶದೊಂದಿಗೆ ಪ್ರತಿಭಟನೆ ನಡೆಸಲು ಸಜ್ಜಾಗಿದ್ದಾರೆ.

**ಗಾಳಿಯಂತ್ರಗಳ ಸ್ಥಾಪನೆಯಿಂದಾಗುವ ದುಷ್ಪರಿಣಾಮಗಳು**

✶ ಅಪಾರ ಪ್ರಮಾಣದ ಮರಗಿಡಗಳು ಮತ್ತು ಅಮೂಲ್ಯ ಔಷಧಿಯ ಸಸ್ಯ ಪ್ರಭೇದಗಳ ನಾಶ.

✶ ಗುಡ್ಡಗಳಲ್ಲಿ ರಸ್ತೆ ಸ್ಥಾಪಿಸಲು ಮದ್ದುಗುಂಡುಗಳ ಪ್ರಯೋಗ, ಶಬ್ದಮಾಲಿನ್ಯದಿಂದ ವನ್ಯ ಜೀವಿಗಳಿಗೆ ಕಂಟಕ.

✶ ಬೃಹತ್ ಗಾಳಿಯಂತ್ರಗಳ ರೆಕ್ಕೆ ಭಾಗಗಳಿಂದ ಹೊರಹೊಮ್ಮುವ ಸದ್ದಿನಿಂದ ಅಪಾರ ಜೀವರಾಶಿಗಳು ತಮ್ಮ ಆವಾಸವನ್ನು ಬದಲಿಸುತ್ತವೆ / ಇತ್ತ ಸುಳಿಯದಂತಾಗುತ್ತವೆ.

✶ ಬೃಹತ್ ಗಾಳಿಯಂತ್ರಗಳ ಕಾರ್ಯವೈಖರಿಯಿಂದಾಗಿ ಭೂಮಿ ಕಂಪಿಸುವ ಸಾಧ್ಯತೆಗಳಿರುತ್ತದೆ / ಕಂಪನದಿಂದ ಬಿಲ ರೂಪದಲ್ಲಿ ವಾಸಿಸುವ ಸ್ತನಿಗಳಿಗೆ ಸಂಚಕಾರ ಎದುರಾಗುತ್ತದೆ.

✶ ಗಾಳಿಯಂತ್ರಗಳ ಸ್ಥಾಪನೆಯಿಂದ ಕಾಡಿನ ಸಹಜ ಸೌಂದರ್ಯಕ್ಕೆ ಧಕ್ಕೆಯುಂಟಾಗಿ ನೈಸರ್ಗಿಕ ಸಂಪನ್ಮೂಲಗಳು ಕಣ್ಮರೆಯಾಗುತ್ತವೆ.

✶ ಏಕಾಂತವನ್ನು ಬಯಸಿ ಬರುವ ಪ್ರವಾಸಿಗರಿಗೆ, ವಿಹಾರಿಗಳಿಗೆ ಮತ್ತು ಅಪಾರ ಪರಿಸರ ಪ್ರಿಯರಿಗೆ ಗಾಳಿಯಂತ್ರಗಳ ಸದ್ದು ಮಾರಕವಾಗಲಿದೆ.

✶ ಕ್ರಮೇಣ ಹತ್ತಾರು ಕಂಪನಿಗಳು ಗಾಳಿಯಂತ್ರಗಳನ್ನು ಸ್ಥಾಪಿಸಿದಲ್ಲಿ ಆ ಪ್ರದೇಶದಲ್ಲಿ ವಾಹನಗಳ ದಟ್ಟಣೆ ಹೆಚ್ಚಾಗಿ ವನ್ಯಜೀವಿಗಳಿಗೆ ಕಂಟಕವಾಗುತ್ತದೆ.

✶ ಖಾಲಿ ಇರುವ ಜೋಗಿಮಟ್ಟಿಯ ಹತ್ತಾರು ಗುಡ್ಡಗಳಿಗೆ ನೂರಾರು ಸಂಖ್ಯೆಯಲ್ಲಿ ಗಾಳಿಯಂತ್ರಗಳನ್ನು ಸ್ಥಾಪಿಸಿದರೆ ನಮ್ಮ ಮುಂದಿನ ಪೀಳಿಗೆಗೆ ಜೋಗಿಮಟ್ಟಿಯನ್ನು ಕೇವಲ ಚಿತ್ರಪಟಗಳಲ್ಲಿ ತೋರಿಸುವ ಕಾಲ ಎದುರಾಗಬಹುದು.

ಪರಿಸರ ಪ್ರಿಯರು ಅಭಿವೃದ್ಧಿಯ ವಿರೋಧಿಗಳಲ್ಲ. ನಾವು ಎಂದಿಗೂ ಅಭಿವೃದ್ಧಿಯನ್ನು ಅಗೌರವಿಸುವವರಲ್ಲ. ಆದರೆ ಅಭಿವೃದ್ಧಿಯ ಹೆಸರಲ್ಲಿ ಪರಿಸರ ನಾಶವನ್ನು ಸಹಿಸುವವರಲ್ಲ. ಚಿತ್ರದುರ್ಗದ ಜೋಗಿಮಟ್ಟಿಯ ಭೂಗರ್ಭದಲ್ಲಿ ಸ್ಥಾಪಿಸಲು ಹೊರಟಿರುವ ಗಾಳಿಯಂತ್ರಗಳ ವಿರುದ್ಧ ಬೀದಿಗಿಳಿಯಲೂ ಹಿಂಜರಿಯುವುದಿಲ್ಲ. ಈ ವಿಷಯ ಕುರಿತಾಗಿ ಸರ್ಕಾರದ ಮೇಲೆ ಒತ್ತಡ ಹೇರುವ ನಿಟ್ಟಿನಲ್ಲಿ ಅತೀ ಶೀಘ್ರದಲ್ಲಿ ಚಿತ್ರದುರ್ಗ ಜಿಲ್ಲಾಧಿಕಾರಿಗಳಿಗೆ ಅಧಿಕೃತವಾಗಿ ಮನವಿ ಸಲ್ಲಿಸಲಿದ್ದೇವೆ.

ಚಿತ್ರಲೇಖನ : **ಡಿ. ಎನ್. ರವಿಕುಮಾರ್**
**ಬಿನ್ ಡಿ. ನಾಗೇಂದ್ರಪ್ಪ**
ಚಿತ್ರಕಲಾ ಉಪನ್ಯಾಸಕರು, # ೨೯, 'ಪವನ್' ನಿಲಯ
೬ನೇ ಕ್ರಾಸ್ ವೆಸ್ಟ್, ಜೆ. ಸಿ. ಆರ್. ಬಡಾವಣೆ
ಚಿತ್ರದುರ್ಗ – ೫೭೭ ೫೦೧




## ಗಾಂಧಿ ಪ್ರಣೀತ ಧರ್ಮದರ್ಶಿತ್ವ




*ಪ. ಮಲ್ಲೇಶ್*

**ಪುಟ : ೧೬೮ + ೩೨**

**ಬೆಲೆ : ರೂ. ೧೬೦**

**ಅನನ್ಯ ಪ್ರಕಾಶನ,** ೧೦೪೭/೪೦, ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ವಿದ್ಯಾರಣ್ಯಪುರಂ ಮೈಸೂರು – ೫೭೦ ೦೦೮

*ಪ. ಮಲ್ಲೇಶ್ ಅವರ ೫೦ ವರ್ಷಗಳ ಸುದೀರ್ಘ ಸಾರ್ವಜನಿಕ ಜೀವನ ಮತ್ತು ಗಾಂಧೀಜಿ ಅವರ ಚಿಂತನೆಗಳನ್ನು ಆಳವಾಗಿ ಅಧ್ಯಯನ ಮಾಡಿದ್ದರ ಫಲಿತಾಂಶವೇ ಈ ಕೃತಿ. ಸತ್ಯ, ಅಹಿಂಸೆ, ಸತ್ಯಾಗ್ರಹ, ಅರ್ಥಶಾಸ್ತ್ರ–ಧರ್ಮದರ್ಶಿತ್ವ, ಸರ್ವೋದಯ, ಗ್ರಾಮ ಸ್ವರಾಜ್ಯ, ರಾಜಕೀಯದಲ್ಲಿ ಧರ್ಮದರ್ಶಿತ್ವ ಇತ್ಯಾದಿಯ ವಿಷಯಗಳನ್ನು ಇಲ್ಲಿ ಮಲ್ಲೇಶ್ ಅವರು ವಿಶ್ಲೇಷಿಸಿದ್ದಾರೆ. ಗಾಂಧೀಜಿ ಬಗ್ಗೆ ಬರೆದ ಹಲವು ವಿದ್ವಾಂಸರ ಅನಿಸಿಕೆಗಳ ಸಾರಾಂಶ, ಅವರಿಂದ ಪ್ರೇರಣೆ ಪಡೆದವರ ಹೇಳಿಕೆಗಳನ್ನು ಮತ್ತು ಅವರು ಅಹಿಂಸೆ ಮತ್ತು ಸ್ವಸ್ತ ಸಮಾಜ ಕಟ್ಟಲು ಶ್ರಮಿಸಿದ ವಿಷಯಗಳನ್ನು ಇಲ್ಲಿ ದಾಖಲಿಸಿದ್ದಾರೆ. ಸತ್ಯ, ಅಹಿಂಸೆ ಈಗ ವಿವಾದಗ್ರಸ್ತ ವಿಷಯಗಳೇ ಅಲ್ಲ, ಹಿಂಸಾ ಪ್ರವೃತ್ತಿಗೆ ಪರ್ಯಾಯವೊಂದರ ಹುಡುಕಾಟದಲ್ಲಿ ಎಲ್ಲ ಜನಾಂಗಗಳೂ ವಿಶ್ವದಾದ್ಯಂತ ಪರಿತಪಿಸುತ್ತಿವೆ. 'ಗಾಯಗೊಳಿಸದೆ ಕತ್ತರಿಸಬಲ್ಲ, ಅದನ್ನು ಪ್ರಯೋಗಿಸುವವರ ಗೌರವ ಹೆಚ್ಚಿಸುವಂತಹ ಇತಿಹಾಸದಲ್ಲಿಯೇ ಸರಿಸಾಟಿಯಿಲ್ಲದೆ ಶಸ್ತ್ರ, ಗಾಂಧೀಜಿ ಅವರ ಅಹಿಂಸೆಯ ಮಾರ್ಗ' ಎಂಬ ಮಾತುಗಳನ್ನು ಮಾರ್ಟಿನ್ ಲೂಥರ್ ಕಿಂಗ್ ಹೇಳಿದರು. ಅಹಿಂಸೆಯ ಅಗಾಧತೆಯನ್ನೂ ಪ್ರೀತಿಯ ನೈತಿಕತೆಯನ್ನೂ ವೈಯಕ್ತಿಕ ಮಟ್ಟಕ್ಕೂ ಮಿಗಿಲಾಗಿ ಪ್ರಬಲ, ಪರಿಣಾಮಕಾರಿ ಸಾಮಾಜಿಕ ಶಕ್ತಿಯನ್ನಾಗಿ ಪರಿವರ್ತಿಸಿದ ಗಾಂಧೀಜಿಯ ಹೆಜ್ಜೆಗಳು ಇತಿಹಾಸದಲ್ಲಿಯೇ ಮೊದಲು. ನೆಲ್ಸನ್ ಮಂಡೇಲಾ ಪ್ರೇರಣೆ ಪಡೆದಿದ್ದೂ ಗಾಂಧೀಜಿಯಿಂದಲೆ. ಇದೆಲ್ಲವನ್ನೂ ಮೀರಿ ಈ ಕೃತಿ ಗಾಂಧೀಜಿಯ ಬಗ್ಗೆ ಓದಲೇಬೇಕಾದ ಕೃತಿಯಾಗಿದ್ದು ಪ. ಮಲ್ಲೇಶ್ ಅವರ ಶ್ರಮ ಸಾರ್ಥಕವಾಗಿದೆ.*

## ಸಂತೆಯೊಳಗೊಂದು ಮನೆ (ಸಮಾಜ–ಸಂಸ್ಕೃತಿ ಚಿಂತನೆಗಳು)

*ಬಿ. ಯು. ಸುಮಾ*

**ಪುಟ : xviii+ ೧೫೮ = ೧೭೬** **ಬೆಲೆ : ರೂ. ೧೪೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*'ಸಂತೆಯೊಳಗೊಂದು ಮನೆ'ಯ ಕೆಳಗೆ ದಲಿತ ಸ್ತ್ರೀವಾದಿ ಚಿಂತನೆಯ ಲೇಖನಗಳು ಎಂಬ ಉಪ ಶೀರ್ಷಿಕೆಯನ್ನು ಕೊಡಲಾಗಿದೆ. ಆದರೆ ಕೃತಿಯಲ್ಲಿ ಮೂರು ಭಾಗಗಳಿವೆ. ಒಂದನೆ ಭಾಗದಲ್ಲಿ ಭಾರತೀಯ ರಾಜಕಾರಣ, ಕೋಮುವಾದ, ಜಾತಿವಾದ, ದಲಿತ ರಾಜಕಾರಣದ ಸ್ವರೂಪ : ಅಂಬೇಡ್ಕರ್ ಆಧ್ಯಾತ್ಮಿಕ ತತ್ವ ಮತ್ತು ರಾಜಕೀಯದಲ್ಲಿ ನೈತಿಕತೆ. ಕರ್ನಾಟಕದಲ್ಲಿ ದಲಿತ ಚಳುವಳಿಯ ಮುಂದಣ ಹೆಜ್ಜೆ... ಭಾಗ ಎರಡರಲ್ಲಿ ರಾಜಕಾರಣ ಮತ್ತು ಭಾಗ ಮೂರರಲ್ಲಿ ಸಾಹಿತಿಗಳು ಮತ್ತು ಸಾಹಿತ್ಯದ ಬಗೆಗಿನ ಲೇಖನಗಳಿವೆ. ಮಹಿಳಾ ಲೇಖಕಿಯರು, ಮಹಿಳೆಯರ ಸಮಸ್ಯೆಗಳು ಮತ್ತು ಅವರ ಹಕ್ಕುಗಳಿಗಾಗಿ ಬರೆಯುವುದು ಮತ್ತು ಹೋರಾಡುವುದು ಹೆಚ್ಚಾಗಿರುವ ಈ ಹೊತ್ತಿನಲ್ಲಿ ವಿಸ್ತಾರವಾದ ಸಮಾಜದ ಸಮಸ್ಯೆಗಳ ಒಳಗಿನ ಹಂದರಗಳನ್ನು ಕೈಗೆತ್ತಿಕೊಂಡು ಆಳವಾಗಿ ಅಧ್ಯಯನ ಮಾಡಿ ಅಷ್ಟೇ ನಿಖರವಾಗಿ ಬರೆದಿರುವ ಮೊದಲ ಭಾಗದ ಲೇಖನಗಳು ಗಮನ ಸೆಳೆಯುತ್ತವೆ. ಕನ್ನಡದಲ್ಲಿ ಒಬ್ಬ ಮಹಿಳಾ ಸಾಹಿತಿ ಇಷ್ಟು ಆಳವಾಗಿ ಸ್ತ್ರೀವಾದಿ ಚಿಂತನೆಗಳು–ಸಮಾಜ ಸಂಸ್ಕೃತಿ ಚಿಂತನೆಗಳ ಲೇಖನಗಳನ್ನು ಬರೆದಿರುವುದು ಬಹಳ ಅಪರೂಪ. ಮೊದಲ ಭಾಗವನ್ನೇ ಮುಂದುವರಿಸಿ ಇನ್ನಷ್ಟು ಲೇಖನಗಳನ್ನು ಬರೆದಿದ್ದರೆ ಇದು ಸಮಾಜ–ಚಿಂತನೆಗಳ ಒಳ್ಳೆಯ ಆಕರ ಗ್ರಂಥವಾಗಬಹುದಾದ ಎಲ್ಲಾ ಲಕ್ಷಣಗಳೂ ಇವೆ.*




**ಬಾಬಾಸಾಹೇಬ್ ಡಾ॥ ಭೀಮರಾವ್ ರಾಮಜೀ ಅಂಬೇಡ್ಕರ್ ಅವರು ಕಂಡ**

## ಬುದ್ಧ ಮತ್ತು ಕಾರ್ಲ್ ಮಾರ್ಕ್ಸ್

*ಎಚ್. ಎಸ್. ಬೇನಾಳ*

**ಪುಟ : xvi + ೭೨** **ಬೆಲೆ : ರೂ. ೯೦**

**ಸಹನಾ ಪ್ರಕಾಶನ,** ಪ್ಲಾಟ್ ನಂ. ೪೦೮, ಸಿ.ಐ.ಬಿ. ಕಾಲನಿ, ಕೇಂದ್ರ ಬಸ್ ನಿಲ್ದಾಣದ ಹಿಂದುಗಡೆ, ಎಂ. ಎಸ್. ಕೆ. ಮಿಲ್ ರಸ್ತೆ, ಕಲಬುರಗಿ – ೫೮೫ ೧೦೩

*'ಆಡು ಮುಟ್ಟದ ಸೊಪ್ಪಿಲ್ಲ' ಎಂಬಂತೆ ಬಾಬಾಸಾಹೇಬರು ಮುಟ್ಟದ ಸಾಮಾಜಿಕ ಸಮಸ್ಯೆಗಳಿಲ್ಲ ಎನ್ನುಬಹುದು. ಬುದ್ಧ ಮತ್ತು ಕಾರ್ಲ್ ಮಾರ್ಕ್ಸ್‌ರ ಚಿಂತನೆಗಳನ್ನು ಒಳಗೊಂಡ ಲೇಖನದೊಂದಿಗೆ ಇನ್ನೂ ಮೂರು ಲೇಖನಗಳು ಈ ಕೃತಿಯಲ್ಲಿವೆ. ಭಾರತೀಯ ಸಮಾಜದಲ್ಲಿ ಜೀವಂತವಾಗಿರುವ ಅಸಾಮಾಜಿಕ ಪದ್ಧತಿಗಳು (ಮುಖ್ಯವಾಗಿ ದೇವದಾಸಿ ಮತ್ತು ಸೇವಾದಾಸಿ), ಸಾವಿತ್ರಿಬಾಯಿ ಫುಲೆ ಮತ್ತು ಬಸವಣ್ಣನವರು ಕಂಡ ಭಾರತೀಯ ಸಮಾಜ. ಇವುಗಳ ಜೊತೆಗೆ ಸ್ವಾಮಿ ವಿವೇಕಾನಂದರೊಳಗೊಬ್ಬ ಮನು ಎಂಬ ಚಿಕ್ಕ ಲೇಖನವೂ ಇದೆ. ಅಂಬೇಡ್ಕರ್, ಬುದ್ಧ ಮತ್ತು ಕಾರ್ಲ್ ಮಾರ್ಕ್ಸ್ ನಡುವಿನ ಚಿಂತನೆಗಳನ್ನು ಆಳವಾಗಿ ಅಭ್ಯಾಸ ಮಾಡಿದ ಬೇನಾಳ ಕೆಲವು ಒಳನೋಟಗಳನ್ನು ವಿಶ್ಲೇಷಿಸಿದ್ದಾರೆ. ಜಗತ್ತಿನಲ್ಲಿ ದುಡಿಯುತ್ತಿರುವ ವರ್ಗಗಳನ್ನು ಬಂಡವಾಳಶಾಹಿ ವ್ಯವಸ್ಥೆ ಶೋಷಣೆ ಮಾಡುತ್ತಿದೆ. ಹಗಲಿರುಳೂ ದುಡಿದು ತುತ್ತು ಕೂಳಿಗಾಗಿ ಕಾರ್ಮಿಕ ವರ್ಗಗಳು ಪರಿತಪಿಸುತ್ತಿದ್ದರೆ, ಕಾರ್ಮಿಕರ ದುಡಿತದಿಂದ ಫಲ ಪಡೆದುಕೊಳ್ಳುತ್ತಿರುವ ಬಂಡವಾಳಶಾಹಿ ವರ್ಗವು ಕಾರ್ಮಿಕರನ್ನು ಶೋಷಣೆ ಮಾಡುವ ಮೂಲಕ ಹೆಚ್ಚಿನ ಸಂಪತ್ತನ್ನು ಸಂಗ್ರಹಿಸಿಕೊಂಡು ಸುಖದಲ್ಲಿ ಜೀವಿಸುತ್ತಿವೆ ಎಂಬ ಮಾರ್ಕ್ಸ್‌ವಾದವನ್ನು ಅಂಬೇಡ್ಕರ್ ಒಪ್ಪಿಕೊಂಡರೂ ಹಿಂಸೆಯನ್ನು ಒಪ್ಪುತ್ತಿರಲಿಲ್ಲ. ಇದರ ಜೊತೆಗೆ ಎಚ್. ಎಸ್. ಬೇನಾಳರ ಲೇಖನಗಳು ಹಿಂದೂ ಧರ್ಮದ ಹುಳುಕುಗಳನ್ನು ಅನಾವರಣ ಮಾಡಿದೆ.*

## ಚಿನ್ನುಡಿ – ಭಾಷಣ, ಲೇಖನ ಇತ್ಯಾದಿ




*ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ*

**ಪುಟ : xvi + ೧೦೮ = ೧೨೪** **ಬೆಲೆ : ರೂ. ೧೦೦**

**ಸಂಸ್ಕೃತಿ ಪ್ರಕಾಶನ,** ೫೮ ಎಫ್, ಆದರ್ಶ ಕಾಲನಿ, ಕಂಟೋನ್‌ಮೆಂಟ್, ಬಳ್ಳಾರಿ – ೫೮೩ ೧೦೪

*'ಚಿನ್ನುಡಿ' ಎಂದು ಹೆಸರು ನೀಡಿರುವ ಈ ಕೃತಿಯಲ್ಲಿ ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ ಅವರು ಬರೆದಿರುವ ಮೂರು ಭಾಗಗಳಿವೆ. ಭಾಷಣಗಳು, ಲೇಖನಗಳು ಮತ್ತು ಮುನ್ನುಡಿ–ಬೆನ್ನುಡಿಗಳು. ಒಂದನೇ ಭಾಗದಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನ, ಶರಣ ಸಮ್ಮೇಳನ, ದಲಿತ ಸಮ್ಮೇಳನ ಮತ್ತು ಒಂದು ಕವಿಗೋಷ್ಠಿಯಲ್ಲಿ ನೀಡಿದ ಭಾಷಣಗಳು ಇವೆ. ಎರಡನೇ ಭಾಗದಲ್ಲಿ ಬೌದ್ಧ ಸಂಘ, ಅನುಭವ ಮಂಟಪ ಹಾಗೂ ಸಂಸತ್ತುಗಳ ಪರಿಕಲ್ಪನೆ ಮತ್ತು ಕೊಡುಗೆ, ದಲಿತ ವಚನಕಾರರ ಒಂದು ಪಕ್ಷಿ ನೋಟ, ಮತಾಂತರದಲ್ಲಿ ಘರ್‌ವಾಪಸಿಯೂ ಮತ್ತು ದೇವನೂರಿಗೆ ಒಂದು ಪತ್ರ ಮತ್ತು ಮೂರನೇ ಭಾಗದಲ್ಲಿ ೧೪ ಮುನ್ನುಡಿ–ಬೆನ್ನುಡಿಗಳಿವೆ. ನಾಡಿನ ಪ್ರಮುಖ ಕವಿಯಾಗಿ ಗುರುತಿಸಿಕೊಂಡಿರುವ ಇವರು ಕವನ ಸಂಕಲನಗಳೇ ಅಲ್ಲದೆ ಕತೆ, ನಾಟಕ, ಅನುವಾದ, ಸಂಪಾದನೆ ಸೇರಿದಂತೆ ಒಟ್ಟು ೨೭ ಪುಸ್ತಕಗಳನ್ನು ಹೊರ ತಂದಿದ್ದಾರೆ. ಇವರ ಕವಿತೆಗಳು ಭಾರತೀಯ ಭಾಷೆಗಳೇ ಅಲ್ಲದೆ ಹಲವು ವಿದೇಶಿ ಭಾಷೆಗಳಲ್ಲೂ ಅನುವಾದಗೊಂಡಿವೆ. ಪ್ರೊ॥ ಬಸವರಾಜ ಕಲ್ಗುಡಿ ಹೇಳುವಂತೆ 'ಇವರ ಸಾಹಿತ್ಯದಲ್ಲಿ ಅಂಬೇಡ್ಕರ್ ಚಿಂತನೆ, ಲೋಹಿಯಾವಾದಿ ಪರಿಕಲ್ಪನೆ ಹಾಗೂ ವಚನ ಚಳುವಳಿ ರೂಪಿಸಿದ ಸಾಮಾಜಿಕ, ಆರ್ಥಿಕ ತಾತ್ವಿಕಗಳು, ಚಿನ್ನಸ್ವಾಮಿಯವರ ಚಿಂತನೆಯಲ್ಲಿ ಒಂದಕ್ಕೊಂದು ಪರಿಣಾಮಕಾರಿಯಾದ ಸಾಂಗತ್ಯವನ್ನು, ಹೊಸ ಒಳನೋಟಗಳನ್ನು ರೂಪಿಸಿವೆ' ಎನ್ನುತ್ತಾರೆ.*

**– ಡಾ॥ ಎಂ. ವೆಂಕಟಸ್ವಾಮಿ**

*ನಂ. ೨೦೬, ಜೆ. ಜೆ. ಎಲಿಟಾ ಅಪಾರ್ಟ್‌ಮೆಂಟ್, ನ್ಯಾನಪ್ಪನಹಳ್ಳಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–೭೬*




# ಧರ್ಮ, ದೇವರು ನಾವು... ಇತ್ಯಾದಿ

ಪ್ರೊ॥ ಬಿ. ಸುರೇಂದ್ರ ರಾವ್

ಇತ್ತೀಚೆಗೆ ಧರ್ಮ, ದೇವರುಗಳೊಡನೆ ನಮ್ಮ ಚರ್ಚೆ, ತಗಾದೆಗಳು ಹೆಚ್ಚಾದಂತೆ ತೋರುತ್ತದೆ. ಇದರೊಳಗೆ ಪಂಡಿತ–ಪಾಮರರೆಲ್ಲರೂ ಭಾಗಿಯಾಗುತ್ತಿದ್ದಾರೆ. ಅದಕ್ಕೆ ರಾಜಕೀಯ ಲೇಪವೂ ಸಾಕಷ್ಟು ಅಂಟಿದೆ. ಆಧುನಿಕತೆಯ ಭರಾಟೆಯಲ್ಲಿ ಧರ್ಮ–ದೇವರುಗಳ ಬಗ್ಗೆ ಪೈಪೋಟಿ–ಜಗಳಗಳು ಕಡಿಮೆಯಾಗಬಹುದೆಂಬ ಭ್ರಮೆಯನ್ನು ಕೆಲವರು ಇಟ್ಟುಕೊಂಡದ್ದುಂಟು. ಆದರೆ ಹಾಗಾಗಿಲ್ಲ. ಧರ್ಮರಕ್ಷಣೆಯು ನಮ್ಮ ರಾಜಕೀಯ ಉದ್ದಿಮೆಯೊಳಗಿನ ಅಂಗವಾಗಿದೆ. ಅದು ದೇಶವನ್ನು ಒಂದಾಗಿಸುತ್ತದೆ ಎಂಬುದು ಕೆಲವರ ಪ್ರತಿಪಾದನೆಯಾದರೆ ಅದು ದೇಶದ ಒಗ್ಗಟ್ಟಿಗೆ ಹಾಗೂ ಸಹಬಾಳ್ವೆಗೆ ಸಹಕಾರಿಯಲ್ಲ ಎನ್ನುವುದು ಇನ್ನು ಕೆಲವರ ಅಭಿಪ್ರಾಯ. ಅಂದರೆ ಧರ್ಮ–ದೇವರುಗಳ ಬಗ್ಗೆ ಜಗಳ ತಪ್ಪಿದ್ದಲ್ಲ. ಅನೇಕ ಬಾರಿ ಧರ್ಮದ ಬಗ್ಗೆ ಚರ್ಚಿಸುವಾಗ ನಮಗೆ ಕೇಳಿಬರುವ ಮಾತು ಇದು : ಧರ್ಮ ಬೇರೆ, ಮತಧರ್ಮ ಬೇರೆ. ಇದು ಸರಿ. ಆದರೆ ಸಮಾಜದ ಚಾಲ್ತಿ ಸಮಸ್ಯೆ ಮತಧರ್ಮಗಳದ್ದು. ಸಾಮಾನ್ಯವಾಗಿ ನಾವು ಧರ್ಮ ಎನ್ನುವುದು ಮತಧರ್ಮಗಳನ್ನು. ಅದರೊಳಗೆ ನಮ್ಮ ಧರ್ಮವೇ ಸತ್ಯ, ಉಳಿದವು ಅಲ್ಲ, ಎಂಬ ನಿಲುವನ್ನು ಎಲ್ಲಾ ಧರ್ಮಗಳು ಸಾಕಿ ಸಲಹಿವೆ. ಇದರಿಂದ ಅಸಹನೆಯು ತಲೆದೋರಿದೆ. ನಮ್ಮದೇ ಧರ್ಮ, ಉಳಿದುವೆಲ್ಲಾ ಅರೆಧರ್ಮಗಳು ಅಥವಾ 'ಅಧರ್ಮ'ಗಳು ಎಂಬ ಧ್ವನಿ ಅನಪೇಕ್ಷಿತವಷ್ಟೇ ಅಲ್ಲ, ಅನಿಷ್ಟದ್ದೂ ಸಹ. ಧರ್ಮಗಳಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬುದು ನಿರ್ಧಾರಕ್ಕೆ ನಿಲುಕುವಂಥದ್ದಲ್ಲ. ಅವರವರಿಗೆ ಅವರವರ ಧರ್ಮವೇ ಶ್ರೇಷ್ಠ. ಅವರವರಿಗೆ ಅವರವರ ದೇವರೇ ಸತ್ಯ; ಉಳಿದ ದೇವರುಗಳು ಏನೂ ಅಲ್ಲ. ವಿಚಾರವಂತರು, ಹೃದಯವಂತರು, ಸಮಾಜದ ಹಿತವನ್ನು ಕಾಪಾಡಲು 'ದೇವನೊಬ್ಬ ನಾಮ ಹಲವು' ಎಂದೋ, 'ಈಶ್ವರ ಅಲ್ಲಾಃ ತೇರೇ ನಾಮ್' ಎಂದದ್ದುಂಟು. ಆದರೆ 'ಸಬಕೋ ಸನ್ಮತಿ ದೇ ಭಗವಾನ್' ಎಂಬ ಮೊರೆಗೆ ಯಾವ ದೇವರೂ ಸಮರ್ಪಕವಾಗಿ ಸ್ಪಂದಿಸಿದಂತಿಲ್ಲ. ಇದು ನಮ್ಮ ದೇಶದ ಸ್ಥಿತಿಗತಿಗಳಿಗೆ ಮಾತ್ರ ಕನ್ನಡಿ ಹಿಡಿಯುತ್ತಿರುವುದಲ್ಲ. ಜಗತ್ತಿನ ಅನೇಕ ದೇಶಗಳ, ಸಂಸ್ಕೃತಿಗಳ ಸ್ಥಿತಿಯೂ ಇದೇ. ಒಂದು ಕಡೆ ದುಡ್ಡೇ ದೊಡ್ಡಪ್ಪನಾಗಿ ಮೆರೆಯುವುದನ್ನು ಕಂಡರೆ ಇನ್ನೊಂದೆಡೆ ದೇವರು–ಧರ್ಮಗಳ ಕುರಿತು ಒಂದು ಬಗೆಯ ವಿಶೇಷ, ವಿಕೃತ ಆಸಕ್ತಿಯನ್ನು ಕಾಣುತ್ತಿದ್ದೇವೆ.

ಇತ್ತೀಚೆಗೆ ಈ ಸಮಸ್ಯೆಯು ಒಂದು ಹೊಸ ಆಯಾಮವನ್ನು ಗಳಿಸಿಕೊಂಡಿದೆ. 'ಬುದ್ಧಿಜೀವಿ'ಗಳೆಂದೆನಿಸಿಕೊಂಡ ಕೆಲವರು ಧರ್ಮ–ದೇವರುಗಳನ್ನು ಹೀಯಾಳಿಸಿ ಆಸ್ತಿಕ ಬಂಧುಗಳ ಕ್ಷೇಮ, ಮನಶ್ಶಾಂತಿಯನ್ನು ಕೆಡಿಸಿದ್ದಾರೆ ಎನ್ನಲಾಗಿದೆ. ಇದರಿಂದ ಪ್ರಕ್ಷುಬ್ಧ ವಾತಾವರಣವು ಸೃಷ್ಟಿಯಾಗಿದೆ. ಒಂದು ಕಾಲಕ್ಕೆ ತಮ್ಮ ಭಕ್ತರ ರಕ್ಷಣೆಗೆ ದೇವರುಗಳೇ ಧರೆಗಿಳಿದು ಬರುತ್ತಿದ್ದರು; ಅಂತಹ ಆಶ್ವಾಸನೆಯನ್ನು ದೇವರುಗಳು ಆಗಾಗ ನೀಡಿದ್ದುಂಟು. ಆದರೆ ಈಗ ಕಾಲ ಬದಲಾಗಿದೆ. ಈಗ ದೇವರ ನಿಲುವು, ಆಸಕ್ತಿಗಳೂ ಬದಲಾದಂತೆ ಕಾಣುತ್ತಿದೆ. ಎಷ್ಟೇ ಅವತಾರಗಳನ್ನೆತ್ತಿ ಜನರ ಉದ್ಧಾರ ಮಾಡಲು ಪ್ರಯತ್ನಿಸಿದರೂ ಜನರ ಉದ್ಧಾರವಾಗುವ ಲಕ್ಷಣಗಳು ಕಾಣುತ್ತಿಲ್ಲ ಎಂದು ದೇವರಿಗೆ ಕೂಡ ಮನದಟ್ಟಾದಂತೆ ಕಾಣುತ್ತದೆ. ನಮ್ಮ ನಂಬಿಕೆಯೂ ಹಾಗೆಯೇ. ಒಂದು ಯುಗದಿಂದ ಇನ್ನೊಂದಕ್ಕೆ ಬಂದಾಗ ಧರ್ಮವು ಕ್ಷೀಣಿಸುತ್ತದೆ. ಗೋವಿನ ಪ್ರತಿಮೆಯನ್ನು ಹೊತ್ತ ಧರ್ಮ ಕೃತಯುಗದಲ್ಲಿ ತಮ್ಮ ನಾಲ್ಕು ಕಾಲುಗಳಲ್ಲಿ ನಿಂತಿದ್ದರೆ, ಮುಂದೆ ತ್ರೇತಾಯುಗದಲ್ಲಿ ಮೂರು, ದ್ವಾಪರದಲ್ಲಿ ಎರಡು, ಕಲಿಯುಗದಲ್ಲಿ ಒಂದು ಕಾಲಿನಲ್ಲಿ ನಿಲ್ಲುವ ಅವಸ್ಥೆಗೆ ಬಂದಿಳಿಯಿತು ಎಂದು ಹೇಳಲಾಗಿದೆ. ಇದನ್ನು ನಿಲ್ಲಿಸಲು ಭಗವಂತನ ಪ್ರಯತ್ನಗಳಲ್ಲಿ ಚ್ಯುತಿ ಇಲ್ಲ. "ಧರ್ಮ ಸಂಸ್ಥಾಪನಾರ್ಥಯ ಸಂಭವಾಮಿ ಯುಗೇ ಯುಗೇ", ಎಂದು ಆಶ್ವಾಸನೆಯನ್ನು

ಇತ್ತೀಚೆಗೆ ಆಸ್ತಿಕ ಧರ್ಮಗಳು ನಾಸ್ತಿಕರ ಆಕ್ರಮಣವನ್ನು ಅನುಭವಿಸುತ್ತಿವೆ, ಅದರಿಂದ ಆಸ್ತಿಕ ಧರ್ಮಗಳು ದೊಡ್ಡ ಸವಾಲುಗಳನ್ನು ಎದುರಿಸುತ್ತಿವೆ ಎಂಬ ಚಿತ್ರಣ ಪ್ರಸಾರಗೊಳ್ಳುತ್ತಿದೆ. ಇದು ಬುದ್ಧಿಜೀವಿಗಳ ಹುನ್ನಾರ ಎನ್ನಲಾಗುತ್ತಿದೆ. ವೈಚಾರಿಕತೆಯನ್ನು ನಾಸ್ತಿಕತೆಗೆ ಸಮೀಕರಿಸಿ, ಅವೆರಡೂ ನಮ್ಮ ಧಾರ್ಮಿಕ ನೆಲೆಗಟ್ಟನ್ನು, ಸಾಂಸ್ಕೃತಿಕ ಬುನಾದಿಯನ್ನು ನಾಶಗೊಳಿಸುವಂಥವು ಎಂದು ಘೋಷಿಸಿ, ವೈಚಾರಿಕತೆಯು ಒಂದು ಹೊಸ ಬಗೆಯ ಭಯೋತ್ಪಾದನೆಯನ್ನು ಸೃಷ್ಟಿಸುತ್ತಿದೆ, ಇದನ್ನು ನಿಗ್ರಹಿಸದಿದ್ದರೆ ದೇಶದ ಧರ್ಮ, ಸಂಸ್ಕೃತಿಗಳು ಪತನಹೊಂದುವುದು ಖಂಡಿತ ಎಂಬ ಮಾತು ಕೇಳಬರುತ್ತಿದೆ. ಈ ನಿಟ್ಟಿನಲ್ಲಿ ಅನೇಕ ಧರ್ಮಯೋಧರು ಕಾರ್ಯತತ್ಪರರಾಗಿದ್ದಾರೆ. ಕ್ಷಿಪ್ರ ಕಾರ್ಯಾಚರಣೆಯಲ್ಲಿ ದ್ವಿಚಕ್ರಾರೂಢರಾಗಿ ಬಂದು ಕೆಲವು ಬುದ್ಧಿಜೀವಿಗಳಿಗೆ ಈಗಾಗಲೇ ಸ್ವರ್ಗದ (?) ದಾರಿಯನ್ನು ತೋರಿಸಿದ್ದಾರೆ. ಬದುಕಿ ಉಳಿದವರಲ್ಲಿ ಕೆಲವರು ಹಳೆಯ ಗಾಂಧಿಮಾರ್ಗವನ್ನು ನೆಚ್ಚಿ ತಮಗೆ ಬಂದ ಪ್ರಶಸ್ತಿಗಳನ್ನು ಹಿಂತಿರುಗಿಸಿ ಸಾಂಕೇತಿಕವಾಗಿ ಪ್ರತಿಭಟಿಸಿದರೆ ಅದನ್ನೂ ಬುದ್ಧಿಜೀವಿಗಳ ಉದ್ಧಟತನವೆಂದು ಗ್ರಹಿಸಲಾಗಿದೆ. 'ಶಾಯಿಸ್ನಾನ'ವು ನಮ್ಮ ಪ್ರಜಾಪ್ರಭುತ್ವವು ಇತ್ತೀಚೆಗೆ ಒಪ್ಪಿಕೊಂಡ ಗೌರವಯುಕ್ತ ಪ್ರತಿಭಟನಾ ವಿಧಾನ ಎಂದಾದಮೇಲೆ ಬುದ್ಧಿಜೀವಿಗಳ ಗಾಂಧಿಪ್ರಿಯ ಪ್ರತಿಭಟನೆಯು ಅಧಿಕಾರದ ಚುಕ್ಕಾಣಿಯನ್ನು ಹಿಡಿದವರ ಮೇಲೆ ಹೇಗೆ, ಎಷ್ಟು ಪ್ರಭಾವ ಬೀರಿದೆ ಎನ್ನುವುದು ಕಷ್ಟ . ಇತ್ತೀಚೆಗೆ ದೇಶದಲ್ಲಿ ಅಸಹನೆ ಹೆಚ್ಚುತ್ತಿದೆ ಎಂದು ಕೆಲವರು ಗೊಣಗಿಕೊಂಡರೆ ಅಥವಾ ಅವರಲ್ಲಿ ಕೆಲವರು ಧೈರ್ಯವಾಗಿ ತಮ್ಮ ಅಭಿಪ್ರಾಯಗಳನ್ನು ಅಥವಾ ಅನುಭಗಳನ್ನು ಪ್ರಕಟಿಸಿದರೆ ಅವರಿಗೆ ದೇಶದ್ರೋಹಿಗಳೆಂಬ ಹಣೆಪಟ್ಟಿ ಅಂಟುವ ಸಾಧ್ಯತೆ ಹೆಚ್ಚು. ಅವರಲ್ಲಿ ಯಾರಾದರೂ ಮುಸ್ಲಿಮರೆಂದಾದರೆ ಅವರನ್ನು ಪಾಕಿಸ್ತಾನಕ್ಕೆ ರವಾನಿಸುವ ಆವಶ್ಯಕತೆಯ ಬಗ್ಗೆ ಆವೇಶಪೂರಿತ ಮಾತುಗಳು ಕೇಳಬರುತ್ತವೆ.

ನೀಡಿದ್ದು ಮಾತ್ರವಲ್ಲ, ನೆರವೇರಿಸಿದ ಕೂಡ. ಅದೂ ಎಷ್ಟು ಬಾರಿ! ಮಹಾವಿಷ್ಣುವಿನದ್ದೇ ದಶಾವತಾರಗಳು. ಉಳಿದವರದ್ದು ಬೇರೆ. ನಮ್ಮ ದೇಶ ಪುಣ್ಯಭೂಮಿ ಎಂದೆನ್ನಿಸಿಕೊಂಡಿದೆ. ಅದನ್ನು ನಾನೂ ನಂಬಿದ್ದೇನೆ. ಅದು ನನ್ನ ದೇಶ, ಆದ ಕಾರಣ ಅದು ನನಗೆ ಪುಣ್ಯಭೂಮಿ. ಆದರೆ ಅದಕ್ಕೆ ಕೆಲವರು ಪುರಾವೆ ನಿಡುವುದು ಹೀಗೆ : "ನೋಡಿ ! ದೇವರ ಎಲ್ಲಾ ಅವತಾರಗಳೂ ಆದದ್ದು ಇಲ್ಲೇ ಅಲ್ಲವೇ ? ಬೇರೆಲ್ಲಿ ಆಗಿದೆ ಹೇಳಿ ?" ಈ ಆಸ್ತಿಕ ಹುಮ್ಮಸ್ಸಿನಲ್ಲಿ ಸಣ್ಣ ಮುಜುಗರದ ಅಂಶವಿದೆ. ತನ್ನ ಎಲ್ಲಾ ಅವತಾರಗಳನ್ನು ಎತ್ತುವ ಅನಿವಾರ್ಯ, ತುರ್ತುಗಳು ಇಲ್ಲಿ ಮಾತ್ರ ಬಂತೇ? ಭಗವಂತನೇ ಕೊಟ್ಟ ಕಾರಣವನ್ನು ನಾವು ಒಪ್ಪುವುದಾದರೆ, ಅವನ ಅವತಾರಗಳ ಬಗ್ಗೆ ಅಥವಾ ನಮ್ಮ ಬಗ್ಗೆ ನಾವು ಹೆಚ್ಚು ಹೆಮ್ಮೆಪಡುವ ಸಂದರ್ಭವಿಲ್ಲ. ಅದು ಬಿಡಿ. ದೇವರ ಪ್ರಯತ್ನ ಎಷ್ಟಿದ್ದರೂ ಗೋವಿನ ರೂಪದ ಧರ್ಮ ಒಂಟಿಕಾಲಿನಲ್ಲಿ ಕುಂಟುವುದು ತಪ್ಪಲಿಲ್ಲ! ಇದನ್ನು ದೇವರ ಸೋಲು ಎನ್ನಬೇಕೇ, ಅಥವಾ ಮಾನವನ ಹೆಚ್ಚುಗಾರಿಕೆ ಎಂದು ಗ್ರಹಿಸಬೇಕೇ ಎಂದು ತಿಳಿಯುತ್ತಿಲ್ಲ.

## ನಕಾರ

ಭಾರವಾದ
ಹೃದಯಕ್ಕೆ
ಭಾಷೆಗಳೇ ಇಲ್ಲ
ಕಾರಣ
ಬಾಯಿಲ್ಲ

ವ. ಉಮೇಶ ಕಾರಂತ
ಮಂಗಳೂರು

'ಬುದ್ಧಿಜೀವಿ' ಎಂದರೆ ಯಾರು ? ಆಧುನಿಕ, ವಿಜ್ಞಾನ–ತಂತ್ರಜ್ಞಾನ ಯುಗದಲ್ಲಿರುವ ನಮ್ಮಲ್ಲಿ ಇದು ಹೀನಾರ್ಥಕವಾಗಿ ಕಂಗೊಳಿಸುವುದು ಗಮನಾರ್ಹ. ಅದು ವಿಪರ್ಯಾಸವೂ ಹೌದು. ಬುದ್ಧಿ ಇದ್ದವರು ಯಾರೂ ತಮ್ಮನ್ನು ಬುದ್ಧಿಜೀವಿ ಎಂದುಕೊಳ್ಳುವುದಿಲ್ಲ. ಅದು ಇನ್ನೊಬ್ಬರು ಅಂಟಿಸಿದ ಅಣಕು ಹಣೆಪಟ್ಟಿ. ಅದರಲ್ಲಿ ಅನೇಕ ಸೂಚನೆಗಳಿರಲು ಸಾಧ್ಯ. ಬುದ್ಧಿಯೇ ತಮ್ಮ ಮೂಲ ಸರಕಾಗಿದ್ದು, ಅದನ್ನು ಬೇಕಾದಾಗ, ಬೇಕಾದಲ್ಲಿ ಬಳಸಿಕೊಂಡು ಬದುಕುವ ಜೀವಿ, ಎಂದುಕೊಳ್ಳಲು ಸಾಧ್ಯ. ಅಥವಾ ಬುದ್ಧಿ ಇರುವವರ ಬಗ್ಗೆ ಅದು ಇಲ್ಲದವರು ಪ್ರಾಮಾಣಿಕವಾಗಿ ಒಳಗೊಳಗೇ ಕರುಬಿ ನೀಡಿದ ಪ್ರಶಸ್ತಿಪತ್ರ ಎನ್ನಬಾರದೇಕೆ ? ಅಥವಾ ತಮ್ಮ ವಿಚಾರ–ನಂಬಿಕೆಗಳನ್ನು ಒಪ್ಪದ ಇನ್ನೊಂದು ಬಗೆಯ ವಿಚಾರ–ನಂಬಿಕೆಗಳನ್ನು ಆಲಂಗಿಸಿಕೊಂಡು ನಮಗೆ ಸಡ್ಡುಹೊಡೆಯುವ ಒಂದು ಪ್ರತಿರೋಧಿ ಬಣ ಎಂದುಕೊಳ್ಳಬಹುದು. 'ಮೂಢನಂಬಿಕೆ'ಗಳು ಎಂದಾಗ ಇದೇ ರೀತಿಯ ತಗಾದೆಗಳು ಏರ್ಪಡುತ್ತವೆ. ಯಾರೂ ತಮ್ಮ ನಂಬಿಕೆಗಳನ್ನು ಮೂಢನಂಬಿಕೆ ಗಳೆನ್ನುವುದಿಲ್ಲ. ಅದು ಹಾಗೆ ಎಂದೆನ್ನಿಸುವುದು ಆ ನಂಬಿಕೆಗಳನ್ನು ಒಪ್ಪದ ಮಂದಿಗೆ ಮಾತ್ರ. ನಂಬುವವರಿಗೆ ಅವು ಮಾನಸಿಕ ಊರುಗೋಲುಗಳು. ವೈಚಾರಿಕತೆಯ ನೆವದಲ್ಲಿ ಅವುಗಳನ್ನೇಕೆ ಅವರಿಂದ ಕಸಿದುಕೊಳ್ಳಬೇಕು ? ಕೆಲವರಿಗೆ ವೈಚಾರಿಕತೆಯೇ ಮುಖ್ಯವಾದರೆ ಇನ್ನು ಕೆಲವರಿಗೆ ಅವರ ನಂಬಿಕೆಗಳೇ ಶ್ರೇಷ್ಠ. ಒಬ್ಬರು ಇನ್ನೊಬ್ಬರ ನಿಲುವುಗಳನ್ನು ದುರಸ್ತಿಮಾಡಲು ಅತಿರೇಕ ಆವೇಶ ತೋರಿದರೆ ಅವರಿಬ್ಬರಿಗಾಗಲೀ ಅವರೊಂದಿಗೆ ಇರುವವರಿಗಾಗಲೀ ಕ್ಷೇಮವಿಲ್ಲ. ಎಲ್ಲಾ ಕಾಲದಲ್ಲೂ ವೈಚಾರಿಕತೆ–(ಮೂಢ)ನಂಬಿಕೆಗಳು ಪೂರ್ಣ ಸೌಖ್ಯದಿಂದಲ್ಲದಿದ್ದರೂ ಸಹಬಾಳ್ವೆಯಲ್ಲಂತೂ ಬದುಕಿದ್ದವು. ಸರ್ ಐಸ್ಯಾಕ್ ನ್ಯೂಟನ್‌ನಂಥ ಶ್ರೇಷ್ಠ ವಿಜ್ಞಾನಿಯೂ ರಸವಿದ್ಯೆಯ ಮೇಲೆ ನಂಬಿಕೆಯನ್ನಿಟ್ಟುಕೊಂಡಿದ್ದ. ಆದರೆ ಈಗ ರಸವಿದ್ಯೆಯನ್ನು ಅರಸಿಕೊಂಡು ಹೋಗುವ ಹುಂಬರು ತೀರ ವಿರಳ. ಆದರೆ ನ್ಯೂಟನ್‌ನ ವೈಜ್ಞಾನಿಕತೆಯು ವಿಜ್ಞಾನವನ್ನು ಮೂಲಭೂತ ನೆಲೆಯಲ್ಲಿ ಮುಂದುವರಿಸಿತು ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಭೂಮಿ ಗೋಲಾಕಾರವಾಗಿದೆ, ಅದು ಸೂರ್ಯನ ಸುತ್ತು ಬರುವ ಗ್ರಹಗಳಲ್ಲಿ ಒಂದು ಎಂದು ಖಗೋಳಶಾಸ್ತ್ರಜ್ಞರು ಹೇಳಿದಾಗ ಅವರ ಮೇಲೆ ರೇಗಿಬಿದ್ದು ಅವರಿಗೆ ಸಾವೇ ಶಿಕ್ಷೆ ಎಂದು ಘೋಷಿಸಿದವರು ಹದಿನಾರನೇ ಶತಮಾನದ ಯುರೋಪಿನ ಜನ ಹಾಗೂ ಅವರ ಆಲೋಚನಾ ಕ್ರಮಗಳನ್ನು ಹತೋಟಿಯಲ್ಲಿಟ್ಟುಕೊಂಡ ಚರ್ಚು. ಯುರೋಪಿನಲ್ಲಿ ಚರ್ಚಿನ ಯಾಜಮಾನ್ಯ ಅನೇಕ ಜ್ಞಾನಪ್ರಕಾರಗಳಿಗೆ ಭಾರವಾದ ಸಂಕೋಲೆಗಳನ್ನು ತೊಡಿಸಿತ್ತು. ಹೊಸ ವಿಚಾರಗಳನ್ನು ಹಿಚುಕಿಹಾಕುವ, ಅವುಗಳ ಪ್ರವರ್ತಕರನ್ನು ದಮನ ಮಾಡುವ ಕೆಲಸವನ್ನು ಮಾಡಿತ್ತು. ಹಾಗಿದ್ದೂ ಹೊಸ ವಿಚಾರಗಳ ಸೃಷ್ಟಿಯನ್ನು ನಿಲ್ಲಿಸಲಾಗಲಿಲ್ಲ. ಹಿಂದೆ ನಮ್ಮಲ್ಲಿ ಗಾಢವಾಗಿ ನೆಲೆಸಿದ್ದ ಅನೇಕ ನಂಬಿಕೆಗಳು ಈಗ ಹುಸಿಯಾಗಿವೆ, ಬಹುತೇಕ ಮರೆಯಾಗಿವೆ. ಆದರೆ ನೆಲೆಯಿಲ್ಲದ ನಂಬಿಕೆಗಳನ್ನು ಬಹಳ ಕಾಲ ಉಳಿಸಿಕೊಳ್ಳಲು ಅಸಾಧ್ಯ, ಅವು ತಾನೇ ತಾನಾಗಿ ಕಳಚಿ ಬೀಳುತ್ತವೆ.

ಇತ್ತೀಚೆಗೆ ಆಸ್ತಿಕ ಧರ್ಮಗಳು ನಾಸ್ತಿಕರ ಆಕ್ರಮಣವನ್ನು ಅನುಭವಿಸುತ್ತಿವೆ, ಅದರಿಂದ ಆಸ್ತಿಕ ಧರ್ಮಗಳು ದೊಡ್ಡ ಸವಾಲುಗಳನ್ನು ಎದುರಿಸುತ್ತಿವೆ ಎಂಬ ಚಿತ್ರಣ ಪ್ರಸಾರಗೊಳ್ಳುತ್ತಿದೆ. ಇದು ಬುದ್ಧಿಜೀವಿಗಳ ಹುನ್ನಾರ ಎನ್ನಲಾಗುತ್ತಿದೆ. ವೈಚಾರಿಕತೆಯನ್ನು ನಾಸ್ತಿಕತೆಗೆ ಸಮೀಕರಿಸಿ, ಅವೆರಡೂ ನಮ್ಮ ಧಾರ್ಮಿಕ ನೆಲೆಗಟ್ಟನ್ನು, ಸಾಂಸ್ಕೃತಿಕ ಬುನಾದಿಯನ್ನು ನಾಶಗೊಳಿಸುವಂಥವು ಎಂದು ಘೋಷಿಸಿ, ವೈಚಾರಿಕತೆಯು ಒಂದು ಹೊಸ ಬಗೆಯ ಭಯೋತ್ಪಾದನೆಯನ್ನು ಸೃಷ್ಟಿಸುತ್ತಿದೆ, ಇದನ್ನು ನಿಗ್ರಹಿಸದಿದ್ದರೆ ದೇಶದ ಧರ್ಮ, ಸಂಸ್ಕೃತಿಗಳು ಪತನಹೊಂದುವುದು ಖಂಡಿತ ಎಂಬ ಮಾತು ಕೇಳಿಬರುತ್ತಿದೆ. ಈ ನಿಟ್ಟಿನಲ್ಲಿ ಅನೇಕ ಧರ್ಮಯೋಧರು ಕಾರ್ಯತತ್ಪರರಾಗಿದ್ದಾರೆ. ಕ್ಷಿಪ್ರ ಕಾರ್ಯಾಚರಣೆಯಲ್ಲಿ ದ್ವಿಚಕ್ರಾರೂಢರಾಗಿ ಬಂದು ಕೆಲವು ಬುದ್ಧಿಜೀವಿಗಳಿಗೆ ಈಗಾಗಲೇ ಸ್ವರ್ಗದ (?) ದಾರಿಯನ್ನು ತೋರಿಸಿದ್ದಾರೆ. ಬದುಕಿ ಉಳಿದವರಲ್ಲಿ ಕೆಲವರು ಹಳೆಯ ಗಾಂಧಿಮಾರ್ಗವನ್ನು ನೆಚ್ಚಿ ತಮಗೆ ಬಂದ ಪ್ರಶಸ್ತಿಗಳನ್ನು ಹಿಂತಿರುಗಿಸಿ ಸಾಂಕೇತಿಕವಾಗಿ ಪ್ರತಿಭಟಿಸಿದರೆ ಅದನ್ನೂ ಬುದ್ಧಿಜೀವಿಗಳ ಉದ್ಧಟತನವೆಂದು ಗ್ರಹಿಸಲಾಗಿದೆ. 'ಶಾಯಿಸ್ನಾನ'ವು ನಮ್ಮ ಪ್ರಜಾಪ್ರಭುತ್ವವು ಇತ್ತೀಚೆಗೆ ಒಪ್ಪಿಕೊಂಡ ಗೌರವಯುಕ್ತ ಪ್ರತಿಭಟನಾ ವಿಧಾನ ಎಂದಾದಮೇಲೆ ಬುದ್ಧಿಜೀವಿಗಳ ಗಾಂಧಿಪ್ರಿಯ ಪ್ರತಿಭಟನೆಯು ಅಧಿಕಾರದ ಚುಕ್ಕಾಣಿಯನ್ನು ಹಿಡಿದವರ ಮೇಲೆ ಹೇಗೆ, ಎಷ್ಟು ಪ್ರಭಾವ ಬೀರಿದೆ ಎನ್ನುವುದು ಕಷ್ಟ. ಇತ್ತೀಚೆಗೆ ದೇಶದಲ್ಲಿ ಅಸಹನೆ ಹೆಚ್ಚುತ್ತಿದೆ ಎಂದು ಕೆಲವರು ಗೊಣಗಿಕೊಂಡರೆ ಅಥವಾ ಅವರಲ್ಲಿ ಕೆಲವರು ಧೈರ್ಯವಾಗಿ ತಮ್ಮ ಅಭಿಪ್ರಾಯಗಳನ್ನು ಅಥವಾ ಅನುಭಗಳನ್ನು ಪ್ರಕಟಿಸಿದರೆ ಅವರಿಗೆ ದೇಶದ್ರೋಹಿಗಳೆಂಬ ಹಣೆಪಟ್ಟಿ ಅಂಟುವ ಸಾಧ್ಯತೆ ಹೆಚ್ಚು. ಅವರಲ್ಲಿ ಯಾರಾದರೂ ಮುಸ್ಲಿಮರೆಂದಾದರೆ ಅವರನ್ನು ಪಾಕಿಸ್ತಾನಕ್ಕೆ ರವಾನಿಸುವ ಆವಶ್ಯಕತೆಯ ಬಗ್ಗೆ ಆವೇಶಪೂರಿತ ಮಾತುಗಳು ಕೇಳಿಬರುತ್ತವೆ. ನಮ್ಮ ದೇಶವು ಸಹನಾಶೀಲ ದೇಶವೇ ಅಥವಾ ಅಸಹನೆಯ ಕೂಪವೇ ಎಂಬುದರ ಬಗ್ಗೆ ಅರ್ಥಪೂರ್ಣ, ಸಮಗ್ರ ಚರ್ಚೆ ಸ್ವಲ್ಪ ಕಷ್ಟ. ನಮ್ಮ ದೇಶ ಬಹಳ ದೊಡ್ಡ ದೇಶ. ಇಲ್ಲಿರುವ ವೈವಿಧ್ಯ, ಸಂಕೀರ್ಣತೆಗಳನ್ನು ಗುರುತಿಸಿ ಯಾವುದೇ ಸುಲಭ ನಿರ್ಧಾರಕ್ಕೆ ಬರುವುದು ಸುಲಭವಲ್ಲ. ನಮ್ಮಲ್ಲಿ ಸಹನೆ ಸಾಕಷ್ಟು ಇತ್ತು, ಆದರೆ ಈಗ ಅದನ್ನು ಕಳೆದುಕೊಳ್ಳುತ್ತಿದ್ದೇವೆ, ಎಂಬುದು ಕೆಲವರ ಆತಂಕ. ನಮ್ಮ ದೇಶವು ಸಹನಾಶೀಲ ದೇಶ ಎಂಬುದು ಕೇವಲ ನಮ್ಮ ದೃಢನಂಬಿಕೆ ಮೇಲೆ ನಿಂತಿಲ್ಲ; ಅಂತಹ ನಂಬಿಕೆ ನಮ್ಮ ರಾಷ್ಟ್ರಪ್ರೇಮದ ದ್ಯೋತಕವಲ್ಲ; ಅದು ಸೃಷ್ಟಿಸಿದ ಭ್ರಮೆಯಾಗಬಹುದು. ದೇಶದಲ್ಲಿ ಅಸಹನೆಯು ಹೆಚ್ಚುತ್ತಿದೆಯೇ ಎಂಬುದು ದೇಶದ ವಿದ್ಯಮಾನಗಳನ್ನು ನೋಡಿದಾಗ ವೇದ್ಯವಾಗುವ ವಿಚಾರ.

ಇನ್ನೊಂದು ಮಾತಿದೆ. ಇಷ್ಟು ದೊಡ್ಡ ದೇಶದಲ್ಲಿ ಎಲ್ಲೋ ಅಲ್ಲಿ ಇಲ್ಲಿ ಏನೋ ಆಗಬಾರದ ಘಟನೆಗಳು ಸಂಭವಿಸಿದರೆ ಅದಕ್ಕೆ ಯಾಕಿಷ್ಟು ಗದ್ದಲ ? ಅವುಗಳನ್ನು ಉತ್ಪ್ರೇಕ್ಷಿಸಿ, ಅವುಗಳ ಬಗ್ಗೆ ಉದ್ದುದ್ದ ಮಾತನಾಡುವುದು, ಬರೆಯುವುದು ಅಸಹನೆಯಲ್ಲವೇ ? ಇದರಿಂದ ದೇಶದ ಒಳ್ಳೆಯ ಹೆಸರನ್ನು ಕೆಡಿಸಿ ದಂತಾಗುವುದಿಲ್ಲವೇ ? ದೇಶದ ಘನತೆಯನ್ನು, ಒಳ್ಳೆಯ ಹೆಸರನ್ನು ಕಾಪಾಡುವ ಗುರುತರ ಜವಾಬ್ದಾರಿ ಯಾರದ್ದು ? ಅಸಹನೆಯ ವಕ್ತಾರರದ್ದೇ ಅಥವಾ ಅದನ್ನು ಪ್ರತಿಭಟಿಸುವವರದ್ದೇ ? ಪರೀಕ್ಷೆಯಲ್ಲಿ ವಿದ್ಯಾರ್ಥಿಗಳು ನಕಲು ಮಾಡುವ ಪ್ರವೃತ್ತಿಯನ್ನು ಅಧ್ಯಾಪಕರು ನಿಲ್ಲಿಸಿ, ತಪ್ಪಿತಸ್ಥರನ್ನು ಶಿಕ್ಷಿಸಬೇಕೇ ಅಥವಾ ಇದು ಬಹಿರಂಗವಾದರೆ ನಮ್ಮ ಶಾಲೆಯ ಒಳ್ಳೆಯ ಹೆಸರು ಹಾಳಾಗುತ್ತಲ್ಲಾ ಎಂದು ತೆಪ್ಪಗಿರಬೇಕೇ ? ಇದು ನೈತಿಕತೆಯ ವಿಚಾರ. ಅಸಹನೆ ದೇಶದ ಹೆಸರನ್ನು ಹಾಳುಕೆಡಹುವಂಥದ್ದು; ಅದರ ವಿರುದ್ಧ ಕೇಳುವ, ನಡೆಸುವ ಪ್ರತಿಭಟನೆಯಲ್ಲ. ಅಲ್ಲಲ್ಲಿ ನಡೆದ ಕೆಲವು ಘಟನೆಗಳಿಂದ ದೇಶದಲ್ಲಿ ಅಸಹನೆ ಹೆಚ್ಚಾಗುತ್ತಿದೆ ಎಂಬ ಭಾವನೆ ಅವಸರದ್ದು; ಅದನ್ನು ದೇಶಕ್ಕೆ ಅನ್ವಯಿಸಿ ಮಾತನಾಡುವುದು ತಪ್ಪು ಎಂಬ ಮಾತಿದೆ. ಅಂದರೆ ಇಂತಹ ಘಟನೆಗಳು ಹೆಚ್ಚು ಸಾಮಾನ್ಯವಾಗಿ ಘಟಿಸುವಂತೆ ಅಥವಾ ಅವು ಇನ್ನೂ ಹೆಚ್ಚಾಗುವವರೆಗೆ ಕಾಯಬೇಕೇ ? ಹಾಗಾದರೆ ಬೇರೆ ದೇಶದಿಂದ ಯಾವುದೋ ಒಂದು ಕೆಟ್ಟ ವೈರಸ್ ಯಾರೋ ಒಬ್ಬ ಪ್ರಯಾಣಿಕನ ಮೂಲಕ ಭಾರತದೊಳಗೆ ನುಸುಳಿಬಂದಿದೆ ಎಂಬ ವಾರ್ತೆಯನ್ನು ಓದಿ ನಾವೇಕೆ ಆತಂಕಪಡಬೇಕು ? ಅದು ದೇಶದಲ್ಲಿ ಸಾಕಷ್ಟು ಹಬ್ಬಿ ಅದೆಷ್ಟು ದಾಂಧಲೆ ಮಾಡಲು ಸಾಧ್ಯ ಎಂದು ಯಾಕೆ ಕಾದು ನೋಡಬಾರದು ? ಈ ವಾದ ಎಷ್ಟು ಸರಿ ?

ನಾಸ್ತಿಕರಿಂದ ನಮ್ಮ ಧರ್ಮಕ್ಕೆ ಬಹು ದೊಡ್ಡ ಅಪಾಯ; ಅವರೇ ನಿಜವಾದ ಆತಂಕವಾದಿಗಳು, ಅಂತಹ ಬುದ್ಧಿಜೀವಿಗಳನ್ನು ಗಡೀಪಾರು ಮಾಡಿ ಧರ್ಮರಕ್ಷಣೆಯನ್ನು ಮಾಡಬೇಕು ಎಂದು ಇತ್ತೀಚೆಗೆ ಓರ್ವ ಮಠಾಧಿಪತಿಗಳು ಅಪ್ಪಣೆ ಕೊಡಿಸಿದ್ದನ್ನು ವಾರ್ತೆಯಾಗಿ ಓದಿದ್ದೆ. ಆದರೆ ಇಲ್ಲಿ ಕೆಲವು ಸಂಶಯಗಳು ನನ್ನನ್ನು ಅಣಕಿಸತೊಡಗಿದವು. ನಮ್ಮ ಸಮಾಜವನ್ನು ನೋಡಿ. ಪ್ರಾಮಾಣಿಕವಾಗಿ ನೋಡಿ. ಇಲ್ಲಿರುವ ಹೆಚ್ಚು ಮಂದಿ ಆಸ್ತಿಕರು. ಶೇಕಡಾವಾರು ಗಣತಿ ಅಸಾಧ್ಯವಾಗಬಹುದೇನೋ. ಆದರೆ ಅಲ್ಲಲ್ಲಿ ಕೆಲವು ಮಂದಿಯನ್ನು ಹೊರತುಪಡಿಸಿದರೆ ನಮ್ಮ ಸಮಾಜದಲ್ಲಿ ಕಂಗೊಳಿಸುವವರು ಆಸ್ತಿಕರೇ. ನಮ್ಮಲ್ಲಿ ಎಲ್ಲಾ ಧರ್ಮಗಳು ಆಸ್ತಿಕ ಧರ್ಮಗಳೇ. ಕೆಲವು ಮೊದಮೊದಲು ಆಗಿರಲಿಲ್ಲ. ಆದರೆ ಮುಂದೆ ಆಸ್ತಿಕ ಧರ್ಮಗಳಾಗಿ ಮಾರ್ಪಾಡಾದವು. ಜೈನಧರ್ಮದಲ್ಲಿ ದೇವರಿಗೆ ಸ್ಥಾನವಿದ್ದಿಲ್ಲ. ಆದರೆ ನಂತರದಲ್ಲಿ ತೀರ್ಥಂಕರರಿಗೆ ಆ ಸ್ಥಾನ ಪ್ರಾಪ್ತವಾಗಿ ಆರಾಧನೆಗಳಿಗೆ ಒಳಗಾದರು. ಇತರ ದೇವರುಗಳೂ ಹುಟ್ಟಿಕೊಂಡರು. ಬುದ್ಧನು ತಾನಾಗಿ ದೇವರ ಗೋಜಿಗೆ ಹೋಗಲಿಲ್ಲ. ದೇವರಿಲ್ಲದೆಯೂ ಜನ ಜ್ಞಾನಿಗಳಾಗಬಹುದು, ಒಳ್ಳೆಯವರಾಗಬಹುದು ಎಂದು ನಂಬಿದ್ದ. ಆದರೆ ಅವನ ನಂತರ ಅವನೇ ದೇವರಾದ. ಅವನ ಮೂರ್ತಿಗಳನ್ನು ಸ್ಥಾಪಿಸಿ ಅವನನ್ನು ಅವನ ಭಕ್ತರು ಪೂಜೆ ಮಾಡತೊಡಗಿದರು. ಪ್ರಾಯಶಃ ಜನರು ತಮಗೆ ಆವಶ್ಯಕತೆ ಕಂಡಾಗ ದೇವರನ್ನು ಸೃಷ್ಟಿಸಿ, ಆರಾಧಿಸಿ, ತಮ್ಮನ್ನು ರಕ್ಷಿಸಯ್ಯಾ ಎನ್ನುತ್ತಾರೆ. ಕೆಲವೊಮ್ಮೆ ಇದ್ದ ದೇವರುಗಳು ಜನರ ಆವಶ್ಯಕತೆಗಳನ್ನು ಪೂರೈಸುವಲ್ಲಿ ಸೋಲುತ್ತಾರೆ. ಆದುದರಿಂದ ಹೊಸ ದೇವರ ಸೃಷ್ಟಿಯಾಗುತ್ತದೆ. ಹಳೇ ದೇವರುಗಳಿಗೆ ಕಡ್ಡಾಯ ನಿವೃತ್ತಿಯನ್ನು ಘೋಷಿಸಲಾಗುತ್ತದೆ, ಇಲ್ಲವೇ ಅವರೇ ನೇಪಥ್ಯಕ್ಕೆ ಸಲ್ಲುತ್ತಾರೆ. ಕೆಲವೊಮ್ಮೆ ಹಳೇ ದೇವರುಗಳು ಹೊಸ ಹೆಸರಿನಲ್ಲಿ ಹೊಸ ದಿರಿಸಿನಲ್ಲಿ ಕಾಣತೊಡಗುತ್ತಾರೆ. ಅವರ ಖಾತೆಗಳೂ ಬದಲಾಗುತ್ತವೆ. ಈಜಿಪ್ಟ್, ಬೆಬಿಲೋನ್, ಗ್ರೀಸ್, ರೋಮ್, ಮೆಕ್ಸಿಕೊ, ಪೆರು ಮೊದಲಾದ ನಾಗರಿಕತೆಗಳಲ್ಲಿದ್ದ ಅಸಂಖ್ಯಾತ ದೇವರು-ದಿಂಡರು ಈಗಿಲ್ಲ. ನಮ್ಮ ವೇದಕಾಲದ ದೇವರುಗಳೂ ಈಗ ಚಲಾವಣೆಯಲ್ಲಿಲ್ಲ. ನಮ್ಮಲ್ಲಿ ಅಸಂಖ್ಯಾತ ದೇವರುಗಳಿಗೆ ಎಡೆಯಿರುವುದರಿಂದ ಹಳಬರ ನಿರ್ಗಮನ, ಹೊಸಬರ ಆಗಮನಗಳನ್ನು ಗಮನಿಸದೆಯೇ ಜನರು ತಮಗೆ ಸರಿ ಕಂಡಂತೆ ತಂತಮ್ಮ ದೇವರುಗಳನ್ನು ಆರಾಧಿಸುವುದನ್ನು ಕಾಣುತ್ತೇವೆ. ಹಿಂದೆ ನಮ್ಮ ಧರ್ಮಗಳು, ಆಚರಣೆಗಳು ಹೇಗಿತ್ತು ಎನ್ನುವುದು ಅಧ್ಯಯನ ಯೋಗ್ಯವಾಗಬಹುದು. ಆದರೆ ಧರ್ಮಗಳ ಸ್ವರೂಪ-ಕುರೂಪಗಳು ಈಗಿನ ನಂಬಿಕೆ, ಆಚರಣೆಗಳಿಗೆ ಸಂಬಂಧಿಸಿದ್ದು. ಹಾಗೆಂದು ಯಾವ ಧರ್ಮವೂ ಬದಲಾಗದೆ ಹಾಗೆಯೇ ಉಳಿದಿಲ್ಲ. ಆದರೆ ಎಲ್ಲಾ ಧರ್ಮಗಳೂ ತಾವು ಶ್ರೇಷ್ಠ, ಪರಿಪೂರ್ಣ, ಅಖಂಡ ಎಂಬ ನಂಬಿಕೆಯನ್ನು ಹೊಂದಿವೆ. ಅವುಗಳು ಬದಲಾಗಬಾರದು, ಹಾಗೊಮ್ಮೆ ಬದಲಾದರೆ ಅದೊಂದು ದೊಡ್ಡ ದುರಂತ ಎಂದು ನಂಬಿವೆ. ಹೀಗೆ ಆಸ್ತಿಕರ ಆಸ್ತಿಯಾದ ಈ ಎಲ್ಲಾ ಧರ್ಮಗಳು ಸಮಾಜದಲ್ಲಿ ಮೆರೆದಾಡುತ್ತಿವೆ. ದೊಡ್ಡದೊಡ್ಡ ದೇವಸ್ಥಾನಗಳು, ಚರ್ಚುಗಳು, ಮಸೀದಿಗಳು, ಗುರುದ್ವಾರಗಳು, ಅಲ್ಲಲ್ಲಿ ಅವುಗಳ ಅನೇಕ ಚಿಕ್ಕಪುಟ್ಟ ಆವೃತ್ತಿಗಳು, ಅವುಗಳನ್ನು ಪುನಃ ಕಟ್ಟಿ ಸಜ್ಜುಗೊಳಿಸುವ ಅಥವಾ ಕಟ್ಟಿದ್ದನ್ನು ಶುದ್ಧಗೊಳಿಸುವ ಕಾಯಕ, ಅದು ಸಾಲದ್ದಕ್ಕೆ ಭಜನಾ ಮಂಡಳಿಗಳು, ವರ್ಷವರ್ಷ ಉತ್ಸವಗಳು, ಹಬ್ಬಗಳು, ಸಮಾರಾಧನೆಗಳು, ಮನೆಗಳಲ್ಲಿ, ಸಾರ್ವಜನಿಕವಾಗಿ ನಡೆಯುವ ಪೂಜೆ, ಹೋಮಗಳು, ದೊಡ್ಡ, ಸಣ್ಣ ಮಠಗಳು, ಮಠಾಧಿಪತಿಗಳು, ಭಕ್ತರನ್ನು ಪ್ರಾರ್ಥನೆಗೆ ಆಹ್ವಾನಿಸುವ, ನಿದ್ರಿಸಿದ ದೇವರನ್ನು ಎಬ್ಬಿಸುವ ಬಗೆ, ದೇವರಿಗೆ ಆಭರಣ ತೊಡಿಸುವ, ವಜ್ರದ ಕಿರೀಟವನ್ನಿಡುವ, ಚಿನ್ನ-ಬೆಳ್ಳಿಯ ರಥಗಳನ್ನು ಆಯೋಜಿಸುವ ಕಾರ್ಯಕ್ರಮಗಳು – ಇನ್ನೂ ಅನೇಕ ಆಚಾರ-ವಿಚಾರಗಳು ನಮ್ಮ ಸಮಾಜದಲ್ಲಿ ಸಾಮಾನ್ಯವಾಗಿ ಕಾಣಸಿಗುವಂಥವು.

ಆಸ್ತಿಕತೆಯ ಈ ಮೆರೆದಾಟ, ಆಟೋಪಗಳನ್ನು ಇಲ್ಲಿರುವ ನಾಸ್ತಿಕತೆಗೆ ಹೋಲಿಸೋಣ. ನಮ್ಮಲ್ಲಿ ನಿಜವಾದ ನಾಸ್ತಿಕರೆಷ್ಟಿದ್ದಾರೆ ? ಅವರು ತಮ್ಮ ನಾಸ್ತಿಕತೆಯನ್ನು ಆಸ್ತಿಕರು ಜಾಹೀರುಗೊಳಿಸಲು ನಡೆಸಿದ ಪ್ರಯತ್ನಗಳನ್ನೇನಾದರೂ ಮಾಡಿದ್ದಾರೆಯೇ ? ಹೆಚ್ಚೆಂದರೆ ಅಲ್ಲಿ ಇಲ್ಲಿ ಭಾಷಣ ಮಾಡಿದ್ದಿರಬಹುದು. ಕೆಲವು ಪ್ರಬಂಧಗಳನ್ನೋ, ಪುಸ್ತಕಗಳನ್ನೋ ಬರೆದಿರಬಹುದು. ಆಸ್ತಿಕರು ತಮ್ಮ ಆಸ್ತಿಕತನವನ್ನು ಪ್ರತಿಪಾದಿಸುವಲ್ಲಿ ಮಾಡಿದ ಪ್ರಯತ್ನ, ಸದ್ದು-ಗದ್ದಲ, ಖರ್ಚುಗಳೇನನ್ನೂ ಮಾಡಿಲ್ಲ. ತಾವೇನೂ ಮಠಮಾನ್ಯಗಳನ್ನು ಕಟ್ಟಿಕೊಂಡಿಲ್ಲ. ಆದರೂ ಆಸ್ತಿಕರಿಗೆ ನಾಸ್ತಿಕರ ವಿರುದ್ಧ ಅಷ್ಟೇಕೆ ಅಸಹನೆ ? ಪರಸ್ಪರ ವಿಚಾರಗಳನ್ನು ಒಪ್ಪುವುದು ಬೇಡ, ಆದರೆ ಇಷ್ಟು ಆಕ್ರೋಶ ಏಕೆ ? ಎಲ್ಲರೂ ದೇವರನ್ನು ನಂಬುವವರೇ, ಆದರೆ ಕೆಲವು ಬುದ್ಧಿಜೀವಿಗಳು ಫ್ಯಾಶನ್‌ಗಾಗಿ ನಾಸ್ತಿಕರಂತೆ ನಟಿಸುತ್ತಾರೆ, ಅಷ್ಟೆ – ಎಂಬ ವಾದವಿದೆ. ಇದು ಆಸ್ತಿಕರಿಗೆ ಸಹಕಾರಿಯಲ್ಲ. ಫ್ಯಾಶನ್ನಿಗಾಗಿ ಆಸ್ತಿಕತೆಯನ್ನು ತೋರುವವರ ಸಂಖ್ಯಾಬಲ ಅಂತಹ ನಾಸ್ತಿಕರಿಂದ ಎಷ್ಟೋ ಪಟ್ಟು ಹೆಚ್ಚು. ತಮ್ಮ ದೈವಭಕ್ತಿಯನ್ನು ತೋರ್ಪಡಿಸಲು ಗ್ರೀನ್‌ರೂಮಿನಿಂದ ಸಾಕಷ್ಟು ಮೇಕಪ್ ಮಾಡಿಕೊಂಡು ಬರುವ ಮಂದಿ ನಮ್ಮ ಸಮಾಜದಲ್ಲಿ ಎಷ್ಟಿಲ್ಲ, ಹೇಳಿ. ಸಮಾಜವು ಬಹುತೇಕ ಆಸ್ತಿಕಾಧೀನವಾಗಿರುವಾಗ ತೀರ ಅಲ್ಪಸಂಖ್ಯೆಯಲ್ಲಿರುವ ನಾಸ್ತಿಕರ ವಿಚಾರಗಳ ಬಗ್ಗೆ ಅದು ಅಷ್ಟಾಗಿ ಆತಂಕ ಪಡುವುದಾದರೂ ಏಕೆ ? ತಮ್ಮ ಆಸ್ತಿಕತನವು ಅಷ್ಟು ಕ್ಷೀಣವೇ ? ನಾಯಿ ಬೊಗಳಿದರೆ ದೇವಲೋಕ ಹಾಳಾಗುತ್ತದೆಯೇ ಎಂಬ ನಿಲುವನ್ನು ಏಕೆ ತಾಳಬಾರದು ? ಆದರೆ ಹಾಗಾಗುತ್ತಿಲ್ಲ. ಇದು ಆಸ್ತಿಕರ ಭಕ್ತಿ, ಶ್ರದ್ಧೆಯ ಪ್ರಶ್ನೆಯಾಗಿ ಉಳಿದಿಲ್ಲ. ನಿಜವಾದ ಆಸ್ತಿಕ ತನ್ನ ದೇವರಿಗೆ ನಮಿಸುತ್ತಿರುತ್ತಾನೆ, ತನ್ನ ನೋವನ್ನು, ಗೋಳನ್ನು, ಆಶೋತ್ತರಗಳನ್ನು, ನಿವೇದಿಸುತ್ತಿರುತ್ತಾನೆ, ಸಾಂತ್ವನವನ್ನು ಕೇಳುತ್ತಿರುತ್ತಾನೆ. ಆತನಿಗೆ ಇತರರ ಗೊಡವೆ ಇಲ್ಲ. ಭಕ್ತ ಹಾಗೂ ಆತನ ದೇವರ ನಿಜವಾದ ಸಂಬಂಧ ತೀರ ಖಾಸಗಿ ನೆಲೆಯದ್ದು. ಆದರೆ ಸಮಾಜ ಹಾಗಾಗಲು ಬಿಡುತ್ತಿಲ್ಲ. ಅದರೊಳಗೆ ಅನೇಕ ಮಧ್ಯಸ್ಥಿಕೆಗಳು ನುಸುಳಿ ಬರುತ್ತವೆ. ಮಂತ್ರ ಹೇಳುವ ಅರ್ಚಕ, ಯಾವ ಯಜ್ಞ, ಪೂಜೆಗಳು ನಡೆಯಬೇಕು, ಯಾವ ಗುಡಿಗಳ ಪುನರ್‌ನಿರ್ಮಾಣಗಳು ಹೇಗೆ ನಡೆಯಬೇಕು ಎಂದು ನಿರ್ಧರಿಸುವ ಅಷ್ಟಮಂಗಲ ಪ್ರಶ್ನೆಯ ಪೊದುವಾಳರು, ಅಂತಹ ನಿರ್ಮಾಣಗಳಲ್ಲಿ ಇಂಜಿನಿಯರುಗಳನ್ನು ನಿಯಂತ್ರಿಸುವ ವಾಸ್ತುಶಾಸ್ತ್ರ ನಿಪುಣರು, ಹಾಗೂ ಇವೆಲ್ಲವನ್ನು ಪೂರೈಸಿದ ಸಂಭ್ರಮವನ್ನು ಕೇಸರಿಮಯ ಮಾಡುವ ಧರ್ಮೋತ್ಸಾಹಿಗಳು, ಸಮಾರಂಭಕ್ಕೆ ಬಂದು ಆಶೀರ್ವಚನ ಮಾಡುವ ಕಾವಿಧಾರಿಗಳು, ಇವರೆಲ್ಲರೂ ಆಸ್ತಿಕತನದೊಳಗೆ ಹೊಕ್ಕಿದ ಮಧ್ಯಸ್ಥಿಕೆಗಳ ಶಕ್ತಿಗಳು. ಅವುಗಳು ಯಾವುದೂ ನಮಗೆ ಬೇಡ, ಈ ಗದ್ದಲಗಳು ನಮಗಲ್ಲ; ನಮ್ಮ ದೇವರು ನಮ್ಮ ಹೃದಯದಲ್ಲಿದ್ದಾನೆ; ನಮ್ಮ ಮನದಲ್ಲಿದ್ದಾನೆ, ಮನೆಯಲ್ಲಿದ್ದಾನೆ, ನಮಗೆ ಅಷ್ಟೇ ಸಾಕು, ಎಂಬ ನಿಲುವನ್ನು ಯಾರಾದರೊಬ್ಬ ಆಸ್ತಿಕನು ತಳೆದನೆಂದಾದರೆ, ಇಂದಿನ ಆಸ್ತಿಕ ವಿಜೃಂಭಣೆಯ ನಮ್ಮ ಸಮಾಜದಲ್ಲಿ ಆತನ ಸ್ಥಾನವೇನು ? ದೇವರು ಗುಡಿಯಲ್ಲಿಲ್ಲ. ಆತ ಸರ್ವವ್ಯಾಪಿ; ಇಲ್ಲಿ, ಅಲ್ಲಿ, ಎಲ್ಲೆಲ್ಲಿಯೂ ಇದ್ದಾನೆ; ಪ್ರಹ್ಲಾದ ಹೇಳಿದಂತೆ ಕಂಬದಲ್ಲೂ ಇದ್ದಾನೆ, ಎಂದು ನಂಬಿದ ಆಸ್ತಿಕ ಶ್ರೇಷ್ಠನಿಗೆ ನಾಸ್ತಿಕ ಹಣೆಪಟ್ಟಿ ಕಟ್ಟಿಬಿಟ್ಟದ್ದು. ರವೀಂದ್ರನಾಥ ಠಾಗೋರರು 'ಗೀತಾಂಜಲಿ'ಯ ಕವನವೊಂದರಲ್ಲಿ ಹೇಳಿದಂತೆ, 'ದೇವರನ್ನು ಬೆವರು ಸುರಿಸಿ ದುಡಿಯುವ ಕಾರ್ಮಿಕನಲ್ಲಿ ಕಾಣು' ಎಂದರೆ, ಈತನೊಬ್ಬ ಮಾರ್ಕ್ಸಿಸ್ಟನೇ ಎಂಬ ಗುಮಾನಿ ಬೇರೆ.

ನಮ್ಮ ಧರ್ಮವನ್ನು, ದೇವರುಗಳನ್ನು ನಾಸ್ತಿಕರಿಂದ, ವಿಚಾರವಾದಿಗಳಿಂದ ರಕ್ಷಿಸಲು ಹೊರಟವರಿಗೆ ಇನ್ನೊಂದು ವಿಚಾರವನ್ನು ನೆನಪಿಸುವುದು ಅಗತ್ಯ. ಆಸ್ತಿಕ-ನಾಸ್ತಿಕರೊಳಗಿನ ಚರ್ಚೆ ಎರಡು ಸ್ತರಗಳಲ್ಲಿ ನಡೆಯಲು ಸಾಧ್ಯ. ಒಂದು, ಸೈದ್ಧಾಂತಿಕ ನೆಲೆಯಲ್ಲಿ. ಈ ಜಗತ್ತಿಗೊಬ್ಬ ಸೃಷ್ಟಿಕರ್ತ ಇದ್ದಾನೆಯೇ ? ಇರಬೇಕೆ ? ಸೃಷ್ಟಿಯು ಆತನಿಗೆ ಅಧೀನವೇ ? ಹೌದು ಎಂದವನು ಆಸ್ತಿಕ, ಇಲ್ಲ ಎಂದವನು ನಾಸ್ತಿಕ. ಈ ಚರ್ಚೆಯಲ್ಲಿ ಪುರಾವೆ, ಊಹೆ, ನಂಬಿಕೆ ಇತ್ಯಾದಿ ಅನೇಕ ವಿಷಯಗಳು ಹೊಯ್ದಾಡುತ್ತವೆ, ಹೊಡೆದಾಡುತ್ತವೆ. ವೈಜ್ಞಾನಿಕ ವಿಚಾರಗಳಿಗೆ ಹೆಚ್ಚು ಬೆಲೆ ನೀಡತಕ್ಕದ್ದೋ, ನಂಬಿಕೆಗಳಿಗೋ ? ವೈಜ್ಞಾನಿಕ ಸತ್ಯಗಳು ಹಂಗಾಮಿ ಸತ್ಯಗಳೇ. ಇಲ್ಲವೆಂದಾದರೆ ವಿಜ್ಞಾನದ ಸತ್ಯಗಳು ಕಾಲಕಾಲಕ್ಕೆ ಬದಲಾಗಲು ಸಾಧ್ಯವಿಲ್ಲ. ಆದರೆ ಅದು ವಿಜ್ಞಾನದ ದೌರ್ಬಲ್ಯವಲ್ಲ, ಶಕ್ತಿ. ವಿಜ್ಞಾನದ ಸತ್ಯಗಳು ನಿರ್ದಿಷ್ಟ ಪುರಾವೆಗಳ ಆಧಾರದ ಮೇಲೆ ನಿಂತಿರುವ ಸತ್ಯಗಳು; ಅವುಗಳು ಮಾನವನ ವೈಚಾರಿಕ ಶಕ್ತಿಗೆ ಎಟಕುವಂಥ ಸತ್ಯಗಳು. ವಿಜ್ಞಾನವು ನಾಸ್ತಿಕನ ಪಕ್ಷ

ವಹಿಸುತ್ತದೆಯೇ ಎಂಬುದು ಚರ್ಚಾಸ್ಪದ. ಯಾಕೆಂದರೆ, ವಿಜ್ಞಾನವು ಪ್ರಕೃತಿಯ ಬಗ್ಗೆ ವಿವರಣೆಗಳನ್ನು ನೀಡಬಹುದೇ ಹೊರತು ಕೊನೆಯ ತೀರ್ಮಾನವನ್ನು ನೀಡಲು ಸಾಧ್ಯವಿಲ್ಲ. ಅದು ತನ್ನ ಕೊನೆಯ ಉತ್ತರವನ್ನು ತೀರ್ಮಾನವಾಗಿ ನೀಡಿದರೆ ವಿಜ್ಞಾನದ ಸಮಾರೋಪವನ್ನು ಆಚರಿಸಿದಂತೆ. ಆದುದರಿಂದ ನಾಸ್ತಿಕನಲ್ಲಿ ಅನೇಕ ಪ್ರಶ್ನೆಗಳಿವೆ; ಕೆಲವು ಉತ್ತರಗಳಿವೆ, ಆದರೆ ಆ ಉತ್ತರಗಳಿಗೂ ಪ್ರಶ್ನೆಗಳಿವೆ. ಆಸ್ತಿಕನಲ್ಲೂ ಪ್ರಶ್ನೆಗಳಿವೆ, ಆದರೆ ಅವುಗಳಿಗೆ ನಿರ್ದಿಷ್ಟ, ಪ್ರಶ್ನಾತೀತ ಉತ್ತರಗಳಿವೆ. ಅಂದರೆ ನಾಸ್ತಿಕ–ಆಸ್ತಿಕರೊಳಗೆ ನಡೆಯುವ ಚರ್ಚೆ ಮುಗಿಯದ ಚರ್ಚೆ.

ಇಷ್ಟಾದರೂ ವಾಸ್ತವದಲ್ಲಿ, ಆಚರಣೆಯಲ್ಲಿ, ಆಸ್ತಿಕತನದೊಳಗೆ ಖಚಿತವಾದ ನಾಸ್ತಿಕತೆ ನೆಲೆಸಿದೆ. ದೇವರನ್ನು ನಂಬುವವರೆಲ್ಲರೂ ಅವರವರ ದೇವರನ್ನು ನಂಬುವವರು. ನಮ್ಮ ದೇವರು ನಮ್ಮನ್ನು ಕಾಪಾಡುತ್ತಾನೆ; ಆದುದರಿಂದ ಅವನಿಗೆ / ಅವಳಿಗೆ ನಮ್ಮ ಆರಾಧನೆ. ಇತರ ದೇವರುಗಳು ನಮಗೆ ಏನೂ ಅಲ್ಲ. ಇತರ ದೇವರುಗಳು ಕ್ಷುದ್ರ, ಅವುಗಳನ್ನು ನಂಬುವುದು, ಆರಾಧಿಸುವುದು ತಪ್ಪು, ಪಾಪ. 'ದೇವನೊಬ್ಬ, ನಾಮ ಹಲವು' ಎಂಬ ಮಾತನ್ನು ನಾವು ಕೇಳುತ್ತಾ ಬಂದರೂ ನಾಮವು (!) ಯಾವ ರೂಪದ್ದು, ಅದು ಯಾವ ಪಂಥವನ್ನು ಪ್ರತಿನಿಧಿಸಬೇಕು ಎಂಬ ತಗಾದೆಯನ್ನು ಸುಪ್ರೀಮ್ ಕೋರ್ಟಿನವರೆಗೆ ಒಯ್ದ ಭಕ್ತಶ್ರೇಷ್ಠರು ನಾವು! ಅಲ್ಲಾಹು ಮುಸ್ಲಿಮರ ದೇವರು; 'ಪರಲೋಕದಲ್ಲಿರುವ ತಂದೆ' ಕ್ರಿಶ್ಚನರನ್ನು ಕಾಪಾಡುವವನು; ವಾಹೆ ಗುರು ಸಿಖ್ ಪಂಗಡವನ್ನು ರಕ್ಷಿಸುವ ದೇವರು. ಹಿಂದುಗಳಲ್ಲಂತೂ ದೇವರುಗಳು ಅನೇಕ; ಒಬ್ಬರಲ್ಲದಿದ್ದರೆ ಇನ್ನೊಬ್ಬರು ರಕ್ಷಿಸಲಿ ಎಂಬ ನಿಲುವು ಅಲ್ಲಿ ನೆಲೆಸಿದೆ. ಹಾಗೆಂದು ದೇವರುಗಳು ಎಷ್ಟೇ ಇದ್ದರೂ ಅವರೊಳಗೆ ಒಂದು ಬಗೆಯ ಶಿಸ್ತು, ಅಂತರಗಳು ನೆಲೆಸಿವೆ. ಅವರು ಏನೇನು ಮಾಡತಕ್ಕದ್ದು ಎಂಬುದನ್ನು ನಿರ್ಧರಿಸಲಾಗಿದೆ; ಅವರಿಗೆ ನಿರ್ದಿಷ್ಟ ಖಾತೆಗಳನ್ನು ನೀಡಲಾಗಿದೆ. ಆದರೂ ಅವರಲ್ಲಿ ನಿಜವಾದ ದೇವರು ಯಾರು ಎಂಬ ವಿಚಾರದಲ್ಲಿ ಚರ್ಚೆ, ಜಗಳಗಳು ತಪ್ಪಲಿಲ್ಲ. ಕಡು ವೈಷ್ಣವರಿಗೆ ಶಿವ ಅಪಥ್ಯ; ಕಡು ಶೈವರಿಗೆ ವಿಷ್ಣು ಲೇವಡಿಗೆಗೆ ಮಾತ್ರ ಸರಿ. ವೇದಾಂತದಲ್ಲಿ ಎಲ್ಲವೂ ಬ್ರಹ್ಮಮಯ, ಅದು ಮಾತ್ರ ಸತ್ಯ ಎಂಬ ಮಾತಿದೆ. ಹಾಗಿದ್ದಲ್ಲಿ ಆಯಾ ಖಾತೆಗಳನ್ನು ವಹಿಸಿಕೊಂಡ ದೇವ–ದೇವತೆಗಳ ಬಗ್ಗೆ ಏನು ಹೇಳೋಣ ? ದೇವರ ಬಗ್ಗೆ ನಂಬಿಕೆ ವೈಚಾರಿಕತೆ, ತರ್ಕಗಳ ಮೇಲೆ ನಿಂತಿದೆಯೇ ಅಥವಾ ಅದು ಕೇವಲ ನಂಬಿಕೆಯೇ ? ಹಾಗೆ ನಂಬುವ ಮಂದಿ ತಮ್ಮ ನಂಬಿಕೆಗಳನ್ನು ತೀಕ್ಷ್ಣವಾದ ಒರೆಗೆ ಹಚ್ಚಿ ನೋಡುವಂಥವರೇ ? ಎಷ್ಟೋ ಬಾರಿ ನಮ್ಮ ನಂಬಿಕೆಗಳು ನಮಗೆ ಬಳುವಳಿಯಾಗಿ ಬಂದದ್ದು. ನಮ್ಮ ದೇವರುಗಳು ಯಾರು, ಅವರು ಎಂಥವರು, ಅವರನ್ನು ಹೇಗೆ ಒಲಿಸಿಕೊಳ್ಳಬೇಕು ಎಂಬೆಲ್ಲಾ ಸಂಹಿತೆಗಳು ನಮಗೆ ನಮ್ಮ ಹೆತ್ತವರಿಂದ, ನಮ್ಮ ಸಮುದಾಯದಿಂದ ಬಂದೊದಗಿದಂಥವು. ನಮ್ಮ ಸ್ವಂತ ಅಧ್ಯಯನದಿಂದ, ಅನುಭವದಿಂದ ಕಂಡುಕೊಂಡು ಮಾಡಿಕೊಂಡ ಆಯ್ಕೆಯಲ್ಲ. ನಮಗೆ ಬಳುವಳಿಯಾಗಿ ಬಂದ ನಂಬಿಕೆ, ಆಚರಣೆಗಳನ್ನು ಇನ್ನೊಬ್ಬರ ಮಾತುಗಳಿಂದ ಅಥವಾ ಅಧಿಕಾರ ಧ್ವನಿಯಿಂದ ಸಮರ್ಥನೆ ಮಾಡಿಕೊಳ್ಳುವುದು ಸಾಮಾನ್ಯ. ಮುಸ್ಲಿಮರು ಕುರಾನಿನಲ್ಲಿ, ಕ್ರಿಶ್ಚನರು ಬೈಬಲ್ಲಿನಲ್ಲಿ, ಹಿಂದುಗಳು ವೇದೋಪನಿಷತ್ತುಗಳಲ್ಲಿ ಹೇಳಿದ್ದನ್ನು ಕೇಳಿ ಅಥವಾ ಅಧ್ಯಯನ ಮಾಡಿ ಅಥವಾ ಮಾಡದೆ ನಂಬಿ, ಆಚರಣೆ ಮಾಡಬೇಕು ಎಂಬುದು ಆಸ್ತಿಕ ಧರ್ಮವಾಗಿ ಪರಿಗಣಿಸಲ್ಪಡುತ್ತದೆ. ಮತಧರ್ಮಗಳ ಆಚರಣೆಗಳಲ್ಲಿ ನಾಸ್ತಿಕ–ಆಸ್ತಿಕರೊಳಗಿನ ವೈಚಾರಿಕ ಅಥವಾ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಗೌಣವಾಗುತ್ತವೆ. ಅವರವರ ಧರ್ಮಗ್ರಂಥಗಳ ಅಪ್ಪಣೆ ಹಾಗೂ ಆಚರಣಾ ನೆಲೆಗಳು ಮುಖ್ಯವಾಗುತ್ತವೆ. ಆಸ್ತಿಕ ಮಹಾಶಯರ ಹೆಗ್ಗುರಿ ಸೈದ್ಧಾಂತಿಕ ನಾಸ್ತಿಕ ನಿಗ್ರಹವಲ್ಲ. ಬದಲಾಗಿ, ತಮ್ಮ ದೇವರುಗಳನ್ನು ನಂಬದವರ ನಿಗ್ರಹ. ಇದು ಸಾವಿರಾರು ವರ್ಷಗಳಿಂದ ನಾವು ರೂಢಿಸಿಕೊಂಡ ಧಾರ್ಮಿಕತೆಯ ಹೆಸರಿನ ಅಸಹನೆ, ಕ್ರೌರ್ಯ.

ಈ ವಾಸ್ತವತೆಯನ್ನು ಗುರುತಿಸಲು ನಿರಾಕರಿಸುವ ಮಂದಿ, ಅಂದರೆ ಧರ್ಮಾಚರಣೆಯಲ್ಲಿ ನಿರತರಾಗಿದ್ದು ನಾಸ್ತಿಕ ನಿಲುವನ್ನು ತಾಳಿದ ಆಸ್ತಿಕರು ನಮ್ಮಲ್ಲಿ ಹೆಚ್ಚು. ಆಸ್ತಿಕರ ಆಸ್ಥೆ ತಮ್ಮ ಧರ್ಮದ ಪ್ರತಿಪಾದನೆಯಲ್ಲಿ. ಇಂಥವರು ಒಂದು ಖಚಿತ ನೆಲೆಯಲ್ಲಿ ನಾಸ್ತಿಕರಾಗಿದ್ದುಕೊಂಡೇ ನಾಸ್ತಿಕರನ್ನು ಜರೆಯುವವರು ಅಥವಾ ಅವರಿಗೆ ಸನ್ಮಾರ್ಗವನ್ನು ತೋರಿ ಸ್ವರ್ಗದ ಆಶ್ವಾಸನೆ ನೀಡುವವರು. ಇದು ನಮ್ಮ









ನಿಜದ ನಾಮ ಜಯ ಬಲಭೀಮ
ನಮ್ಮ ನೇತಾರ !
ಮನುಜ ಪ್ರೀತಿಗೆ ಜಗದ ನೀತಿಗೆ
ನೀಡಿದ ಸಂಸ್ಕಾರ !

ಸಹಜ ಸಮತೆಯ ಬೀಜ ಬಿತ್ತಿದ
ಎದೆಯ ಒಕ್ಕಲಿಗ !
ಹರಿದ ಬದುಕಿಗೆ ಹೊಲಿಗೆ ಹಾಕಿದ
ಸೊದೆಯ ಸಿಂಪಿಗ !

ನೆಲದ ಮಣ್ಣಲಿ ಮಡಕೆ ಮಾಡಿದ
ಗೋರ ಕುಂಬಾರ !
ವಿದ್ಯೆ ವಿನಯವ ಶಸ್ತ್ರ ಮಾಡಿದ
ದೇಸಿ ಕಮ್ಮಾರ !

ನೀತಿ ನೇಮದಿ ಜಗವ ಕಾಯುವ
ಚತುರ ತಳವಾರ !
ಅರಳು ಮನಸಿನ ಮಾಲೆ ಕಟ್ಟಿದ
ದಿಟದ (ನಿಜದ) ಹೂಗಾರ

ಜಗಕೆ ಅಂಟಿದ ಮೈಲಿಗೆ ತೊಳೆದ
ವೀರ ಮಡಿವಾಳ !
ಚಂದ್ರಗೌಡನ ಕವನ ರೂಪದ
ಅಕ್ಷರ ನುಡಿಹವಳ !

**ಚಂದ್ರಗೌಡ ಕುಲಕರ್ಣಿ**
'ಚಿಲಿಪಿಲಿ', ಖಾಸ್ಗತನಗರ
ತಾಳಿಕೋಟೆ – ೫೮೬ ೨೧೪
ವಿಜಯಪುರ ಜಿಲ್ಲೆ

ಸಮಾಜದಲ್ಲಿ ಬೇಡುಬಿಟ್ಟ ಒಂದು ವಾಸ್ತವವಾದರೆ ನೆಲೆಸಿದ ನಂಬಿಕೆಗಳನ್ನು ಹೀಯಾಳಿಸುವ, ಅವುಗಳನ್ನು ಪ್ರತಿನಿಧಿಸುವ ದೇವರು–ದಿಂಡರುಗಳನ್ನು ತಿರಸ್ಕರಿಸುವ ವೈಚಾರಿಕರು ಹಲವರಿದ್ದಾರೆ. ಈ ನಂಬಿಕೆಗಳಿಗೆ ಅರ್ಥವೇನಾದರೂ ಇದೆಯೇ ? ಈ ದೇವರ ಕಲ್ಪನೆ ಸರಿಯೇ ? ಒಂದಕ್ಕಿಂತ ಹೆಚ್ಚು ತಲೆಗಳಿರುವ, ಎರಡಕ್ಕಿಂತ ಹೆಚ್ಚು ಕೈಗಳಿರುವ ಅಥವಾ ಕಣ್ಣುಗಳಿರುವ ದೇವರುಗಳ ಕಲ್ಪನೆ ಅಥವಾ ಮನುಷ್ಯ ದೇಹಕ್ಕೆ ಯಾವುದೋ ಪ್ರಾಣಿಯ ತಲೆಯನ್ನು ಕಸಿ ಮಾಡಿಸಿಕೊಂಡ ದೇವರ ಕಲ್ಪನೆ ಸಾಧುವೇ ಅಥವಾ ಸಾಧ್ಯವೇ ? ಇದೊಂದು ವೈಜ್ಞಾನಿಕ ಸತ್ಯ, ಇದೊಂದು ಪ್ರಚಂಡ ಶಸ್ತ್ರಚಿಕಿತ್ಸಕನೋರ್ವ ನಡೆಸಿದ ಪವಾಡ ಎಂಬ ಮಾತು ಒಂದು ಕಡೆ ಕೇಳಿಬರುತ್ತಿದ್ದರೆ ಇನ್ನೊಂದು ಕಡೆ ಇಂತಹ ಕಲ್ಪನೆ ಅಥವಾ ಅದನ್ನು ಆಧರಿಸಿ ಸೃಷ್ಟಿಸಿದ ಚಿತ್ರ, ಮೂರ್ತಿಗಳು ತೀರ ಹುಚ್ಚುತನದ ಪ್ರತೀಕ ಎಂಬ ವಿಚಾರ ಪ್ರತಿಪಾದನೆಯಾಗುತ್ತಿದೆ. ನಮ್ಮ ಪ್ರತಿ ನಂಬಿಕೆಯನ್ನೂ ವಿಜ್ಞಾನವು ಅನುಮೋದಿಸುವ ಅಗತ್ಯವಿಲ್ಲ. ಹಾಗಾಗಬೇಕೆಂದು ಅಪೇಕ್ಷಿಸುವುದು ಇನ್ನೊಂದು ಬಗೆಯ ಮೂಢನಂಬಿಕೆ. ದೇವರುಗಳಿದ್ದಾರೋ ಇಲ್ಲವೋ ಎಂಬ ಚರ್ಚೆ ನಮ್ಮ ನಂಬಿಕೆಗೆ ಬಿಟ್ಟದ್ದು; ಆದುದರಿಂದ ಅದು ಇತ್ಯರ್ಥವಾಗುವಂಥದ್ದಲ್ಲ. ಆದರೆ ದೇವರ ಕಲ್ಪನೆ ಮಾನವನಿಗೆ ಸೇರಿದ್ದು. ತಾನು ನೋಡದ್ದನ್ನು ಊಹಿಸುವ, ಊಹಿಸಿದ್ದನ್ನು ಚಿತ್ರಿಸುವ, ವಿವರಿಸುವ ಶಕ್ತಿ ಮಾನವನಿಗೆ ಇದೆ. ಇದೊಂದು ಅವನಲ್ಲಿ ಅಂತರ್ಗತವಾದ ಕವಿತ್ವದ ಲಕ್ಷಣ. ಇದು ಆದಿಮಾನವನಿಗೂ ಇತ್ತು ಎಂಬುದಕ್ಕೆ ಪುರಾವೆಗಳಿವೆ. ಗುಹೆಗಳಲ್ಲಿ, ಬಂಡೆಗಳಲ್ಲಿ ಆತ ಬರೆದ ಚಿತ್ರಗಳಲ್ಲಿ ಇದು ಕಂಡುಬರುತ್ತದೆ. ಕ್ರಿಸ್ತ ಪೂರ್ವ ೧೬ ಸಾವಿರ ವರ್ಷಗಳಷ್ಟು ಹಿಂದಿನದ್ದು ಎಂದು ಗುರುತಿಸಲಾದ ಒಂದು ವಿಗ್ರಹದ ತಲೆ ಹುಲಿಯದ್ದು, ಶರೀರ ಮಾನವನದ್ದು. ಇಂಥದ್ದು ಸೃಷ್ಟಿಯಲ್ಲಿ ಇರಲು ಅಸಾಧ್ಯವಾದರೂ ಮಾನವನು ಅದನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಯಿತು. ಇದು ಮಾನವನ ಮಾನಸಿಕ ಬೆಳವಣಿಗೆಯ ಒಂದು ಹೆಗ್ಗುರುತು. ದೇವರುಗಳ ಕಲ್ಪನೆಯಲ್ಲಿ ಇಂತಹ ಕವಿತ್ವ ಕೆಲಸ ಮಾಡುತ್ತದೆ. ಈಜಿಪ್ಟ್, ಮತ್ತಿತರ ಪ್ರಾಚೀನ ನಾಗರಿಕತೆಗಳಲ್ಲಿದ್ದ ಹಲವು ದೇವರುಗಳ ಕಲ್ಪನೆ ಹಾಗೆಯೇ ಇತ್ತು. ನಮ್ಮಲ್ಲಿ ಗಣೇಶ, ನರಸಿಂಹ, ಹಯಗ್ರೀವ ಮೊದಲಾದ ದೇವರುಗಳಿಗೆ ಪ್ರಾಣಿಯ ತಲೆ, ಮನುಷ್ಯನ ಶರೀರ ಒದಗಿಸಿದ್ದು ನಮ್ಮ ಕವಿತ್ವ . ನಮ್ಮ ದೇವರುಗಳಿಗೆ (ಕೆಲವೊಮ್ಮೆ ದಾನವರಿಗೆ) ಒಂದಕ್ಕಿಂತ ಹೆಚ್ಚು ತಲೆ, ಎರಡಕ್ಕಿಂತ ಹೆಚ್ಚು ಕೈಗಳಿರುವುದು ನಮ್ಮ ಕವಿತ್ವದ ಕಲ್ಪನೆಯಿಂದ. ಅದರಲ್ಲಿ ಅನೇಕ ರೂಪಕಗಳು ಸೇರಿವೆ. ಇಲ್ಲಿ ಶಸ್ತ್ರಚಿಕಿತ್ಸಕರ ಅಗತ್ಯವಿಲ್ಲ. ಅವರಿರುವುದು ಖಂಡಿತ, ತೀರ ಅವಶ್ಯ ಎನ್ನುವುದಾದರೆ ಅವರು ಸೃಷ್ಟಿಕರ್ತ ಬ್ರಹ್ಮನಿಗಿಂತ ಮೊದಲೇ ಇದ್ದವರು ಎಂಬ ನಂಬಿಕೆ ಅವಶ್ಯ. ಇಲ್ಲವಾದರೆ ಚತುರ್ಮುಖ ಬ್ರಹ್ಮನಿಗೆ ಹೆಚ್ಚುವರಿ ಮೂರು ತಲೆಗಳನ್ನು ಕಸಿಮಾಡಿದ್ದಾದರೂ ಯಾರು ಎಂಬ ಪ್ರಶ್ನೆ ನಮ್ಮನ್ನು ಅಣಕಿಸುತ್ತದೆ !

ಧರ್ಮ ಮತ್ತು ಸಮಾಜಗಳೊಳಗಿನ ಸಂಬಂಧ ಅಥವಾ ಅವೆರಡರ ನೇರ ಸಮೀಕರಣ ಕೆಲವೊಮ್ಮೆ ವಿಶೇಷ ಸಮಸ್ಯೆಗಳನ್ನು ಸೃಷ್ಟಿಸುತ್ತವೆ. ನಾವೆಷ್ಟು ನಮ್ಮ ಸಮಾಜಕ್ಕೆ ಅಂಟಿಕೊಂಡಿದ್ದರೂ ಅದರ ಬಗ್ಗೆ ಅಸಮಾಧಾನ, ಆಕ್ಷೇಪಗಳು ಹುಟ್ಟುವುದು ಸಹಜ, ಅನಿವಾರ್ಯ. ಯಾರಿಗೂ ತಮ್ಮ ಸಮಾಜದ ಬಗ್ಗೆ ಸಂಪೂರ್ಣ ಸಮಾಧಾನ, ಒಪ್ಪಿಗೆ ಇರಲು ಅಸಾಧ್ಯ. ಹಾಗಿದ್ದರೆ ಅದು ಕ್ರಿಯಾಶೀಲತೆಯ ಲಕ್ಷಣವಲ್ಲ. ಸಮಾಜ ಬದಲಾಗಬೇಕು ಎಂಬ ಆಶಯ, ಹೇಗೆ ಬದಲಾಗಬೇಕು ಎಂಬ ವಿಚಾರಗಳು ಹೇಗೆ ಪ್ರತಿಪಾದನೆಯಾಗುತ್ತವೋ ಹಾಗೆಯೇ ಬದಲಾವಣೆಗಳಿಗೆ ಪ್ರತಿರೋಧವನ್ನು ತೋರುವುದೂ ಸಮಾಜವು ಜೀವಂತವಾಗಿರುವ ಸಂಕೇತ. ಇಲ್ಲಿ ಅಭಿಪ್ರಾಯಭೇದಗಳು ಇರುವುದು ಸಹಜ. ಸಮಾಜದಲ್ಲಿರುವ ವಿಕೃತಿಗಳ ವಿರುದ್ಧ ದನಿ ಎತ್ತುವ ಸಂದರ್ಭ ಎಷ್ಟು ಅನಿವಾರ್ಯವೋ, ಅಂತಹ ಅಭಿಪ್ರಾಯಗಳ ವಿಕೃತಿಯನ್ನು ಹತೋಟಿಯಲ್ಲಿಡುವ ಅನಿವಾರ್ಯತೆಯೂ ಅಷ್ಟೇ ಇದೆ. ನಮ್ಮ ಸಮಾಜದಲ್ಲಿ ಜಾತಿ (ಅ)ವ್ಯವಸ್ಥೆ, ಅದು ನಡೆಸಿದ ಮಾನವ ಹಕ್ಕುಗಳ ದಮನ, ಇತ್ಯಾದಿಗಳು ಕೊನೆಗೊಳ್ಳಬೇಕು ಎಂಬುದು ನಿರ್ವಿವಾದ. ಅದನ್ನು ಪ್ರತಿಪಾದನೆ ಮಾಡುವವರು ಕೆಲವೊಮ್ಮೆ ಆವೇಶದಿಂದ ಧರ್ಮ, ದೇವರು, ಧರ್ಮಗ್ರಂಥಗಳ ವಿರುದ್ಧ ತೀಕ್ಷ್ಣ ವಿರೋಧವನ್ನು ಪ್ರಕಟಿಸುವುದನ್ನು ಕಾಣುತ್ತೇವೆ. ಆ ದೇವರು, ಈ ದೇವರುಗಳನ್ನು ತಿಪ್ಪೆಗೆ ಎಸೆಯಬೇಕು, ಜಾತಿ ವ್ಯವಸ್ಥೆಯನ್ನು ಪ್ರತಿಪಾದಿಸುವ, ಅನುಮೋದಿಸುವ ಮನುಸ್ಮೃತಿಯನ್ನು, ಭಗವದ್ಗೀತೆಯನ್ನು ಸುಡಬೇಕು, ಎಂಬಿತ್ಯಾದಿ ಹೇಳಿಕೆ ನೀಡಿದ್ದು ಅಥವಾ ಅದನ್ನು ನಾಟಕೀಯವಾಗಿ ಕಾರ್ಯಗತಗೊಳಿಸಿದ್ದು ಸಾಕಷ್ಟು ವರದಿಯಾಗಿವೆ. ಇದರಿಂದ ಹಲವು ಆಸ್ತಿಕ ಬಂಧುಗಳ ಭಾವನೆಗಳಿಗೆ ಧಕ್ಕೆಯಾಗಿದೆ, ಕೆಲವರಿಗೆ ಹೃದಯಾಘಾತವಾಗಿದೆ, ಅನೇಕರು ರೊಚ್ಚಿಗೆದ್ದಿದ್ದಾರೆ. ಸಮಾಜದಲ್ಲಿ ಬೇಡುಬಿಟ್ಟಿರುವ ಅಸಮಾನತೆ, ಅನ್ಯಾಯಗಳ ವಿರುದ್ಧ ಹೋರಾಡುವ ಅಗತ್ಯವಿದೆ. ಈ ಅನಿಷ್ಟಗಳನ್ನು ಸಾಕಿ ಸಲಹುವವರನ್ನು ವಿರೋಧಿಸುವ ಅಗತ್ಯವೂ ಇದೆ. ಆದರೆ ನಮ್ಮ ಜಾತಿ ವ್ಯವಸ್ಥೆ, ಅಸಮಾನತೆಗಳನ್ನು ಸೃಷ್ಟಿಸಿದ್ದು ಧರ್ಮಗ್ರಂಥಗಳಲ್ಲ. ಯಾವುದೋ ಶಾಸನದಿಂದ, ಶಾಸಕರಿಂದ ಸಮಾಜದ ಸ್ವರೂಪ, ಗತಿಗಳು ನಿರ್ಧಾರವಾಗುವುದಿಲ್ಲ. ಧರ್ಮ ಗ್ರಂಥಗಳೆಲ್ಲವೂ ಮಾನವನಿರ್ಮಿತವೇ. ಅವುಗಳು ಯಾವ ಕಾಲದಲ್ಲಿ, ಎಲ್ಲಿ, ಯಾರಿಂದ ನಿರ್ಮಿತವಾದುವು ಎನ್ನುವುದು ಅವುಗಳ ಸ್ವರೂಪವನ್ನು ಮತ್ತು ವಿಚಾರ ಗಳನ್ನು ನಿರ್ಧರಿಸುತ್ತದೆ. ಮನುಷ್ಯ ಬರೆದದ್ದನ್ನು ಇನ್ನೊಬ್ಬ ಮನುಷ್ಯ ಪೂರ್ತಿ ನಂಬುವುದಿಲ್ಲ, ಅದರ ಬಗ್ಗೆ ಚರ್ಚೆ ಮಾಡಲು ಮೊದಲಾಗುತ್ತಾನೆ ಎನ್ನುವ ಕಾರಣ ಧರ್ಮಗ್ರಂಥಗಳಿಗೆ "ಭಗವಾನ್ ಉವಾಚ" ಎಂಬ ಉಪೋದ್ಘಾತವನ್ನೋ, ಎಚ್ಚರಿಕೆಯ ಮಾತನ್ನೋ ಸೇರಿಸಿರುತ್ತಾರೆ. ಅದನ್ನು ಒಪ್ಪಿದ ಆಸ್ತಿಕ ಮಂದಿಗೆ ಅವುಗಳು ಚರ್ಚಾತೀತವಾಗುತ್ತವೆ. ಅಲ್ಲಿ ಹೇಳಿದ್ದೆಲ್ಲವೂ ದೇವರ ಅಪ್ಪಣೆಯಾಗಿ ಪರಿಣಮಿಸುತ್ತದೆ. ಆದರೆ ವಾಸ್ತವವಾಗಿ ಸಮಾಜದ ನಡಿಗೆ, ಪಿಡುಗುಗಳನ್ನು ಈ ಗ್ರಂಥಗಳು ಸೃಷ್ಟಿಸಿದ್ದಲ್ಲ, ಇದ್ದ ವ್ಯವಸ್ಥೆಗಳನ್ನು ಪ್ರತಿಬಿಂಬಿಸಿದ್ದು ಮಾತ್ರ. ಸಮಾಜದ ಸ್ವರೂಪ ಹಾಗೂ ಅದರಲ್ಲಾಗುವ ಬದಲಾವಣೆಗಳಿಗೆ ಕಾರಣ, ಪ್ರೇರಣೆಯಾಗಿ ಅನೇಕ ಶಕ್ತಿ, ಒತ್ತಡಗಳು ಕೆಲಸ ಮಾಡುತ್ತವೆ. ಯಾವುದೇ ಸಾಮಾಜಿಕ ವ್ಯವಸ್ಥೆಯನ್ನು ಅದರೊಳಗಿನ ಯಜಮಾನ ಶಕ್ತಿಗಳು ಪ್ರತಿಪಾದಿಸುತ್ತವೆ, ಅನುಮೋದಿಸುತ್ತವೆ. ಅದನ್ನು ನಾವು ಇತಿಹಾಸದ ನೆಲೆಯಲ್ಲಿ ಗುರುತಿಸಬೇಕು. ಆದರೆ ಇದು ಆಸ್ತಿಕ ಬಂಧುಗಳ ನಿಲುವಲ್ಲ. ಧರ್ಮಗ್ರಂಥಗಳಲ್ಲಿರುವುದನ್ನು ಸಂಪೂರ್ಣವಾಗಿ ಒಪ್ಪಿಕೊಂಡರೆ ವೈಚಾರಿಕವಾದ ಜಿಜ್ಞಾಸೆ ಅಸಾಧ್ಯ. ಹಾಗೆಂದು ಧರ್ಮಗ್ರಂಥಗಳ ಜಿಜ್ಞಾಸೆ ಎಂದರೆ ಅವುಗಳನ್ನು ಸುಡುವುದಲ್ಲ. ಧರ್ಮಗ್ರಂಥಗಳು ಪರಮಸತ್ಯವನ್ನು ಹೇಳುವಂಥವು, ಅವು ಚರ್ಚಾತೀತ ಎನ್ನುವ ಆಸ್ತಿಕರ ನಂಬಿಕೆಯು ವಿಪರೀತದ ನಿಲುವಾದರೆ ಅವುಗಳನ್ನು ತಿಪ್ಪೆಗೆ ಎಸೆಯಬೇಕು, ಸುಡಬೇಕು ಎನ್ನುವುದು ಇನ್ನೊಂದು ಬಗೆಯ ಅತಿರೇಕ. ನಾಸ್ತಿಕರನ್ನು ನಾಶಮಾಡಬೇಕು ಎನ್ನುವ ಆಸ್ತಿಕರ ನಿಲುವು, ಆಸ್ತಿಕರು ನಂಬಿಕೊಂಡು ಬಂದ ದೇವರು, ಧರ್ಮಗ್ರಂಥಗಳನ್ನು ನಾಶಮಾಡಬೇಕೆಂಬ ನಾಸ್ತಿಕರ ನಿಲುವುಗಳು ಮೂಲತಃ ಅಸಹನೆಯ ಎರಡು ಮುಖಗಳು. ಇದನ್ನು ನಾವು ಪೋಷಿಸಿದರೆ ನಮ್ಮ ಕಾಯಕವು ಮಧ್ಯಕಾಲೀನ ಚರ್ಚು ಮಾಡಿದ ಕೆಲಸ, ಗಜನಿ ಮಹಮೂದನು ಮಾಡಿದ ಅನ್ಯಾಯ ಅಥವಾ ಸರ್ವಾಧಿಕಾರಿಶಾಹಿಗಳ ನಡತೆಯ ಆಧುನಿಕ ಆವೃತ್ತಿಯಷ್ಟೇ ಆದೀತು.

ನಮ್ಮ ಜಗತ್ತು ವಿಶಾಲವಾಗಿದೆ, ನಿಜ. ಆದರೆ ಅದನ್ನು ಗುರುತಿಸಿ, ಅನುಭವಿಸಲು ಸಾಧ್ಯವಾಗುವುದು ನಮ್ಮ ಮನಸ್ಸು ವಿಶಾಲವಾದರೆ ಮಾತ್ರ. ನಮಗೆ ನಮ್ಮ ನಂಬಿಕೆಗಳು ಮುಖ್ಯ, ಹಾಗೆಯೇ ಇತರರಿಗೆ ಅವರ ನಂಬಿಕೆಗಳು ಮುಖ್ಯ. ಆದರೆ ಅವುಗಳನ್ನು ವೈಚಾರಿಕತೆಯ ಒರೆಗೆ ಹಚ್ಚುವ ಸ್ವಾತಂತ್ರ್ಯ ನಮಗೆ ಬೇಕು. ವೈಚಾರಿಕತೆಯನ್ನೂ ಒರೆಗೆ ಹಚ್ಚುವ ಚೈತನ್ಯ ನಮ್ಮಲ್ಲಿರಬೇಕು. ಅಲ್ಲಿ ಅಸಹನೆಗೆ ಮಾತ್ರ ಎಡೆಯಿರಬಾರದು. ಧರ್ಮ, ದೇವರು ಎಂಬೆಲ್ಲಾ ಕಲ್ಪನೆಗಳನ್ನು ಮಾನವನು ಸಮಾಜಜೀವಿಯಾಗಿ ಮಾಡಿದ್ದು. ಅದು ಆತನು ಸಮಾಜಜೀವಿಯಾಗಿ ಬದುಕಲು ಅಡ್ಡಿಯಾದರೆ ಅಂತಹ ಕಲ್ಪನೆಗಳ ಪುನರ್ ವಿಮರ್ಶೆಗೆ, ತಿರಸ್ಕಾರಕ್ಕೆ ಅವಕಾಶ ಇರಬೇಕು. ಅದು ಸ್ವಾತಂತ್ರ್ಯದ ಕಲ್ಪನೆಯೂ ಹೌದು, ಅದರ ಪರಿಮಿತಿಯೂ ಹೌದು. ಇದನ್ನು ಸಾಧಿಸುವುದು ನಾವೇ. ಸಾಧಿಸಲಾಗದಿದ್ದಲ್ಲಿ ನಷ್ಟ ನಮಗೇ, ನಮ್ಮ ಸಮಾಜಕ್ಕೇ. ಆಗ ನಮ್ಮ ಸ್ವಾತಂತ್ರ್ಯ ನಮ್ಮ ಹೆಚ್ಚುಗಾರಿಕೆಯಷ್ಟೇ ಆಗದೆ ಹೊಣೆಗಾರಿಕೆಯೂ ಆಗುತ್ತದೆ.

**ಪ್ರೊ॥ ಬಿ. ಸುರೇಂದ್ರ ರಾವ್**
'ಅಮೃತವರ್ಷಿಣಿ', ಅಸೈಗೋಳಿ, ಕೊಣಾಜೆ
ಮಂಗಳಗಂಗೋತ್ರಿ – ೫೭೪ ೧೯೯, ದಕ್ಷಿಣ ಕನ್ನಡ



## ಯೂರೋಪಿನಲ್ಲಿ ನಿಲ್ಲದ ಭಯೋತ್ಪಾದನೆ

**ಬೆ**ಲ್ಜಿಯಮ್‌ನ ರಾಜಧಾನಿ ಬ್ರಸೆಲ್ಸ್ ಮೇಲೆ ಭಯೋತ್ಪಾದಕರು ನಡೆಸಿದ ದಾಳಿ ಅನಿರೀಕ್ಷಿತವೇನಲ್ಲ. ಹದಿನೈದು ವರ್ಷಗಳ ಹಿಂದೆ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು 'ಭಯೋತ್ಪಾದನೆಯ ವಿರುದ್ಧ ಸಮರ' ಸಾರಿದ ಮೇಲೆ ಇಸ್ಲಾಮಿಕ್ ಜಿಹಾದಿಗಳ ಹಾವಳಿ ಕಮ್ಮಿಯಾಗುವ ಬದಲು ಹೆಚ್ಚಾಗಿದೆ, ಜಗತ್ತಿನಾದ್ಯಂತ ಹರಡಿಕೊಂಡಿದೆ. ಇಸ್ಲಾಮಿಕ್ ಮೂಲಭೂತವಾದಿಗಳು ಸ್ಥಾಪಿಸಲು ಹೊರಟಿರುವ 'ಇಸ್ಲಾಮಿಕ್ ಕ್ಯಾಲಿಫೇಟ್' ಅಸ್ತಿತ್ವಕ್ಕೆ ಬರುತ್ತದೋ ಇಲ್ಲವೋ ಅದು ಬೇರೆ ವಿಷಯ. ಆದರೆ ಅದು ಪ್ರೇರೇಪಿಸಿರುವ ಭಯೋತ್ಪಾದನೆ ಮಾತ್ರ ನಿಲ್ಲುವಂತೆ ತೋರುವುದಿಲ್ಲ. ಕಳೆದ ವರ್ಷ ನವೆಂಬರ್ ತಿಂಗಳಲ್ಲಿ ಪ್ಯಾರಿಸ್ಸಿನಲ್ಲಿ ಭಯೋತ್ಪಾದಕರ ದಾಳಿಗೆ ೧೩೦ ಮಂದಿ ಬಲಿಯಾದರು. ಬ್ರಸೆಲ್ಸ್‌ನ ವಿಮಾನ ನಿಲ್ದಾಣ ಮತ್ತು ಮೆಟ್ರೋ ಸ್ಟೇಷನ್ನಿನಲ್ಲಿ ಸಂಭವಿಸಿದ ಸ್ಫೋಟದಲ್ಲಿ ೩೫ ಜನ ಸತ್ತರು. ಎರಡೂ ಕಡೆ ನಡೆದ ದಾಳಿಯಲ್ಲಿ ಭಾಗವಹಿಸಿದ್ದವರು ಬೆಲ್ಜಿಯಮ್ ಮೂಲದ ಜಿಹಾದಿಗಳೆ. ಪ್ಯಾರಿಸ್ ದಾಳಿಯ ರೂವಾರಿಗಳಲ್ಲೊಬ್ಬ ಜಿಹಾದಿ ಬದುಕಿದ್ದು ಬೆಲ್ಜಿಯಮ್‌ನಲ್ಲಿ ಅವಿತುಕೊಂಡಿದ್ದ. ಮಾರ್ಚ್ ೧೮ರಂದು ಈತ ಭದ್ರತಾ ಸಿಬ್ಬಂದಿಯ ಬಲೆಗೆ ಬಿದ್ದ. ಅದಾದ ನಾಲ್ಕು ದಿನಗಳಲ್ಲೇ ಬ್ರಸೆಲ್ಸ್‌ನಲ್ಲಿ ಭಯೋತ್ಪಾದನಾ ಕೃತ್ಯ ನಡೆದಿದೆ.

ಯೂರೋಪಿನಲ್ಲಿ ಕಳೆದ ನಾಲ್ಕು ವರ್ಷಗಳಲ್ಲಿ ಸಂಭವಿಸಿರುವ ಭಯೋತ್ಪಾದನಾ ಕೃತ್ಯಗಳೆಲ್ಲದರಲ್ಲೂ ಭಾಗಿಯಾಗಿದ್ದವರು ಸಿರಿಯ, ಇರಾಕ್, ಆಫ್ಘಾನಿಸ್ತಾನ ಯುದ್ಧಗಳಲ್ಲಿ ಭಾಗವಹಿಸಿದ್ದವರೇ. ಯೂರೋಪಿನ ಹಲವು ದೇಶಗಳಲ್ಲಿ ಹಾಗೂ ಪ್ರಪಂಚದ ಇತರ ದೇಶಗಳಲ್ಲಿ ಇಸ್ಲಾಮಿಕ್ ರಾಜ್ಯ ಸ್ಥಾಪನೆಯಲ್ಲಿ ಆಸಕ್ತರಾಗಿರುವವರು ಹರಡಿಕೊಂಡಿದ್ದಾರೆ. ಅದಲ್ಲದೆ, ಪಶ್ಚಿಮ ಏಶಿಯಾದ ಯುದ್ಧ ಪೀಡಿತ ಪ್ರದೇಶಗಳಿಂದ ವಲಸೆ ಬಂದಿರುವ ನಿರಾಶ್ರಿತರೂ ಇದ್ದಾರೆ. ಇವರ ಪೈಕಿ ಎಷ್ಟು ಮಂದಿ ಜಿಹಾದಿಗಳಿದ್ದಾರೋ ಗೊತ್ತಾಗುವುದಿಲ್ಲ. ಬ್ರಸೆಲ್ಸ್ ಮೇಲೆ ನಡೆದಿರುವ ದಾಳಿಯನ್ನು ಗಮನಿಸಿದರೆ ಯೂರೋಪಿನಲ್ಲಿ ಎಲ್ಲೆಂದರಲ್ಲಿ ಜಿಹಾದಿಗಳು ಬೇಕೆನಿಸಿದಾಗ ದಾಳಿ ನಡೆಸಬಲ್ಲರು ಎನ್ನುವುದು ವೇದ್ಯವಾಗುತ್ತದೆ. ಬ್ರಸೆಲ್ಸ್ ಯೂರೋಪಿಯನ್ ಯೂನಿಯನ್ನಿನ ಕೇಂದ್ರ. ಉತ್ತರ ಅಟ್ಲಾಂಟಿಕ್ ಕೂಟದ, ಅಂದರೆ 'ನ್ಯಾಟೋ'ದ ಪ್ರಧಾನ ಕಚೇರಿ ಇರುವುದೂ ಇಲ್ಲಿಯೇ. ಅನೇಕ ಅಂತರರಾಷ್ಟ್ರೀಯ ಸಂಸ್ಥೆಗಳೂ ಹಾಗೂ ಕಂಪೆನಿಗಳೂ ತಮ್ಮ ಕಚೇರಿಗಳನ್ನು ಹೊಂದಿವೆ. ಬ್ರಸೆಲ್ಸ್‌ನ ದಾಳಿಯಲ್ಲಿ ಮಡಿದವರು ಮತ್ತು ಗಾಯಗೊಂಡವರಲ್ಲಿ ೪೦ ದೇಶಗಳ ಪ್ರಜೆಗಳಿದ್ದರು ಎಂದು ಗುರ್ತಿಸಲಾಗಿದೆ. ಸತ್ತವರಲ್ಲಿ ಇನ್ಫೋಸಿಸ್ ಸಂಸ್ಥೆಯ ಭಾರತೀಯ ನೌಕರನೂ ಒಬ್ಬ.

ಸಿರಿಯ–ಇರಾಕ್ ಗಡಿಯಲ್ಲಿ ಇಸ್ಲಾಮಿಕ್ ರಾಜ್ಯದ ಸ್ಥಾಪನೆಗೆ ಕಾದಾಡುತ್ತಿರುವ ಯೋಧರಲ್ಲಿ ಸಾಕಷ್ಟು ಮಂದಿ ಜಿಹಾದಿಗಳು ಯೂರೋಪಿನ ದೇಶಗಳಿಂದ ಬಂದವರಾಗಿದ್ದಾರೆ. ಅವರ ಸಂಖ್ಯೆ ೧೦,೦೦೦ದಷ್ಟು ಎಂದು ಅಂದಾಜು ಮಾಡಲಾಗಿದೆ. ಜಿಹಾದಿಗಳನ್ನು ಸೇರಿಸಿಕೊಳ್ಳುವುದಕ್ಕೆ ಬ್ರಸೆಲ್ಸ್ ಒಂದು ಬಗೆಯಲ್ಲಿ ಕೇಂದ್ರವಾಗಿದೆ. ಪ್ಯಾರಿಸ್ ದುರ್ಘಟನೆಯ ನಂತರ ಬ್ರಸೆಲ್ಸ್ ಮೇಲೆ ದಾಳಿ ನಡೆಯುವ ಸೂಚನೆ ಇತ್ತು. ಆದರೂ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳದಿದ್ದುದು ಗೂಢಚರ್ಯೆ ಸಿಬ್ಬಂದಿಯ ಅಜಾಗ್ರತೆಯೇ ಕಾರಣ ಎನ್ನಬಹುದು. ಅಲ್ಲದೆ, ಭಯೋತ್ಪಾದಕರು ಎಲ್ಲಿ ಯಾವಾಗ ದಾಳಿ ನಡೆಸುವರೆಂಬುದನ್ನು ಪತ್ತೆ ಹಚ್ಚುವುದು ಸುಲಭವೂ ಅಲ್ಲ. ಭಾರತವಾಸಿಗಳಾದ ನಮಗೆ ಭಯೋತ್ಪಾದನೆ ಎನ್ನುವುದು ಜೀವನದ ಒಂದು ಭಾಗವೇ ಆಗಿದೆ. ಇಸ್ಲಾಮಿಕ್ ರಾಜ್ಯಸ್ಥಾಪನೆಯ ವ್ಯಾಮೋಹದಿಂದ ಈಗ ಯೂರೋಪಿನ ದೇಶಗಳೂ ಅದೇ ಸ್ಥಿತಿಯನ್ನು ಎದುರಿಸಬೇಕಾಗಿ ಬಂದಿದೆ.

## ಯೆಮೆನ್‌ನಲ್ಲಿ ಶಾಂತಿ ಸ್ಥಾಪನೆಗೆ ಪ್ರಯತ್ನ

**ಪ**ಶ್ಚಿಮ ಏಷಿಯದ ಯೆಮೆನ್ ಸೌದಿ ಅರೇಬಿಯಾದ ನೆರೆ ರಾಷ್ಟ್ರ. ಭಾರತ ಮತ್ತು ಆಫ್ರಿಕಾಗಳ ಮಧ್ಯೆ ವಾಣಿಜ್ಯಕ್ಕೆ ಒಂದು ಕಾಲದಲ್ಲಿ ಕೊಂಡಿಯಾಗಿತ್ತು ಅದು. ಉತ್ತರ ಯೆಮೆನ್ ಮತ್ತು ದಕ್ಷಿಣ ಯೆಮೆನ್‌ಗಳ ಮಧ್ಯೆ ಯಾವತ್ತೂ ಘರ್ಷಣೆ ಇದ್ದದ್ದೆ. ೧೯೧೮ರಲ್ಲಿ ಉತ್ತರ ಯೆಮೆನ್ ಸ್ವತಂತ್ರಗೊಂಡರೆ, ದಕ್ಷಿಣ ಯೆಮೆನ್ ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದುಕೊಂಡಿದ್ದು ೧೯೬೭ರಲ್ಲಿ. ಶೀತಯುದ್ಧದ ಕಾಲದಲ್ಲೇ ಎರಡೂ ಭಾಗಗಳ ಮಧ್ಯೆ ಘರ್ಷಣೆ. ೧೯೯೦ರಲ್ಲಿ ಒಂದಾದ ಈ ದೇಶ ಸುಮಾರು ಒಂದೂವರೆ ಕೋಟಿ ಜನಸಂಖ್ಯೆ ಹೊಂದಿದೆ. ಬಹುತೇಕ ಮುಸಲ್ಮಾನರೆ ಇರುವ ಈ ದೇಶ ನಿರಂತರವಾಗಿ ಷಿಯಾ ಮತ್ತು ಸುನ್ನಿ ಪಂಗಡಗಳ ಮಧ್ಯೆ ವೈಮನಸ್ಯದಿಂದ ಕೂಡಿದ್ದು. ಸುನ್ನಿಗಳೇ ಪ್ರಧಾನವಾಗಿರುವ ಸೌದಿ ಅರೇಬಿಯ ಮತ್ತು ಷಿಯಾಗಳ ನೇತೃತ್ವದಲ್ಲಿರುವ ಇರಾನ್‌ಗಳ ಮಧ್ಯೆ ಸೆಣಸಾಟಕ್ಕೆ ಯೆಮೆನ್ ಒಂದು ಪ್ರಯೋಗಾಲಯ. ಕಳೆದ ಒಂದು ವರ್ಷದಿಂದ ಯುದ್ಧಪೀಡಿತವಾಗಿರುವ ಈ ದೇಶದಲ್ಲಿ ಶಾಂತಿಸ್ಥಾಪನೆಗೆ ವಿಶ್ವಸಂಸ್ಥೆ ಪ್ರಯತ್ನ ನಡೆಸಿದೆ. ಬಡಿದಾಡುತ್ತಿರುವ ಪಂಗಡಗಳ ಮಧ್ಯೆ ಯುದ್ಧ ಸ್ತಂಭನ ಒಪ್ಪಂದವಾಗಿದೆ. ಆದರೆ ಇದು ಎಷ್ಟು ದಿನ ಇದ್ದೀತು ಎಂದು ಹೇಳಲಾಗದು. ಇಂಥದೇ ಒಪ್ಪಂದಗಳು ಈ ಹಿಂದೆ ಮೂರು ಸಲ ಮುರಿದುಬಿದ್ದಿವೆ.

ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಪರಮ ಮಿತ್ರ ಸೌದಿ ಅರೇಬಿಯ ಯೆಮೆನ್‌ನ ಅಧ್ಯಕ್ಷ ಮನ್ಸೂರ್ ಹಾದಿ ಬೆಂಬಲಿತ ಸೇನೆಯ ಪರವಾಗಿ ನಿಂತಿದ್ದರೆ, ಷಿಯಾ ಹೌತಿ ಪಂಗಡದವರಿಗೆ ಇರಾನಿನ ಬೆಂಬಲ ಇದೆ. ಈ ಸಮರದಿಂದ ಪ್ರಯೋಜನವಾಗಿರುವುದು ಅಲ್‌ಖೈದಾದಂಥ ಉಗ್ರಗಾಮಿಗಳಿಗೆ ಮಾತ್ರ. ೧೯೮೦ರಲ್ಲಿ ತೈಲ ಶೋಧೆಯಿಂದ ಆರ್ಥಿಕವಾಗಿ ಸ್ವಲ್ಪಮಟ್ಟಿಗೆ ಚೇತರಿಸಿಕೊಂಡ ಯೆಮೆನ್‌ಗೆ ಶಾಂತಿ ಎನ್ನುವುದು ಒಂದು ಮರೀಚಿಕೆ. ಕಳೆದ ವರ್ಷ ಮಾರ್ಚ್ ತಿಂಗಳಲ್ಲಿ ಸೌದಿ ಅರೇಬಿಯ ಮತ್ತು ಅದರ ಮಿತ್ರರಾಷ್ಟ್ರಗಳು ಯೆಮೆನ್‌ನ ಷಿಯಾ ದಂಗೆಕೋರರ ವಶದಲ್ಲಿರುವ ಪ್ರದೇಶಗಳ ಮೇಲೆ ಬಾಂಬು ದಾಳಿ ಪ್ರಾರಂಭಿಸಿದುವು. ಇದರಿಂದ ಮೃತರಾದವರ ಸಂಖ್ಯೆ ೬,೦೦೦. ಸಂಘರ್ಷದಿಂದಾಗಿ ಸುಮಾರು ಎರಡು ಮಿಲಿಯ ಜನ ನಿರಾಶ್ರಿತರಾಗಿದ್ದಾರೆ. ಹತ್ತಾರು ಲಕ್ಷ ಮಕ್ಕಳು ಪೋಷಣೆ ಇಲ್ಲದೆ ಪರಿತಪಿಸುತ್ತಿವೆ. ಜನಸಂಖ್ಯೆಯ ಶೇ. ೮೦ರಷ್ಟು ಮಂದಿ ಬಡತನದಲ್ಲಿ ಬಾಳು ಸಾಗಿಸುತ್ತಿದ್ದಾರೆ. ಅಮಾನವೀಯವಾದ ಈ ಪರಿಸ್ಥಿತಿಯನ್ನು ಕಡೆಗಣಿಸಿ ಪಶ್ಚಿಮ ರಾಷ್ಟ್ರಗಳು ಸೌದಿ ಅರೇಬಿಯದ ಕ್ರಮಗಳಿಗೆ ಬೆಂಬಲ ನೀಡುತ್ತಿವೆ, ಶಸ್ತ್ರಾಸ್ತ್ರಗಳನ್ನು ಪೂರೈಸುತ್ತಿವೆ.

ಯೆಮೆನ್‌ನ ಪ್ರಮುಖ ಬಂದರು ಇರುವ ಏಡನ್ ನಗರವನ್ನು ಸ್ವಾಧೀನಪಡಿಸಿಕೊಳ್ಳಲು ಮೊದಲನೇ ಮಹಾಯುದ್ಧದ ಕಾಲದಲ್ಲೇ ಸೌದಿ ಅರೇಬಿಯ ಪ್ರಯತ್ನ ನಡೆಸಿತ್ತು. ಈಗ ಯೆಮೆನ್‌ಅನ್ನು ತನ್ನ ಪ್ರಭಾವ ವಲಯಕ್ಕೆ ಸೇರಿಸಿಕೊಳ್ಳಲು ಸೌದಿ ಆಡಳಿತಗಾರರು ಮುಂದಾಗಿದ್ದಾರೆ. ಷಿಯಾ ಮತ್ತು ಸುನ್ನಿ ಮುಸಲ್ಮಾನರ ಮಧ್ಯೆ ಸಂಘರ್ಷ ಇಂದು ನಿನ್ನೆಯದಲ್ಲ. ಪ್ರವಾದಿ ಮಹಮ್ಮದರ ನಂತರದ ಕಾಲದಿಂದಲೂ ಇದ್ದದ್ದೇ. ಪಶ್ಚಿಮ ಏಷಿಯದ ದೇಶಗಳಲ್ಲಿ ಈಚೆಗೆ ಒಂದಲ್ಲ ಒಂದು ಕಡೆ ಅಶಾಂತಿಯ ವಾತಾವರಣ ಇದ್ದೇ ಇದೆ. ಇರಾಕ್‌ನ ಮೇಲೆ ಅಮೆರಿಕದ ದಾಳಿಯ ನಂತರ ಈ ಪ್ರದೇಶ ಅಲ್ಲೋಲ ಕಲ್ಲೋಲವಾಗಿದೆ. ಅಧಿಕಾರಸ್ಥವಾಗಿ ಬೇರೂರಿದ್ದ ಆಡಳಿತಗಳ ಪದಚ್ಯುತಿ, ಅವ್ಯವಸ್ಥೆ, ಸಂಘರ್ಷ, ಭಯೋತ್ಪಾದನೆ, ಇಸ್ಲಾಮಿಕ್ ರಾಜ್ಯದ ಸ್ಥಾಪನೆಗಾಗಿ ಉಗ್ರರಿಂದ ಪ್ರಯತ್ನ, ಎಲ್ಲ ಮುಂದುವರಿದಿದೆ. ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಇದರ ಪ್ರಯೋಜನ ಪಡೆದುಕೊಂಡು ಈ ಪ್ರದೇಶದ ಮೇಲೆ ಹಿಡಿತ ಸಾಧಿಸಲು ನೋಡುತ್ತಿವೆ. ತೈಲಸಂಪತ್ತಿನ ಸ್ವಾಮ್ಯದ ಈ ಸಂಘರ್ಷ ಎಲ್ಲಿಗೆ ಮುಟ್ಟೀತೋ ನೋಡಬೇಕು. ಇದರ ಒಂದು ಭಾಗವೇ ಯೆಮೆನ್‌ನ ಸಂಘರ್ಷ. ಶಾಂತಿಗಾಗಿ ವಿಶ್ವಸಂಸ್ಥೆ ನಡೆಸಿರುವ ಪ್ರಯತ್ನ ಯಶಸ್ವಿಯಾಗಲಿ ಅದರಿಂದ ಪರಿತಪಿಸುತ್ತಿರುವ ಜನತೆಗೆ ಸಾಂತ್ವನ ದೊರೆಯಲಿ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ನೀರಿನ ಬಡತನ ನೀಗುವ ನಿಟ್ಟಿನಲ್ಲಿ

**ಯಾ**ವುದೇ ಒಂದು ದೇಶದ ಅಭಿವೃದ್ಧಿಯನ್ನು ಕೃಷಿ ಉತ್ಪನ್ನಗಳು, ರಫ್ತಿನ ಪ್ರಮಾಣ, ಖನಿಜ ಸಂಪತ್ತು, ಕೈಗಾರಿಕೋತ್ಪನ್ನಗಳು, ತಲಾವಾರು ಆದಾಯ, ವೈಜ್ಞಾನಿಕ ಸಂಶೋಧನೆ ಮತ್ತು ತಾಂತ್ರಿಕ ಜ್ಞಾನದ ಪ್ರಗತಿ, ಮಾನವಾಭಿವೃದ್ಧಿ, ದುಡಿವ ಜನರ ಕಾರ್ಯಕ್ಷಮತೆ, ಕಾನೂನು ಪಾಲನೆಯಲ್ಲಿ ಪ್ರಾಮಾಣಿಕತೆ, ಲಂಚರಹಿತ ಸೇವಾ ಮನೋಭಾವ, ನಾಗರಿಕ ಪ್ರಜ್ಞೆ– ಹೀಗೆ ಹಲವು ಅಂಶಗಳ ತಳಹದಿಯ ಮೇಲೆ ತಜ್ಞರು ತೀರ್ಮಾನಿಸುತ್ತಾರೆ ಎಂದು ನಮಗೆ ತಿಳಿದಿದೆ. ಆದರೆ ಇಸವಿ ೨೦೦೦ದಿಂದೀಚೆಗೆ ಮೇಲೆ ವಿವರಿಸಿದ ಮಾನದಂಡಗಳ ಸಾಲಿಗೆ ಇನ್ನೂ ಒಂದು ಮಾನದಂಡ ಸೇರ್ಪಡೆಯಾಗಿದೆ. ಅದುವೇ 'ನೀರಿನ ಬಡತನದ ಸೂಚ್ಯಂಕ' (ವಾಟರ್ ಪಾವರ್ಟಿ ಇಂಡೆಕ್ಸ್). ಹಾಗೆ ನೋಡಿದರೆ ಎಲ್ಲ ಕಾಲಕ್ಕೂ ಬೇಸಾಯ, ಕೈಗಾರಿಕೆ, ಜನರ ಆರೋಗ್ಯ, ಪಶುಸಂಗೋಪನೆ ಹೀಗೆ ಎಲ್ಲವೂ ಅವಲಂಬಿಸಿರುವುದೇ ನೀರಿನ ಲಭ್ಯತೆಯ ಮೇಲಲ್ಲವೆ? ಬಹಳ ತಡವಾಗಿಯಾದರೂ ಜಗತ್ತು ನೀರಿನ ಮಹತ್ವವನ್ನು ಪ್ರಗತಿಗೆ ಪೂರಕಾಂಶವಾಗಿ ಪರಿಗಣಿಸುತ್ತಿದೆ ಎಂಬುದೇ ಸಮಾಧಾನದ ವಿಚಾರವಾಗಿದೆ. ಯಾವುದೇ ಒಂದು ದೇಶ ಅಥವಾ ಪ್ರದೇಶದ ಜನತೆ ನೀರನ್ನು ಎಷ್ಟು ಅವಲಂಬಿಸಿದೆ, ಎಷ್ಟು ನೀರನ್ನು ಪಡೆಯುವುದರ ಜೊತೆಗೆ ಎಷ್ಟು ನೀರನ್ನು ಪೋಲು ಮಾಡುತ್ತದೆ ಎಂಬುದನ್ನು ಅರ್ಥಮಾಡಿಕೊಳ್ಳಲು ನೀರಿನ ಬಡತನದ ಸೂಚ್ಯಂಕ ನೆರವಾಗುತ್ತದೆ. ಈ ಸೂಚ್ಯಂಕದ ಜೊತೆಗೆ ಒಟ್ಟಾರೆಯಾಗಿ ಒಂದು ಸಮಾಜದ ಪ್ರಗತಿ ಹೇಗೆ ತಳಕು ಹಾಕಿಕೊಂಡಿದೆ ಎಂಬುದನ್ನೂ ತಿಳಿಯಬಹುದು.

ನೀರಿನ ಬಡತನದ ಸೂಚ್ಯಂಕವನ್ನು ನಿರ್ಧರಿಸುವ ಅಂಶಗಳಾವುವು ? ಐದು ಅತಿ ಮುಖ್ಯ ಅಂಶಗಳನ್ನು ಗುರ್ತಿಸಲಾಗಿದೆ. ಒಂದೊಂದಾಗಿ ಪರಿಶೀಲಿಸೋಣ :

**೧. ನೀರಿನ ಸಂಪನ್ಮೂಲಗಳು :** ಒಂದು ದೇಶದ ಭೌಗೋಳಿಕ ವ್ಯಾಪ್ತಿಯಲ್ಲಿ ಮೇಲ್ಮೈ ನೀರು ಮತ್ತು ಅಂತರ್ಜಲಗಳ ಲಭ್ಯತೆಯ ಪ್ರಮಾಣ, ಮೇಲು ನೀರು (ಮುಖ್ಯವಾಗಿ ಮಳೆ ನೀರು) ಭೂಮಿಗೆ ಇಂಗುವ ಪ್ರಮಾಣ, ನೀರಿನ ನಿರಂತರ ಲಭ್ಯತೆಯ ಖಾತರಿ ಮತ್ತು ವ್ಯತ್ಯಯಗಳನ್ನು ಗುಣಾತ್ಮಕ ಹಾಗೂ ಪರಿಮಾಣಾತ್ಮಕ ಮಾಪನಗಳಿಗೆ ಒಳಪಡಿಸುವುದು ಮತ್ತು ಲಭ್ಯವಿರುವ ನೀರಿನ ಬಳಕೆಯ ಗುಣಮಟ್ಟವನ್ನು ನಿರ್ಧರಿಸುವುದು ಇವು ಈ ಅಂಶದಡಿ ಪ್ರಮುಖ ವಿಚಾರಗಳು.

**೨. ನೀರನ್ನು ಪಡೆದುಕೊಳ್ಳುವ ಸಾಧ್ಯತೆ :** ಶುದ್ಧ ಅಥವಾ ಮಾಲಿನ್ಯರಹಿತ ನೀರನ್ನು ಪಡೆದು ಕೊಳ್ಳುವ ನಮಗಿರುವ ಅವಕಾಶಗಳೆಡೆಗೆ ಬೆಳಕು ಚೆಲ್ಲುವುದು

ಪ್ರತೀ ದಿನ ಪ್ರತೀ ವ್ಯಕ್ತಿಗೂ ಸರಾಸರಿ ೫೦ ಲೀಟರ್‌ಗಳಷ್ಟು ನೀರು ಬೇಕು. ಅಂದರೆ ವರ್ಷಕ್ಕೆ ೧೮,೨೫೦ ಲೀಟರ್‌ಗಳು. ಆ ವ್ಯಕ್ತಿಯ ೭೦ ವರ್ಷದ ಜೀವಿತಾವಧಿಗೆ ಲೆಕ್ಕ ಹಾಕಿದರೆ ೧೨,೭೭,೦೦೦ ಲೀಟರ್‌ಗಳು ಬೇಕು. ಅಲ್ಲಿಗೆ ನಾಲ್ಕು ಜನರ ಒಂದು ಕುಟುಂಬಕ್ಕೆ ೭೦ ವರ್ಷಗಳಿಗೆ ೫೧,೧೦,೦೦೦ ಲೀಟರ್‌ಗಳು ! ಇನ್ನು ೭೫೦ ಕೋಟಿ ಜನಸಂಖ್ಯೆಗೆ ಬಡಪಾಯಿ ಭೂಮಿ ಅದೆಷ್ಟು ನೀರನ್ನು ಒದಗಿಸಬೇಕು, ನೀವೇ ಲೆಕ್ಕ ಹಾಕಿ ? ೨೦೦೦ದ ಇಸವಿಯಲ್ಲಿ ಜಗತ್ತಿನ ಮೂವತ್ತು ದೇಶಗಳ (ಜಗತ್ತಿನ ಒಟ್ಟು ಜನಸಂಖ್ಯೆಯ ಶೇಕಡಾ ೨೦ರಷ್ಟು) ಜನತೆ ನೀರಿನ ತೀವ್ರ ಕೊರತೆಗೆ ಸಿಲುಕಿದ್ದರು. ೨೦೨೫ನೇ ಇಸವಿಯ ಹೊತ್ತಿಗೆ ೫೦ ದೇಶಗಳ ಜನತೆ ಈ ಬವಣೆಗೆ ಸಿಲುಕುವುದಲ್ಲದೆ ಒಟ್ಟಾರೆ ೨೫೦ ಕೋಟಿ ಜನ ನೀರಿನ ಭೀಕರ ಕ್ಷಾಮಕ್ಕೆ ತುತ್ತಾಗುವ ಸಾಧ್ಯತೆಯಿದೆ ಎಂದು ಅಂದಾಜು ಮಾಡಲಾಗಿದೆ. ೨೦೫೦ನೇ ಇಸವಿಯ ಹೊತ್ತಿಗೆ ಜಗತ್ತಿನ ಜನಸಂಖ್ಯೆ ೯೦೦ ಕೋಟಿಯನ್ನು ತಲುಪುವ ಸೂಚನೆ ಇರುವುದರಿಂದ ನೀರಿಗೆ ಹೆಚ್ಚುವ ಬೇಡಿಕೆಯ ಸ್ವರೂಪ ಊಹಾತೀತವೇ ಸರಿ. ಮನುಕುಲ ಈ ಪಾರಿಸಾರಿಕ ಮತ್ತು ಆಡಳಿತಾತ್ಮಕ ಸವಾಲನ್ನು ಹೇಗೆ ಎದುರಿಸುವುದೋ ಈಗಲೇ ಮುನ್ಸೂಚಿಸುವುದು ದುಸ್ತರವೇ ಸರಿ.

**ಕೆ. ಎಸ್. ರವಿಕುಮಾರ್**





ಈ ಅಂಶದ ತಿರುಳು. ನೀರಿನ ಮೂಲ ನೈಸರ್ಗಿಕವಾಗಿರಬಹುದು ಅಥವಾ ಆಡಳಿತ ವ್ಯವಸ್ಥೆಗಳು ಕೊಡಮಾಡಿದಂತಹುದೂ ಆಗಿರಬಹುದು. ಒಟ್ಟು ಜನಸಂಖ್ಯೆಯಲ್ಲಿ ಕೊಳಾಯಿ ಮೂಲಕ ಶುದ್ಧ ನೀರು ಪಡೆಯಬಲ್ಲ ಮನೆ ಅಥವಾ ಕುಟುಂಬಗಳ ಶೇಕಡಾವಾರು ಅಂಕಿ ಅಂಶ, ನೀರನ್ನು ಪಡೆಯುವ ಸಂದರ್ಭಗಳಲ್ಲಿ ಬಳಕೆದಾರರ ನಡುವೆ ಸಂಭವಿಸುವ ಘರ್ಷಣೆಗಳ ವರದಿಗಳು, ಒಟ್ಟು ಜನಸಂಖ್ಯೆಯಲ್ಲಿ ನೈರ್ಮಲ್ಯವನ್ನು ಸಾಧಿಸಿರುವ ಶೇಕಡಾವಾರು ಲೆಕ್ಕ, ನೀರು ಹೊತ್ತು ತರುವ ಮಹಿಳೆಯರ ಶೇಕಡಾವಾರು ಸಂಖ್ಯೆ, ನೀರನ್ನು ಪಡೆದುಕೊಳ್ಳಲು ವಿನಿಯೋಗಿಸುವ ಸಮಯ (ಇದರಲ್ಲಿ ಕೊಳವೆಬಾವಿ, ನಲ್ಲಿ ಮತ್ತು ಟ್ಯಾಂಕರ್‌ಗಳೆದುರು ಸರದಿಯಲ್ಲಿ ಕಾಯುವುದೂ ಸೇರಿದೆ) ಮತ್ತು ಕೊನೆಯದಾಗಿ, ಹವಾಮಾನದ ಏರುಪೇರಿಗೆ ತಕ್ಕಂತೆ ನೀರಾವರಿ ಸೌಲಭ್ಯಗಳನ್ನು ನಿರ್ಧರಿಸುವ ದತ್ತಾಂಶಗಳೂ ಈ ಅಂಶದಡಿ ಕ್ರೋಢೀಕರಣಗೊಳ್ಳುತ್ತವೆ.

**೩. ಸಾಮರ್ಥ್ಯ ಅಥವಾ ಧಾರಣಶಕ್ತಿ :** ನೀರನ್ನು ಪಡೆಯಲು ಕೈಗೊಳ್ಳುವ ಒಟ್ಟಾರೆ ವೆಚ್ಚದಾಯಕ ಕ್ರಮಗಳ ಮಾಹಿತಿ, ನಿರ್ಜಲೀಕರಣ ಮತ್ತು ನೀರಿನ ಸಂಬಂಧಿ ಸಾಂಕ್ರಾಮಿಕಗಳಿಂದ ಐದು ವರ್ಷದೊಳಗಿನ ಮಕ್ಕಳು ಮರಣಿಸುವ ಅಂಕಿಅಂಶಗಳು, ಜನತೆಯ ಶಿಕ್ಷಣದ ಮಟ್ಟ, ನಿಗದಿತ ಸಂಬಳ/ಪಿಂಚಣಿ ಪಡೆಯುವ ಮತ್ತು ನೀರಿನ ವೆಚ್ಚ ಭರಿಸಬಲ್ಲ ಕುಟುಂಬಗಳ ಶೇಕಡಾವಾರು ಅಂಕಿಅಂಶಗಳನ್ನು ಈ ಅಂಶದಡಿ ಚರ್ಚಿಸಲಾಗುತ್ತದೆ. ಜನಸಂಖ್ಯೆಯ ಎಷ್ಟು ಪಾಲು ಮಂದಿಗೆ ನೀರನ್ನು ಕೊಂಡು ಬಳಸುವ ಸಾಮರ್ಥ್ಯವಿದೆ ಎಂಬ ಮಾಹಿತಿ ಬಹಳ ಅಗತ್ಯ. ಕೊಂಡು ಬಳಸುವವರ ಸಂಖ್ಯೆ ಹೆಚ್ಚಿದಷ್ಟೂ ನೀರಿನ ಕೊರತೆಯ ಬವಣೆ ಗಂಭೀರ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ ಎಂಬುದನ್ನು ತೀರ್ಮಾನಿಸಬೇಕಾಗುತ್ತದೆ.

**೪. ಬಳಕೆ :** ಮನೆ ಅಥವಾ ಕುಟುಂಬಗಳಲ್ಲಿ, ಕೃಷಿಯಲ್ಲಿ ನೀರಿನ ಬಳಕೆಯ ಪ್ರಮಾಣ, ಮಳೆಯ ಹೊರತಾಗಿ ನೀರಾವರಿ ಸೌಲಭ್ಯವನ್ನು ಅವಲಂಬಿಸಿದ ಕೃಷಿ ಭೂಮಿಯ ಶೇಕಡಾವಾರು ವಿಸ್ತೀರ್ಣದ ಲೆಕ್ಕ, ಸಾಕುಪ್ರಾಣಿಗಳ ಸಂಖ್ಯೆ ಮತ್ತು ಅವುಗಳಿಗೆ ಲಭ್ಯವಿರುವ ನೀರಿನ ಪ್ರಮಾಣವನ್ನು ಮತ್ತು ಉದ್ದಿಮೆಗಳು ಬಳಸುವ ನೀರಿನ ಪ್ರಮಾಣವನ್ನು ಈ ಮಾನದಂಡದಡಿ ನಿರ್ಧರಿಸಲಾಗುತ್ತದೆ.

**೫. ಪರಿಸರ :** ನೀರಿನ ಬಳಕೆಯ ಮೇಲೆ ಬೀಳುವ ಬೇಡಿಕೆಯ ಒತ್ತಡ, ನೀರಿನ ಮರುಪೂರಣಕ್ಕೆ ಸುತ್ತಲಿನ ಪರಿಸರ ಎಷ್ಟರಮಟ್ಟಿಗೆ ಪೂರಕವಾಗಿವೆ, ನೀರಿಗೂ, ಜೀವ ವೈವಿಧ್ಯಕ್ಕೂ ಇರುವ ಸಂಬಂಧ, ಜನಸಂಖ್ಯೆಯನ್ನು ಅವಲಂಬಿಸಿರುವ ನೀರಿನ ಹೊರತಾದ ಸಂಪನ್ಮೂಲಗಳ ವಿವರ, ಹಿಂದಿನ ೫ ವರ್ಷಗಳ ಬೆಳೆ ನಷ್ಟದ ವರದಿಗಳು ಮತ್ತು ಕೃಷಿ ಭೂಮಿಯ ಮಣ್ಣಿನ ಸವಕಳಿಯ ಮಾಹಿತಿಗಳನ್ನು ಈ ಅಂಶದಡಿ ಪರಿಗಣಿಸಲಾಗುವುದು.

ಪರಸ್ಪರ ಸಂಬಂಧ ಹೊಂದಿರುವ ಈ ಎಲ್ಲ ಐದೂ ಅಂಶಗಳನ್ನು ಅವುಗಳ ಉಪಾಂಶಗಳೊಂದಿಗೆ ನಿರ್ದಿಷ್ಟ ಪ್ರದೇಶದಲ್ಲಿ ಸರ್ವೇ ಮೂಲಕ ಪಡೆದ ದತ್ತಾಂಶಗಳನ್ನು ಆಧರಿಸಿ ವಿಶ್ಲೇಷಿಸಿದರೆ ನೀ.ಬ.ಸೂ. ತಿಳಿದು ಬರುತ್ತದೆ. ಈ ಸೂಚ್ಯಂಕ ಶೇಕಡಾವಾರು ಮಾಹಿತಿಯನ್ನು ಅವಲಂಬಿಸುವುದರಿಂದ ಯಾವಾಗಲೂ ಅಂದಾಜು ಮೌಲ್ಯವಾಗಿರುತ್ತದೆ. ಪ್ರತಿ ಅಂಶಕ್ಕೂ ೨೦ ಗರಿಷ್ಠ ಅಂಕಗಳಿರುತ್ತವೆ.

**ಹಾನಿ**

ಹತ್ತಿಸಿ ಕೋಮು ಗಲಭೆ
ಸರಿದರು ಪರದೆಯ ಹಿಂದೆ
ರಾಜಕಾರಣಿಗಳು.
ಉರಿಯಿತು
ಧರ್ಮದ ದಳ್ಳುರಿ
ಸಾವು ನೋವಾಯ್ತು
ಅಮಾಯಕರದು.
ಪ್ರಾಣ ಹಾನಿ ಆಗಲಿಲ್ಲ
ಯಾವ
ರಾಜಕಾರಣಿಯದೂ.

**ದ್ವಾರನಕುಂಟೆ ಪಾತಣ್ಣ**

**ನೀ.ಬ.ಸೂ. : ಯಾರ ಸ್ಥಾನ ಎಲ್ಲೆಲ್ಲಿ ? ಯಾರ ಯೋಗ್ಯತೆ ಏನೇನು ?**

೨೦೦೩ರಲ್ಲಿ ಜಪಾನಿನ ಕ್ಯೋಟೋದಲ್ಲಿ ಜರುಗಿದ ೩ನೇ ವಿಶ್ವ ನೀರಿನ ವೇದಿಕೆಯ ಸಮಾವೇಶಕ್ಕೆ ಮುನ್ನ ಆಕ್ಸ್‌ಫರ್ಡ್ ವಿಶ್ವ ವಿದ್ಯಾನಿಲಯದ ಡಾ॥ ಕೆರೊಲಿನ್ ಸಲಿವಾನ್ ಅವರ ನೇತೃತ್ವದಲ್ಲಿ ೩೧ ಸಂಶೋಧಕರ ತಂಡವು ೧೦೦ ದೇಶಗಳ ತಜ್ಞರ ಜೊತೆ ಸಮಾಲೋಚನೆ ನಡೆಸಿ ೧೪೭ ದೇಶಗಳಿಗೆ ಸಂಬಂಧಿಸಿದ ನೀ.ಬ.ಸೂ.ವಿನ ಕೋಷ್ಟಕವನ್ನು ಸಿದ್ಧಪಡಿಸಿತು. ಈ ಕೋಷ್ಟಕದಲ್ಲಿ ೭೮ ಗರಿಷ್ಠ ರಾಷ್ಟ್ರೀಯ ಅಂಕಗಳೊಂದಿಗೆ ಫಿನ್‌ಲ್ಯಾಂಡ್ ಮೊದಲ ಸ್ಥಾನ ಪಡೆದಿದೆ. ನಂತರದಲ್ಲಿ ಕೆನಡಾ, ಐಸ್‌ಲ್ಯಾಂಡ್, ನಾರ್ವೆ, ಗಯಾನ, ಸೂರಿನಾಮ್, ಆಸ್ಟ್ರಿಯಾ, ಐರ್ಲೆಂಡ್, ಸ್ವೀಡನ್ ಮತ್ತು ಸ್ವಿಟ್ಸರ್‌ಲೆಂಡ್‌ಗಳಿವೆ. ೧೩೮ರಿಂದ ೧೪೭ರವರೆಗಿನ ಕಡೆಯ ಹತ್ತು ಸ್ಥಾನಗಳಲ್ಲಿ ಬುರುಂಡಿ, ರ್‍ವಾಂಡಾ, ಬೆನಿನ್, ಚಾದ್, ಧ್ಜಿಬೂಟಿ, ಮಲಾವಿ, ಎರಿಟ್ರಿಯ, ಇಥಿಯೋಪಿಯ, ನೈಜರ್ ಮತ್ತು ಹೈಟಿ (ಕನಿಷ್ಠ ಅಂಕ ೩೫) ಇವೆ. ನೀ.ಬ.ಸೂ.ವಿನ ಕೋಷ್ಟಕವನ್ನು ಗಮನಿಸಿದಾಗ ಯೋಜನಾಬದ್ಧವಾಗಿ ಮತ್ತು ಶೈಕ್ಷಣಿಕವಾಗಿ ಮುಂದುವರಿದ ದೇಶಗಳು ಮೇಲಿನ ಸ್ಥಾನಗಳನ್ನು ಪಡೆದಿದ್ದರೆ ಅತೀ ಬಡ ದೇಶಗಳು ಕೋಷ್ಟಕದ ಕಡೆ ಕಡೆಯ ಸ್ಥಾನಗಳ ಕಡೆಗೆ ಸರಿದಿವೆ.

ಡೊಮಿನಿಕನ್ ಗಣರಾಜ್ಯ ಮತ್ತು ಹೈಟಿ ಅಕ್ಕಪಕ್ಕದ ದೇಶಗಳು. ಹೈಟಿ ಕಡೆಯ ಸ್ಥಾನದಲ್ಲಿದ್ದರೆ ಡೊಮಿನಿಕನ್ ಗಣರಾಜ್ಯ ೬೪ನೇ ಸ್ಥಾನದಲ್ಲಿದೆ. ಎರಡೂ ದೇಶಗಳಲ್ಲಿ ನೀರಿನ ಲಭ್ಯ ಪ್ರಮಾಣ ಹೆಚ್ಚು ಕಡಿಮೆ ಒಂದೇ ಸಮನಾದುದು. ಆದರೆ ಉತ್ತಮ ಶಿಕ್ಷಣ ಮತ್ತು ಆರೋಗ್ಯ ವ್ಯವಸ್ಥೆಯಿಂದಾಗಿ ಡೊಮಿನಿಕನ್ ಗಣರಾಜ್ಯವು ನೀರಿನ ನಿರ್ವಹಣೆಯ ವಿಷಯ ದಲ್ಲಿ ಹೈಟಿಗಿಂತ ಎಷ್ಟೋ ಉತ್ತಮ ಸ್ಥಿತಿಯಲ್ಲಿದೆ. ಹೈಟಿ ಡೊಮಿನಿಕನ್ ಗಣರಾಜ್ಯದಿಂದ ನೀರಿನ ನಿರ್ವಹಣೆಯ ಕುರಿತು ಮಾರ್ಗದರ್ಶನ ಪಡೆದು ತನ್ನ ಸ್ಥಿತಿಯನ್ನು ಉತ್ತಮಗೊಳಿಸಿ ಕೊಳ್ಳಬಹುದಾಗಿದೆ.

ನೀರನ್ನು ಪಡೆದುಕೊಳ್ಳುವಲ್ಲಿ ಆಸ್ಟ್ರಿಯಾದ ದಕ್ಷತೆ ಹೆಚ್ಚಿನ ಮಟ್ಟದ್ದು. ನೀರಿನ ಅತಿ ಸೀಮಿತ ಸಂಪನ್ಮೂಲಗಳನ್ನು ಹೊಂದಿರುವ ಇಸ್ರೇಲ್, ಕುವೈತ್ ಮತ್ತು ಸೌದಿ ಅರೇಬಿಯಾಗಳು ಕೋಷ್ಟಕದ ಮೊದಲ ಐವತ್ತು ಸ್ಥಾನಗಳ ಒಳಗಿರಲು ಕಾರಣ ಅವು ಸಿಕ್ಕಷ್ಟು ನೀರನ್ನು ಅತ್ಯಂತ ದಕ್ಷ ನಿರ್ವಹಣಾ ಕ್ರಮಗಳ ಮೂಲಕ ನಿರ್ವಹಿಸುವುದೇ ಆಗಿದೆ. ಮರುಭೂಮಿಯನ್ನೇ ಹೆಚ್ಚು ಹೊಂದಿದ್ದರೂ ಎಲ್ಲ ಐದು ಅಂಶಗಳಲ್ಲಿ ಗಮನಾರ್ಹ ಸಾಧನೆ ಮಾಡಿ ೧೩ನೇ ಸ್ಥಾನ ಗಳಿಸಿರುವ ತುರ್ಕಮೆನಿಸ್ತಾನ್ ನಿತ್ಯ ಬಳಕೆಯೂ ಅಲ್ಲದೆ ನೀರಾವರಿಗೂ ಅಗತ್ಯವಿರು ವಷ್ಟು ನೀರನ್ನು ಕೌಶಲ್ಯದಿಂದ ನಿರ್ವಹಿಸಿ ಮಾದರಿ ದೇಶ ಎನಿಸಿದೆ.

ಬಳಕೆಯ ದಕ್ಷತೆಯಲ್ಲಿ ಅತಿ ಕಳಪೆ ಸಾಧನೆ ಯಾರದ್ದು ಗೊತ್ತೇ ? ಅಮೆರಿಕಾದ್ದು. ನಿತ್ಯ ಜೀವನದಲ್ಲಿ ನೀರನ್ನು ತಲಾವಾರು ಪೋಲುಮಾಡುವ ಪ್ರಮಾಣದಲ್ಲಿ ಅಮೆರಿಕನ್ನರನ್ನು ಯಾರೂ ಮೀರಿಸಲಾರರು (ಅಮೆರಿಕಾದಲ್ಲಿ ನೀರಿನ ತಲಾವಾರು ಲಭ್ಯತೆ ಜಗತ್ತಿನಲ್ಲೆ ಹೆಚ್ಚು). ಬೇರೆಲ್ಲ ಅಂಶಗಳಲ್ಲಿ ಅವರ ದಕ್ಷತೆ ಹೆಚ್ಚಿದ್ದರೂ ಬಳಸುವ ವಿಚಾರದಲ್ಲಿ ಅವರು ಇನ್ನೂ ಶಿಸ್ತನ್ನು ರೂಢಿಸಿಕೊಂಡಿಲ್ಲ. ಒಬ್ಬ ಅಮೆರಿಕನ್ ೫ ನಿಮಿಷಗಳ ಕಾಲ ಷವರ್ ಸ್ನಾನ ಮಾಡಿದರೆ ಆತ/ಆಕೆ ಭಾರತೀಯನೊಬ್ಬನ ಇಡೀ ದಿನದ

ಅವಶ್ಯಕತೆಗೆ ಸಮನಾಗುವಷ್ಟು ನೀರನ್ನು ಬಳಸಿರು ತ್ತಾನೆ/ಳೆ. ಜಗತ್ತಿನ ಜನರೆಲ್ಲ ಅಮೆರಿಕನ್ನರಂತೆ ಪೋಲು ಮಾಡುವುದನ್ನು ಅಭ್ಯಾಸ ಮಾಡಿಕೊಂಡರೆ ಶುದ್ಧ ನೀರನ್ನು ಪೂರೈಸಲು ಮೂರೂವರೆ ಭೂಮಿಗಳು ಬೇಕಾಗುತ್ತವೆ! ೩೨ನೇ ಸ್ಥಾನದಲ್ಲಿರುವ ಅಮೆರಿಕಾಕ್ಕೆ ಹೋಲಿಸಿದರೆ ೧೫ನೇ ಸ್ಥಾನದಲ್ಲಿರುವ ನ್ಯೂಜಿಲೆಂಡ್ ಎಷ್ಟೋ ಉತ್ತಮ. ಅಲ್ಲಿ ಜನರ ಬೇಡಿಕೆಗಿಂತ ಹೆಚ್ಚಿನ ಪ್ರಮಾಣದ ನೀರು ಲಭ್ಯವಿದೆ. ಅದನ್ನು ಅವರು ಅಮೆರಿಕನ್ನರಿಗಿಂತ ಹೆಚ್ಚು ದಕ್ಷವಾಗಿ ಎಲ್ಲ ಅಗತ್ಯಗಳಿಗೆ ಸರಿದೂಗಿಸಬಲ್ಲರು. ೨ನೇ ಸ್ಥಾನದಲ್ಲಿರುವ ಕೆನಡಾ ನೀರಿನ ಬಳಕೆಯ ಅದಕ್ಷತೆಯಲ್ಲಿ ಅಮೆರಿಕಾದ ತಮ್ಮನೇ ಸರಿ. ಆದರೆ ಉಳಿದೆಲ್ಲ ನಾಲ್ಕು ಅಂಶಗಳಲ್ಲಿ ಅತ್ಯುತ್ತಮ ಸಾಧನೆ ಮಾಡಿದೆ. ಜಗತ್ತಿನ ಪಾಲಿನಲ್ಲಿ ಶೇಕಡಾ ೯ರಷ್ಟು ಪ್ರಮಾಣದ ಶುದ್ಧ ನೀರನ್ನು ಕೆನಡಾ ಹೊಂದಿದೆ. ೧೧ನೇ ಸ್ಥಾನದಲ್ಲಿರುವ ಬ್ರಿಟನ್ ಸಾಧನೆ ಉತ್ತಮವೇ. ಅದರ ನೀ.ಬ.ಸೂ.ವನ್ನು ತಿಳಿಯಹೊರಟಾಗ ಯಥೇಚ್ಛ ಹಿಮಪಾತ ಮತ್ತು ತಂಪು ಹವಾಮಾನವಿದ್ದೂ ಬ್ರಿಟನ್ ಸಾಕಷ್ಟು ಒಣಪ್ರದೇಶವನ್ನು ಹೊಂದಿರುವ ವಿಚಾರ ಅಚ್ಚರಿ ಮೂಡಿಸುತ್ತದೆ. ಬ್ರಿಟನ್ ಅಲ್ಲದೆ ಫ್ರಾನ್ಸ್ (೧೮ನೇ ಸ್ಥಾನ) ಮತ್ತು ಜರ್ಮನಿ (೩೫ನೇ ಸ್ಥಾನ) ನೀರಿನ ವ್ಯರ್ಥಬಳಕೆಯನ್ನು ಎಲ್ಲ ರಂಗಗಳಲ್ಲೂ ತಗ್ಗಿಸಲು ಉತ್ತಮ ಯೋಜನೆಗಳನ್ನು ರೂಪಿಸುತ್ತ ಬಂದಿವೆ.

೪೪ನೇ ಸ್ಥಾನದಲ್ಲಿರುವ ಆಸ್ಟ್ರೇಲಿಯಾದ ಅಸಹಾಯಕತೆ ಅದರ ಭೌಗೋಳಿಕ ಲಕ್ಷಣದಲ್ಲಿದೆ. ಬಹುಪಾಲು ಬರಡು ಭೂಮಿಯನ್ನು ಹೊಂದಿರುವ ಆ ರಾಷ್ಟ್ರ ಕಡಿಮೆ ಮಳೆ ಮತ್ತು ನೀರಿನ ಮರುಪೂರಣಕ್ಕೆ ಸಹಕಾರಿಯಾದ ಪರಿಸರವನ್ನು ಹೊಂದಿಲ್ಲದ ಕಾರಣ ನೀರಿನ ಕೊರತೆಯನ್ನು ಅನುಭವಿಸುತ್ತಿದೆ. ೫೦ನೇ ಸ್ಥಾನದಲ್ಲಿರುವ ಬ್ರೆಜಿಲ್‌ನಲ್ಲಿ ನೀರಿಗೆ ಕೊರತೆ ಇಲ್ಲ (ಅಮೆಜಾನ್ ನದಿಯಿದೆಯಲ್ಲ). ಆದರೆ ಅಲ್ಲಿ ಅರಣ್ಯನಾಶದ ವೇಗ ನೋಡಿದರೆ ಅದು ಮುಂದೊಂದು ದಿನ ನೀರಿನ ಕೊರತೆಗೆ ಮುಖಾ ಮುಖಿಯಾಗಬಹುದು ಎಂದು ಅಂದಾಜಿಸಲಾಗಿದೆ. ೧೬ನೇ ಸ್ಥಾನದಲ್ಲಿರುವ ಚಿಲಿಯ ಸಾಧನೆ ಆಶಾದಾಯಕವಾಗಿದೆ. ಬೆಂಗಾಡುಗಳು ಮತ್ತು ಪ್ರತಿಕೂಲ ಹವಾಮಾನದಲ್ಲೂ ಅದು ನೀರನ್ನು ಸಮರ್ಥವಾಗಿ ನಿರ್ವಹಿಸುತ್ತದೆ.

೩೪ನೇ ಸ್ಥಾನದಲ್ಲಿರುವ ಜಪಾನ್‌ಅನ್ನು ಅನೇಕ ವಿಚಾರಗಳಲ್ಲಿ ಮಾದರಿ ಎಂದು ಪರಿಗಣಿಸುವುದುಂಟು. ಅದು ನಿಜವೂ ಇರಬಹುದು. ಆದರೆ ನೀರಿನ ಬಳಕೆಯ ವಿಚಾರ ಬಂದಾಗ ಜಪಾನ್ ನೀರಿಗೆ ಪೂರಕವಾದ ಪರಿಸರವನ್ನು ಕಾಪಾಡಿಕೊಳ್ಳುವಲ್ಲಿ ಹಿಂದೆಬಿದ್ದಿದೆ ಎನ್ನಬಹುದು. ಆದರೆ ದಕ್ಕಿದಷ್ಟು ನೀರನ್ನು ಪಡೆದುಕೊಳ್ಳುವ ಅದರ ಕೌಶಲ್ಯ ಮೆಚ್ಚುವಂತಹುದೇ. ೪೩ನೇ ಸ್ಥಾನದಲ್ಲಿರುವ ದಕ್ಷಿಣ ಕೊರಿಯ ಕಡಿಮೆ ನೀರಿನ ಸಂಪನ್ಮೂಲಗಳನ್ನು ಹೊಂದಿದ್ದಾಗ್ಯೂ ನೀರನ್ನು ಪಡೆದುಕೊಳ್ಳುವ ಅರ್ಥಾತ್ ಖರೀದಿಸುವ ಕೊರಿಯನ್ನರ ಸಾಮರ್ಥ್ಯ ದಂಗುಬಡಿಸುತ್ತದೆ. ೧೦೬ನೇ ಸ್ಥಾನದಲ್ಲಿರುವ ಚೀನಾದ ಚಿತ್ರಣ ಅಷ್ಟೇನೂ ಆಶಾದಾಯಕವಲ್ಲ. ನೀರಿನ ಮೂಲಗಳ ಪ್ರಮಾಣ, ಪಡೆದುಕೊಳ್ಳುವ ಜಾಣ್ಮೆ ಮತ್ತು ಪೂರಕ ಪರಿಸರದ ಸಂರಕ್ಷಣೆಯಲ್ಲಿ ಅದು ಹಿಂದುಳಿದಿದೆ.

ದೊಡ್ಡ ನದಿಗಳು ಹರಿದು ಹೋಗುವ ಕೆಲವೇ ಪ್ರದೇಶಗಳನ್ನು ಹೊರತುಪಡಿಸಿದಂತೆ ಆಫ್ರಿಕಾದ ಬಡ ದೇಶಗಳು ನೀರಿಗೆ ಸಂಬಂಧಿಸಿದ ಎಲ್ಲ ಅಂಶಗಳಲ್ಲೂ ಹಿಂದೆಬಿದ್ದಿವೆ. ಹಲವೆಡೆ ಸಿಕ್ಕುವ ಅತೀ ಕಡಿಮೆ ಪ್ರಮಾಣದ ನೀರೂ ಶುದ್ಧವಾಗಿರುವುದಿಲ್ಲ. ನೀರಿನ ಮೂಲಗಳ ಕಳಪೆ ನಿರ್ವಹಣೆಗೆ ಆರ್ಥಿಕ ಸಾಮರ್ಥ್ಯದ ಕೊರತೆ ಮೂಲ ಕಾರಣವಾದರೆ, ನೀರನ್ನು ಕುರಿತ ತಿಳುವಳಿಕೆ ಪಡೆಯಲು ಸೂಕ್ತ ಶಿಕ್ಷಣವಿಲ್ಲದಿರುವುದು ಇನ್ನೊಂದು ಕಾರಣ. ಈ ಗುಂಪಿನಲ್ಲಿ ಎರಿಟ್ರಿಯ, ಚಾಡ್, ಇಥಿಯೋಪಿಯ, ಮಲಾವಿ ಮತ್ತು ರ್‍ವಾಂಡಾಗಳದು ಅತಿ ಕಳಪೆ ಸಾಧನೆ. ನೀರಿನ ಬಡತನ ತಿಳಿಯಹೋಗಿ ನಾವು ಒಂದು ದೇಶದ ಬಡತನದ ಸಮಗ್ರ ಸ್ವರೂಪವನ್ನೇ ತಿಳಿಯಲು ಸಾಧ್ಯವಿದೆ.

೧೦೩ನೇ ಸ್ಥಾನದಲ್ಲಿರುವ ದಕ್ಷಿಣ ಆಫ್ರಿಕಾ ಭಾರತಕ್ಕಿಂತಲೂ ಮೂರು ಸ್ಥಾನ ಕೆಳಗಿದೆ. ಆದರೆ ದಕ್ಕಿದಷ್ಟು ನೀರನ್ನು ಸಮರ್ಥವಾಗಿ ಬಳಸುವ ವಿಚಾರದಲ್ಲಿ ಅಲ್ಲಿನವರು ನಮಗಿಂತ ನಿಸ್ಸೀಮರು. ಉಳಿದೆಲ್ಲ ನಾಲ್ಕು ಅಂಶಗಳಲ್ಲಿ ಅವರು ಬಹಳ ಹಿಂದಿದ್ದಾರೆ. ೧೦೦ನೇ ಸ್ಥಾನದಲ್ಲಿರುವ ಭಾರತದ ಮಾದರಿ ನಮ್ಮ ಮಟ್ಟಿಗಂತೂ ನಿರಾಶದಾಯಕವೇ ಸರಿ. ಭಾರತದಲ್ಲಿ ತಲಾವಾರು ಬಳಕೆಗೆ ನೀರಿನ ಲಭ್ಯತೆಯೂ ಕಡಿಮೆ, ಲಭ್ಯ ನೀರನ್ನು ಬಳಸುವಲ್ಲಿ ದಕ್ಷತೆಯೂ ಕಡಿಮೆ. ನೀರನ್ನು ನಿರ್ವಹಿಸುವ ಕೌಟುಂಬಿಕ ಹಾಗೂ ಆಡಳಿತಾತ್ಮಕ ವೈಖರಿಗಳಲ್ಲಿ ನಿರ್ಲಕ್ಷ್ಯತೆ ಹೆಪ್ಪುಗಟ್ಟಿದೆ. ಕರ್ತವ್ಯ ಭ್ರಷ್ಟತೆ, ಅಪ್ರಾಮಾಣಿಕತೆ, ದೂರದೃಷ್ಟಿರಹಿತ ನೀತಿಗಳು, ಸ್ವಜನ ಪಕ್ಷಪಾತ, ಚುನಾವಣೆಗಳು ಸನಿಹವಾದಾಗ ಮಾತ್ರ ರೂಪಿಸಲ್ಪಡುವ ಅಗ್ಗದ ಯೋಜನೆಗಳ ಜಾರಿಯಲ್ಲಿ ಅನಪೇಕ್ಷಣೀಯ ರಾಜಕೀಯ ಬೆರೆತುಕೊಳ್ಳುವುದು... ಹೀಗೆ ಹಲವು ನಕಾರಾತ್ಮಕ ಅಂಶಗಳಿಂದಾಗಿ ನಮ್ಮ ದೇಶಕ್ಕೆ ಸಾರ್ವತ್ರಿಕವಾದ, ಸಾರ್ವಕಾಲಿಕವಾದ ಒಂದು ದಕ್ಷ ನೀರಿನ ನೀತಿಯನ್ನು ರೂಪಿಸಲು ಇನ್ನೂ ಸಾಧ್ಯವಾಗಿಲ್ಲ. ನಮ್ಮಲ್ಲಿ ಈ ತನಕ ನೀರು ಒಂದು ಗುರುತರವಾದ ವಿಚಾರ ಎಂದು ಪರಿಗಣಿಸಲ್ಪಟ್ಟಿಲ್ಲ. ಹೀಗಾಗಿ ಗುಜರಾತ್, ರಾಜಸ್ಥಾನದಲ್ಲಿ ಮಹಿಳೆಯರು ಕಿಲೋಮೀಟರ್‌ಗಟ್ಟಲೆ ದೂರದಿಂದ ಅಡುಗೆಗೆ ಮತ್ತು ಕುಡಿಯಲು ನೀರು ಹೊತ್ತು ತರುವ ದಯನೀಯ ದೃಶ್ಯ ಒಂದೆಡೆ ಇದ್ದರೆ, ವಾಟರ್ ಪಾರ್ಕ್‌ಗಳಲ್ಲಿ ನೀರು ಧಾರಾಳ ಮಲಿನವಾಗುವ, ದುರ್ಬಳಕೆಯಾಗುವ ದಿವ್ಯ ನಿರ್ಲಕ್ಷ್ಯದ ದೃಶ್ಯ ಇನ್ನೊಂದೆಡೆ ಕಾಣಬರುತ್ತದೆ.

ನೀರಿನ ಬಡತನದ ಸೂಚ್ಯಂಕವನ್ನು ತರ್ಕಿಸುವ ವೈಜ್ಞಾನಿಕ ವಿಧಾನ ಜಾರಿಗೆ ಬಂದು ಹದಿಮೂರು ವರ್ಷಗಳು ಕಳೆದಿದ್ದರೂ ಸಮೀಕ್ಷೆಗೆ ಒಳಪಟ್ಟ ಬಹುಪಾಲು ದೇಶಗಳಲ್ಲಿ ಗಮನಾರ್ಹವಾದ ಗುಣಾತ್ಮಕ ಬದಲಾವಣೆ ಮತ್ತು ಭರವಸೆ ಕಾಣಬಂದಿಲ್ಲ. ಜಾಗತಿಕ ತಾಪ ಏರಿಕೆ ನೀರಿನ ಮೂಲಗಳನ್ನು ಬತ್ತಿಸುತ್ತಿರುವುದರ ನಡುವೆ ಎಲ್ಲೆಡೆ ಪ್ರಭುತ್ವಗಳ ನಿರ್ಲಕ್ಷ್ಯತೆ ಗಾಬರಿ ಹುಟ್ಟಿಸುವಂತಿದೆ. ನೀರನ್ನು ಮೊದಲ ಆದ್ಯತೆಯಾಗಿ ಪರಿಗಣಿಸಬೇಕಾದ ಕಡೆ ಕೋಮುವಾದ, ಭಯೋತ್ಪಾದನೆ, ಯುದ್ಧೋನ್ಮಾದ, ಸರ್ಕಾರಗಳ ಅರಾಜಕತೆ ಮತ್ತು ಪರಿಸರನಾಶಕ್ಕೆ ಪ್ರೇರಣೆಯ ರಾಜಕೀಯವೇ ಹೆಚ್ಚಿನ ಸಮಯವನ್ನು ತಿಂದು ಬರಗಾಲದಂತಹ ಸನ್ನಿವೇಶಗಳನ್ನು ಇನ್ನಷ್ಟು ರೂಪಿಸತೊಡಗಿದೆ.

**ಬೇಡಿಕೆಯ ಒತ್ತಡ**

ಪ್ರತೀ ದಿನ ಪ್ರತೀ ವ್ಯಕ್ತಿಗೂ ಸರಾಸರಿ ೫೦ ಲೀಟರ್‌ಗಳಷ್ಟು ನೀರು ಬೇಕು. ಅಂದರೆ ವರ್ಷಕ್ಕೆ ೧೮,೨೫೦ ಲೀಟರ್‌ಗಳು. ಆ ವ್ಯಕ್ತಿಯ ೭೦ ವರ್ಷದ ಜೀವಿತಾವಧಿಗೆ ಲೆಕ್ಕ ಹಾಕಿದರೆ ೧೨,೭೭,೦೦೦ ಲೀಟರ್‌ಗಳು ಬೇಕು. ಅಲ್ಲಿಗೆ ನಾಲ್ಕು ಜನರ ಒಂದು ಕುಟುಂಬಕ್ಕೆ ೭೦ ವರ್ಷಗಳಿಗೆ ೫೧,೧೦,೦೦೦ ಲೀಟರ್‌ಗಳು! ಇನ್ನು ೭೫೦ ಕೋಟಿ ಜನಸಂಖ್ಯೆಗೆ ಬಡಪಾಯಿ ಭೂಮಿ ಅದೆಷ್ಟು ನೀರನ್ನು ಒದಗಿಸಬೇಕು, ನೀವೇ ಲೆಕ್ಕ ಹಾಕಿ? ೨೦೦೦ದ ಇಸವಿಯಲ್ಲಿ ಜಗತ್ತಿನ ಮೂವತ್ತು ದೇಶಗಳ (ಜಗತ್ತಿನ ಒಟ್ಟು ಜನಸಂಖ್ಯೆಯ ಶೇಕಡಾ ೨೦ರಷ್ಟು) ಜನತೆ ನೀರಿನ ತೀವ್ರ ಕೊರತೆಗೆ ಸಿಲುಕಿದ್ದರು. ೨೦೨೫ನೇ ಇಸವಿಯ ಹೊತ್ತಿಗೆ ೫೦ ದೇಶಗಳ ಜನತೆ ಈ ಬವಣೆಗೆ ಸಿಲುಕುವುದಲ್ಲದೆ ಒಟ್ಟಾರೆ ೨೫೦ ಕೋಟಿ ಜನ ನೀರಿನ ಭೀಕರ ಕ್ಷಾಮಕ್ಕೆ ತುತ್ತಾಗುವ ಸಾಧ್ಯತೆಯಿದೆ ಎಂದು ಅಂದಾಜು ಮಾಡಲಾಗಿದೆ. ೨೦೫೦ನೇ ಇಸವಿಯ ಹೊತ್ತಿಗೆ ಜಗತ್ತಿನ ಜನಸಂಖ್ಯೆ ೯೦೦ ಕೋಟಿಯನ್ನು ತಲುಪುವ ಸೂಚನೆ ಇರುವುದರಿಂದ ನೀರಿಗೆ ಹೆಚ್ಚುವ ಬೇಡಿಕೆಯ ಸ್ವರೂಪ ಊಹಾತೀತವೇ ಸರಿ. ಮನುಕುಲ ಈ





ಪಾರಿಸಾರಿಕ ಮತ್ತು ಆಡಳಿತಾತ್ಮಕ ಸವಾಲನ್ನು ಹೇಗೆ ಎದುರಿಸುವುದೋ ಈಗಲೇ ಮುನ್ಸೂಚಿಸುವುದು ದುಸ್ತರವೇ ಸರಿ.

ಪ್ರಯತ್ನ ಸಣ್ಣದೇ ಆದರೂ ಈಗಿನಿಂದಲೇ ಕ್ರಿಯಾಶೀಲರಾಗಬೇಕಾದ ಅನಿವಾರ್ಯತೆ ನಮ್ಮೆದುರಿಗಿದೆ. ನಮ್ಮ ಮನೆಗಳಿಂದಲೇ ನೀರಿನ ಮಿತಬಳಕೆ ಮತ್ತು ಮರುಬಳಕೆಯ ಬಗ್ಗೆ ವಿಧಾನಗಳನ್ನು ಆವಿಷ್ಕರಿಸಿಕೊಳ್ಳಬೇಕಿದೆ. ಮನೆಯಿಂದ ಆರಂಭವಾಗುವ ಸುಧಾರಣೆಯನ್ನು, ಸಾಮುದಾಯಿಕ ಪ್ರಯತ್ನವಾಗಿಸುವ ನಿಟ್ಟಿನಲ್ಲಿ ಸರ್ಕಾರಗಳು ಗಂಭೀರವಾಗಿ ಚಿಂತಿಸಬೇಕಿದೆ. ನೀರನ್ನು ಕುರಿತು ಹೆಚ್ಚು ಆಪ್ತವಾದ, ಹೆಚ್ಚು ಆಸಕ್ತಿದಾಯಕವಾದ, ಚಟುವಟಿಕೆಗಳಿಂದ ಕೂಡಿದ ವಿಶಿಷ್ಟ ಪಠ್ಯಕ್ರಮವೊಂದು ನಮ್ಮ ಮಕ್ಕಳಿಗೆ ಅಗತ್ಯವಿದೆ. ಯುವಜನರಿಗೆ ಮಳೆನೀರಿನ ಕೊಯಿಲು ಮತ್ತು ನೀರಿಗೆ ಸಂಬಂಧಿಸಿದ ಎಲ್ಲ ಬಗೆಯ ಸಣ್ಣ ದೊಡ್ಡ ತಾಂತ್ರಿಕ ಮಗ್ಗಲುಗಳನ್ನು ಒಳಗೊಂಡ ಉನ್ನತ ಪದವಿಯ ಕೋರ್ಸುಗಳನ್ನು ಆರಂಭಿಸಬೇಕಿದೆ. ಭವಿಷ್ಯದಲ್ಲಿ ಹೆಚ್ಚು ಸಮರ್ಥವಾಗಿ ನೀರಿಗಾಗಿ ರಚನಾತ್ಮಕ ಕ್ರಿಯೆಗಳಲ್ಲಿ ತೊಡಗಬಲ್ಲ ಜಲಸಾಕ್ಷರರ ಸಂಖ್ಯೆ ಹೆಚ್ಚಿಸಲು ಈಗಿಂದೀಗಲೇ ಮೈಕೊಡವಿ ಸಜ್ಜಾಗಬೇಕಿದೆ.

ಇಡೀ ಸಮಾಜವನ್ನು ಅಸದೃಶ ಬಿಕ್ಕಟ್ಟಿಗೆ ಸಿಕ್ಕಿಸಬಲ್ಲ ನೀರಿನ ಅಗಾಧ ಶಕ್ತಿಯ ಬಗ್ಗೆ ಅರಿಯ ಬೇಕಿದೆ. ನೀರಿನ ಮೂಲಗಳಿಗೆ ಮರುಪೂರಣ ಮಾಡುವ ನಿರಂತರ ಯೋಜನೆಗಳಿಗೆ ಚಾಲನೆ ನೀಡದೇ ಹೋದರೆ ನೀರಿನ ಬಡತನ ಮರುಭೂಮಿಗಳನ್ನು ಸೃಷ್ಟಿಸಬಲ್ಲುದು. ನೀರಿನ ಮೂಲಗಳನ್ನು ಎಲ್ಲ ಬಗೆಯ ನಿರ್ಲಕ್ಷ್ಯ ಮತ್ತು ಅತಿಕ್ರಮಣಗಳಿಂದ ರಕ್ಷಿಸುವುದು ನಮ್ಮ ಕಾಲದ ಅತಿ ತುರ್ತಿನ ಕಾಳಜಿಯಾಗಬೇಕಿದೆ. ಮಳೆನೀರಿನ ಹರಿವಿನ ಜಾಡುಗಳನ್ನು ಯಥಾವತ್ ಉಳಿಸಿಕೊಳ್ಳುವುದೂ ಅಷ್ಟೇ ಮುಖ್ಯವಾಗಿದೆ.

ನೀರಿರುವುದು ನಮಗಾಗಿ ಎಂಬ ಅಹಂಕಾರ ಇಲ್ಲಿಯವರೆಗೆ ನಮ್ಮದಾಗಿತ್ತು. ಇನ್ನು ಮುಂದೆ ನೀರಿಗಾಗಿ ಮತ್ತು ನಮ್ಮ ಮಕ್ಕಳಿಗಾಗಿ ನಾವಿದ್ದೇವೆ ಎಂಬ ವಿನಮ್ರತೆ ಕಾರ್ಯರೂಪಕ್ಕೆ ಬರಬೇಕಿದೆ. ಇದಕ್ಕೆಲ್ಲ ನಾವು ಸಿದ್ಧರಾಗಿದ್ದೇವೆಯೆ ?


**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ
ಅಂಚೆ ಪೆಟ್ಟಿಗೆ ಸಂಖ್ಯೆ : ೯, ಹಾಸನ – ೫೭೩ ೨೦೧


## ಅಕಾಡೆಮಿ ಪ್ರಶಸ್ತಿ ಕುರಿತು

'**ಹೊ**ಸತು' ಗೌರವ ಸಂಪಾದಕ ಡಾ॥ ಜಿ. ರಾಮಕೃಷ್ಣ ಅವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯು ೨೦೧೪ನೇ ಸಾಲಿನ ಪ್ರಶಸ್ತಿಯನ್ನು ಘೋಷಿಸಿದ್ದು, ಜಿ.ಆರ್. ಅದನ್ನು ಸ್ವೀಕರಿಸದಿರಲು ತೀರ್ಮಾನಿಸಿದ್ದಾರೆ. ಆ ಕುರಿತು ಅಕಾಡೆಮಿಗೆ ಅವರು ನೀಡಿದ್ದ ಹೇಳಿಕೆಯ ಪೂರ್ಣಪಾಠ ಹೀಗಿದೆ :

ಕರ್ನಾಟಕ ಸಾಹಿತ್ಯ ಅಕಾಡೆಮಿಯು ೨೦೧೪ರ ಗೌರವ ಪ್ರಶಸ್ತಿಗಳನ್ನು ಪಡೆಯಲು ಆಯ್ಕೆಯಾಗಿರುವವರ ಪಟ್ಟಿಯನ್ನು ಪ್ರಕಟಿಸಿದೆ. ಅದರಲ್ಲಿ ನಾನು ಸಹ ಸೇರಿರುವುದು ನನಗೆ ಸಂತೋಷದ ಸಂಗತಿ. ನನ್ನ ಆಯ್ಕೆಗೆ ಕಾರಣರಾದ ಅಕಾಡೆಮಿಯ ಅಧ್ಯಕ್ಷರು, ಸದಸ್ಯರು ಮತ್ತು ಓದುಗ ಸನ್ಮಿತ್ರರಿಗೆ ನಾನು ಕೃತಜ್ಞನಾಗಿದ್ದೇನೆ. ನನ್ನ ಆಯ್ಕೆಯು ವೈಚಾರಿಕತೆಗೆ ಸಂದ ಮಾನ್ಯತೆ ಯೆಂಬುದು ನನ್ನ ಭಾವನೆ. ವೈಚಾರಿಕತೆ ಮತ್ತು ವಿದ್ವತ್ತು ಮೇಳೈಸಿದಾಗ ಮಾತ್ರವೇ ಎರಡಕ್ಕೂ ಘನತೆ ಮತ್ತು ವಿಶಾಲಾರ್ಥ ದೊರೆಯಬಲ್ಲುದು. ಆ ದೃಷ್ಟಿಯಿಂದ ಕರ್ನಾಟಕ ಸಾಹಿತ್ಯ ಅಕಾಡೆಮಿ ನನಗೆ ಗೌರವ ಪ್ರಶಸ್ತಿ ನೀಡಲು ತೀರ್ಮಾನಿಸಿರುವುದನ್ನು ತುಂಬುಹೃದಯದಿಂದ ಸ್ವಾಗತಿಸುತ್ತೇನೆ.

ತಾವು ಪಡೆದಿದ್ದ ಸರ್ಕಾರಿ ಪ್ರಶಸ್ತಿಗಳನ್ನು ಕಳೆದ ಕೆಲವು ತಿಂಗಳುಗಳಲ್ಲಿ ಅನೇಕರು ಹಿಂತಿರುಗಿಸಿದ್ದಾರೆ. ಅದಕ್ಕೆ ಕಾರಣವಾದ ಬಿಕ್ಕಟ್ಟಿನ ಸನ್ನಿವೇಶವು ದೇಶವನ್ನು ಬಾಧಿಸುತ್ತಿದೆ, ಕೇಂದ್ರ ಸರ್ಕಾರದ ಅಪಾರ ಅಕ್ರಮಗಳು ನಮ್ಮೆಲ್ಲರ ಪ್ರಜ್ಞೆಯನ್ನು ಕಲಕಿದೆ, ವಸ್ತುನಿಷ್ಠ ಪ್ರತಿಪಾದನೆಗಳು ಅಭಿವ್ಯಕ್ತಗೊಳ್ಳಲು ಅಡೆತಡೆಗಳು ನಿರ್ಮಾಣಗೊಂಡಿವೆ, ಕೇಂದ್ರ ಸರ್ಕಾರದ ಧೋರಣೆಗಳು ದೇಶವನ್ನು ವಿಭಜಿಸುತ್ತಿವೆ. ಅಂತಹ ಪ್ರತಿಕೂಲ ಸನ್ನಿವೇಶದಲ್ಲಿ ಗೌರವ ಪ್ರಶಸ್ತಿಯನ್ನು ಸ್ವೀಕರಿಸಲು ನನ್ನ ಮನಸ್ಸು ಒಡಂಬಡುತ್ತಿಲ್ಲ.

ಅಲ್ಲದೆ, ಕರ್ನಾಟಕ ರಾಜ್ಯ ಸರ್ಕಾರವು ಈವರೆಗೆ ಪ್ರೊಫೆಸರ್ ಬರಗೂರು ರಾಮಚಂದ್ರಪ್ಪನವರು ಸಲ್ಲಿಸಿರುವ ಸಂಸ್ಕೃತಿ ನೀತಿಯ ಪ್ರಸ್ತಾವವನ್ನು ಗಂಭೀರವಾಗಿ ಪರಿಗಣಿಸಿಲ್ಲ. ಮಾನ್ಯ ಕಲಬುರ್ಗಿಯವರ ಹತ್ಯೆಯಾಗಿ ಹಲವು ತಿಂಗಳುಗಳು ಉರುಳಿವೆ, ಆದರೆ ಅವರ ಹಂತಕರನ್ನು ಇನ್ನೂ ಪತ್ತೆ ಮಾಡಿಲ್ಲ ಮತ್ತು ಮೂಢನಂಬಿಕೆಗಳನ್ನು ತಡೆಗಟ್ಟಲು ಒಂದು ಸರಳ ಕಾಯಿದೆಯನ್ನು ಹೊರತರುವುದರಲ್ಲಿ ಕೂಡ ಸರ್ಕಾರ ವಿಫಲವಾಗಿದೆ. ಆಘಾತವನ್ನುಂಟು ಮಾಡುವ ಹಲವು ಸಂಗತಿಗಳು ನಮ್ಮ ಮುಂದಿವೆ. ವೆಂಕಟಪ್ಪ ಚಿತ್ರಶಾಲೆಯ ಖಾಸಗೀಕರಣವು ಅಂತಹ ಒಂದು ಪ್ರಸಂಗ. ಬೇಲೂರು – ಹಳೇಬೀಡಿನಂತಹ ಭವ್ಯ ಕಲಾ ಸಂಪತ್ತು ಜನಸಾಮಾನ್ಯರಿಗೆ ದೊರಕದಂತಾಗುವ ಜನವಿರೋಧಿ ನೀತಿಯನ್ನು ಕಾರ್ಯಗತಗೊಳಿಸುವಲ್ಲಿ ಸರ್ಕಾರವು ತರಾತುರಿಯಲ್ಲಿದೆ. ಸಾಂಸ್ಕೃತಿಕ ಪರಂಪರೆಯ ಎಲ್ಲ ಸಾರ್ವಜನಿಕ ಘಟಕಗಳೂ ಖಾಸಗಿ ವಲಯಕ್ಕೆ ಹಸ್ತಾಂತರವಾಗುವ ಸಾಧ್ಯತೆಗಳು ನಮ್ಮನ್ನು ಬೆಚ್ಚಿಬೀಳಿಸುತ್ತಿವೆ. ಅವನ್ನೆಲ್ಲ ಲಾಭದಾಯಕ ಉದ್ಯಮಗಳನ್ನಾಗಿಸಬೇಕೆಂಬ ಹುನ್ನಾರವು ಜನಸಾಮಾನ್ಯರನ್ನು ನಮ್ಮ ಕಲಾವೈಭವಗಳಿಂದ ದೂರವಿಟ್ಟು ಶ್ರೀಮಂತರಿಗೆ ಮತ್ತು ಪ್ರವಾಸಿಗಳಿಗೆ ಅವನ್ನು ಮೀಸಲಾಗಿಡುವ ಸಂಚಾಗಿ ತೋರುತ್ತಿದೆ. ಹಿಂದುಯೇತರ ಎಂಬ ಕಾರಣಕ್ಕೆ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗೆ ಒಂದು ಜಾತ್ರೋತ್ಸವದಲ್ಲಿ ಸಕ್ರಿಯವಾಗಿ ಭಾಗವಹಿಸಲಾಗದಂತಹ ಸಂವಿಧಾನ ವಿರೋಧಿ ಕಾನೂನು ನಮ್ಮಲ್ಲಿ ಜಾರಿಯಲ್ಲಿದೆ ಮತ್ತು ಅದರ ನಿವಾರಣೆಗೆ ಕ್ರಮ ಕೈಗೊಳ್ಳಲು ಸರ್ಕಾರವು ಈವರೆಗೆ ಮುಂದಾಗಿಲ್ಲ. ಒಟ್ಟಿನಲ್ಲಿ ನಮ್ಮ ದೇಶದ ಹಾಗೂ ನಮ್ಮ ರಾಜ್ಯದ ಸಾಂಸ್ಕೃತಿಕ ವಾತಾವರಣವು ತೀರಾ ಕಲುಷಿತಗೊಂಡಿದೆ.

ಇದಾವುದೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ವ್ಯಾಪ್ತಿಗೆ ಬರುವುದಿಲ್ಲ ವೆಂಬುದು ನಿಜ, ಆದರೆ ಜನವಿರೋಧಿ ಸಾಂಸ್ಕೃತಿಕ ನೀತಿಯನ್ನು ಅನುಸರಿಸಲು ಹಾತೊರೆಯುತ್ತಿರುವ ಕರ್ನಾಟಕ ಸರ್ಕಾರದ ಭಾಗವೇ ಆದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಒಂದು ಅಂಗ ನಮ್ಮ ಸಾಹಿತ್ಯ ಅಕಾಡೆಮಿ. ಆದ್ದರಿಂದ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು ಸ್ವೀಕರಿಸಲು ನನಗೆ ಹಿಂಜರಿಕೆ ಉಂಟಾಗಿದೆ. ಪ್ರಶಸ್ತಿಯನ್ನು ಸ್ವೀಕರಿಸದಿರುವುದು ಅಕಾಡೆಮಿಗೆ ಅಗೌರವ ತೋರಿದಂತಾಗುವುದಿಲ್ಲವೆಂದು ನಾನು ನಂಬಿದ್ದೇನೆ ಮತ್ತು ನನಗೆ ಗೌರವ ಪ್ರಶಸ್ತಿ ನೀಡಲು ತೀರ್ಮಾನಿಸಿದ ಅಕಾಡೆಮಿಗೆ ನಾನು ಋಣಿಯಾಗಿದ್ದೇನೆ. ಮತ್ತೊಮ್ಮೆ ನಾನು ಅಕಾಡೆಮಿಯ ಅಧ್ಯಕ್ಷರಿಗೆ, ಅಧಿಕಾರಿಗಳಿಗೆ, ಸದಸ್ಯರಿಗೆ ಮತ್ತು ನಾಡಿನ ಸಮಸ್ತ ಓದುಗರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ.

**– ಜಿ. ರಾಮಕೃಷ್ಣ**

# ಉನ್ನತ ಶಿಕ್ಷಣ ಸವಾಲು ಮತ್ತು ಸಾಧ್ಯತೆಗಳು

ಎಂ. ಜಿ. ಚಂದ್ರಶೇಖರಯ್ಯ

ನಮ್ಮ ಉನ್ನತ ಶಿಕ್ಷಣವು ಪರಿವರ್ತನೆಯ ಹಾದಿಯಲ್ಲಿದ್ದು, ಅದರ ಸದ್ಯದ ಸ್ಥಿತಿ–ಸ್ವರೂಪ ಕುರಿತು ಅನೇಕ ಆಕ್ಷೇಪಗಳು ವ್ಯಕ್ತವಾಗಿವೆ. ಹಾಗೂ ಅದು ವರ್ತಮಾನದ ಅಗತ್ಯಗಳನ್ನು ಪೂರೈಸಲು ವಿಫಲವಾಗಿರುವುದಷ್ಟೇ ಅಲ್ಲ, ಸವಕಲು ನಾಣ್ಯವಾಗಿದ್ದು ಪ್ರಸ್ತುತತೆಯನ್ನು ಕಳೆದುಕೊಂಡಿದೆ ಎಂಬ ಗಂಭೀರ ಆರೋಪಗಳನ್ನು ಎದುರಿಸುತ್ತಿದೆ. ಈ ಹಿನ್ನೆಲೆಯಲ್ಲಿ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯೊಂದನ್ನು ರೂಪಿಸಲು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಯು ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವವರು ಮತ್ತು ಶಿಕ್ಷಣ ತಜ್ಞರಿಂದ ಅಭಿಪ್ರಾಯ ಸಂಗ್ರಹ ಮಾಡುತ್ತಿದೆ. ಉನ್ನತ ಶಿಕ್ಷಣವನ್ನು ವರ್ತಮಾನಕ್ಕೆ ಸಲ್ಲುವಂತೆ ಪರಿಷ್ಕರಿಸಿ ಹೊಸ ನೀತಿಯನ್ನು ರೂಪಿಸುತ್ತಿರುವಾಗ ಅದಕ್ಕೆ ಯಾವುದಾದರೊಂದು ಮಾದರಿ ಇರಬೇಕೆ? ಇರಬೇಕೆಂದಾದರೆ ಆ ಮಾದರಿ ಯಾವುದಾಗಿರಬೇಕು, ಹೇಗಿರಬೇಕು? ಹೊಸ ಮಾದರಿಯೊಂದನ್ನು – ಯಾವುದು ಭಾರತದ ಸಾಂಸ್ಕೃತಿಕ ಬಹುತ್ವಕ್ಕೆ ಧಕ್ಕೆಯಾಗದಂತೆ ಅರ್ಥಪೂರ್ಣವಾಗಿ ಒಗ್ಗುವುದೋ ಅಂತಹ ಮಾದರಿಯನ್ನು ನಾವೇ ರೂಪಿಸಿಕೊಳ್ಳಬೇಕೆ? – ಎಂಬ ಪ್ರಶ್ನೆಗಳು ನಮ್ಮ ಎದುರಿಗೆ ಇವೆ. ಈ ನಡುವೆ ಭಾರತದ ಉನ್ನತ ಶಿಕ್ಷಣವು ಅಂತರರಾಷ್ಟ್ರೀಯ ಗುಣಮಟ್ಟಕ್ಕಿಂತ ತುಂಬ ಹಿಂದೆ ಉಳಿದಿದೆ – ಮಾತ್ರವಲ್ಲ, ಅದು ಅಸಂಗತವೂ ಆಗಿದೆ ಎಂಬ ಗಂಭೀರ ಆಕ್ಷೇಪಕ್ಕೆ ಗುರಿಯಾಗಿದೆ. ಅಂತರರಾಷ್ಟ್ರೀಯ ಗುಣಮಟ್ಟಕ್ಕೆ ಭಾರತದ ಉನ್ನತ ಶಿಕ್ಷಣವನ್ನು ಕೊಂಡೊಯ್ಯಬೇಕು ಎಂಬ ವಾದವನ್ನು ಒಪ್ಪಬಹುದಾದರೂ ಆ ಗುಣಮಟ್ಟವನ್ನು ಮುಟ್ಟುವಂತಹ ಉನ್ನತ ಶಿಕ್ಷಣದ ನೀತಿನಿರೂಪಣೆಯು ಪಶ್ಚಿಮ ರಾಷ್ಟ್ರಗಳಿಂದ ಆಮದು ಮಾಡಿಕೊಂಡ ಯಾವುದೋ ಮಾದರಿಯನ್ನು ಕಣ್ಮುಚ್ಚಿ ಅನುಕರಿಸುವುದರಿಂದ ಸಿದ್ಧವಾಗಬಾರದು. ಜಗತ್ತಿನ ಶ್ರೇಷ್ಠ ಶಿಕ್ಷಣ ಮಾದರಿಗಳ ಅವಲೋಕನ, ಅಧ್ಯಯನದಿಂದ ನಮ್ಮ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳಬಹುದು. ಆ ತಿಳಿವಳಿಕೆಯ ಬೆಳಕಿನಲ್ಲಿ ಭಾರತದ ಸಾಂಸ್ಕೃತಿಕ ಬಹುತ್ವ, ಸಾಮಾಜಿಕ ಮತ್ತು ಮುಖ್ಯವಾಗಿ ಪ್ರಜಾಪ್ರಭುತ್ವದ ನಿರೀಕ್ಷೆಗಳನ್ನು ಹುಸಿಗೊಳಿಸದ ಹೊಸ ಶಿಕ್ಷಣ ನೀತಿಯನ್ನು ನಾವಿಂದು ರೂಪಿಸಿಕೊಳ್ಳಬೇಕಾಗಿದೆ.

ಹೊಸ ಶಿಕ್ಷಣ ನೀತಿಯನ್ನು ಈಗ ರೂಪಿಸುವ ಅಗತ್ಯವೇನಿತ್ತು ಎಂಬುದಕ್ಕಿಂತ, ಆ ಶಿಕ್ಷಣ ನೀತಿಯನ್ನು ಯಾರು ರೂಪಿಸಲು ಹೊರಟಿದ್ದಾರೆ, ಅದರ ಹಿನ್ನೆಲೆಯೇನು, ಎಂಬುದನ್ನು ಗಮನಿಸಬೇಕು. ಯು.ಪಿ.ಎ. ಸರ್ಕಾರದ ಅವಧಿಯಲ್ಲಿ ಒಮ್ಮೆ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯೊಂದನ್ನು ರೂಪಿಸಲಾಗಿತ್ತು. ಆದರೆ ಈಗ ಬದಲಾದ ರಾಜಕೀಯ ಸನ್ನಿವೇಶದಲ್ಲಿ ಕೇಂದ್ರದಲ್ಲಿ ಅಧಿಕಾರದಲ್ಲಿರುವ ಪಕ್ಷವು ತನ್ನ ಸಿದ್ಧಾಂತಕ್ಕೆ ಒಪ್ಪುವ ಮತ್ತು ತನ್ನ ಕಾರ್ಯಸೂಚಿಗೆ ಅನುಗುಣವಾದ ಹೊಸ ಶಿಕ್ಷಣ ನೀತಿಯನ್ನು ತರಲು ಮುಂದಾಗಿದೆ. ಹೊಸ ಶಿಕ್ಷಣ ನೀತಿ–ಪ್ರಾಥಮಿಕ ಅಥವಾ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದ ನೀತಿಯು ಅಧಿಕಾರದಲ್ಲಿರುವ ರಾಜಕೀಯ ಪಕ್ಷದ ತತ್ವಸಿದ್ಧಾಂತಗಳನ್ನು ಮೀರಿ, ಒಟ್ಟು ರಾಷ್ಟ್ರದ ಹಿತದೃಷ್ಟಿ ಮತ್ತು ಶೈಕ್ಷಣಿಕ ಪ್ರಗತಿಯನ್ನು ಗಮನದಲ್ಲಿಟ್ಟುಕೊಂಡು ರೂಪುಗೊಳ್ಳಬೇಕು. ಶಿಕ್ಷಣ ನೀತಿಯು ಎಂದೂ

> ಉನ್ನತ ಶಿಕ್ಷಣದ Compartmentalization ; ಎಂದರೆ ತಾಂತ್ರಿಕ ವಿಶ್ವವಿದ್ಯಾಲಯ, ವೈದ್ಯಕೀಯ ವಿಶ್ವವಿದ್ಯಾಲಯ, ಕಾನೂನು ವಿಶ್ವವಿದ್ಯಾಲಯ, ಜನಪದ ವಿಶ್ವವಿದ್ಯಾಲಯ, ಸಂಸ್ಕೃತ ವಿಶ್ವವಿದ್ಯಾಲಯ, ಸಂಗೀತ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಕೃಷಿ ವಿಶ್ವವಿದ್ಯಾಲಯ, ತೋಟಗಾರಿಕೆ ವಿಶ್ವವಿದ್ಯಾಲಯ, ಪಶುಸಂಗೋಪನಾ ವಿಶ್ವವಿದ್ಯಾಲಯ - ಹೀಗೆ ವಿಷಯವಾರು ವಿಶ್ವವಿದ್ಯಾಲಯ ಸ್ಥಾಪನೆ ಶಿಕ್ಷಣದ ಸಮಗ್ರತೆ ಮತ್ತು ಅಂತರರಾಷ್ಟ್ರೀಯ ಅಧ್ಯಯನಕ್ಕೆ ಮಾರಕವಾಗುವುದು. ಈ ವಿನಾಶಕಾರಿ ಬೆಳವಣಿಗೆಯನ್ನು ಕುರಿತು ಶಿಕ್ಷಣತಜ್ಞರು ವಿರೋಧಿಸಿದ್ದರೂ ರಾಜಕೀಯ ಮತ್ತು ಇತರೆ ಲಾಭದ ಲೆಕ್ಕಾಚಾರದಲ್ಲಿ ಮುಳುಗಿರುವ ರಾಜಕಾರಣಿಗಳು, ಅಧಿಕಾರಿಗಳ ಕಿವಿಗೆ ಆ ಪ್ರತಿರೋಧದ ಧ್ವನಿ ಕೇಳುತ್ತಿಲ್ಲ. ತಜ್ಞರ ವಿವೇಕದ ಮಾತುಗಳಿಗೆ ಆಳುವ ವರ್ಗ ಕಿವಿ ಮುಚ್ಚಿ ಬಹಳ ಕಾಲವೇ ಆಗಿದೆ. ವಿಶ್ವವಿದ್ಯಾಲಯದ ಬೆಳವಣಿಗೆ, ಉನ್ನತ ಶಿಕ್ಷಣದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಅಗತ್ಯ ಮೂಲ ಸೌಲಭ್ಯ, ಬೋಧಕವರ್ಗ, ಶೈಕ್ಷಣಿಕ ವಾತಾವರಣ ನಿರ್ಮಾಣ ಮುಂತಾದ ಯಾವುದಕ್ಕೂ ಗಮನ ಕೊಡದೆ ಯಾವ ಪುರುಷಾರ್ಥಕ್ಕೆ ತೆರಿಗೆ ಹಣ ಪೋಲುಮಾಡಿ ಹೊಸ ವಿಶ್ವವಿದ್ಯಾಲಯಗಳನ್ನು ಆರಂಭಿಸಲಾಗುತ್ತಿದೆ? ಬಾಲಗ್ರಹ ಪೀಡಿತವಾಗಿರುವ, ರೋಗಗ್ರಸ್ತವಾಗಿರುವ ವಿಶ್ವವಿದ್ಯಾಲಯಗಳ ಪರಿಸ್ಥಿತಿಯನ್ನು ಮೊದಲು ಸುಧಾರಿಸಬೇಕಲ್ಲವೇ?



ಅಧಿಕಾರದಲ್ಲಿರುವ ಪಕ್ಷದ ಗುಪ್ತಕಾರ್ಯಸೂಚಿಗೆ ಅನುಗುಣವಾಗಿ ಸಿದ್ಧಗೊಳ್ಳಬಾರದು. ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳು ಕೂಡ ಪಕ್ಷಾತೀತವಾಗಿಯೇ ಆಯ್ಕೆಗೊಳ್ಳಬೇಕು. ಸರ್ಕಾರದಿಂದ ನಿಯೋಜನೆಗೊಳ್ಳುವ ಕೆಲವರು ಅವಕಾಶವಾದಿಗಳೂ ಪಕ್ಷಪಾತಿಗಳೂ ಆದ ವಿದ್ವಾಂಸರು ರೂಪಿಸಿದ ಪಠ್ಯಕ್ರಮ, ಪಠ್ಯಪುಸ್ತಕಗಳಿಂದ ಇಡೀ ಶಿಕ್ಷಣ ವ್ಯವಸ್ಥೆಯೇ ದುರ್ಬಲಗೊಳ್ಳುವುದು. ಎಡಪಂಥೀಯರು ಅಥವಾ ಬಲಪಂಥೀಯರು ಯಾರೇ ಆಗಿರಲಿ ಅವರ ಪೂರ್ವಗ್ರಹಿತ ರಾಜಕೀಯ ನಿಲುವುಗಳು ಶಿಕ್ಷಣ ನೀತಿ, ಪಠ್ಯಕ್ರಮ ರೂಪಿಸುವಲ್ಲಿ ಅಡ್ಡಿಯಾಗಬಾರದು. ಹೀಗಾಗಿ ರಾಜಕೀಯ ಪಕ್ಷದ ತತ್ವಸಿದ್ಧಾಂತಗಳು, ಗುಪ್ತಕಾರ್ಯಸೂಚಿ ಯಾರದೇ ಆಗಿರಲಿ, ಅದರಿಂದ ಶಿಕ್ಷಣ ವ್ಯವಸ್ಥೆ ದುರ್ಬಲಗೊಳ್ಳುವುದು ಹಾಗೂ ರಾಜಕೀಯ ಗುಪ್ತಕಾರ್ಯಸೂಚಿ ಆಗಿರಲಿ, ಅದು ಅಪಾಯಕರ. ಏಕೆಂದರೆ ಕಣ್ಣೆದುರಿನ ಶತ್ರುವಿನ ವಿರುದ್ಧ ಹೋರಾಡುವುದು ಸುಲಭಸಾಧ್ಯ ; ಅಗೋಚರ ಮಾಯಾಶತ್ರುವಿನ ವಿರುದ್ಧದ ಹೋರಾಟ ಸೋಲಿನಲ್ಲಿ ಪರ್ಯವಸಾನಗೊಳ್ಳುವುದು. ಅಲ್ಲದೆ ಗುಪ್ತಕಾರ್ಯಸೂಚಿಯು ಪ್ರಜಾತಂತ್ರ ವ್ಯವಸ್ಥೆಗೆ ಒಲ್ಲದ, ಬಗ್ಗದ ವಿಚಾರ. ಪ್ರಜಾತಂತ್ರ ವ್ಯವಸ್ಥೆ ಯಾವತ್ತೂ ಪಾರದರ್ಶಕವಾಗಿರಬೇಕು. ಆದ್ದರಿಂದ, ವಿಶಾಲ ತಳಹದಿಯ ಮೇಲೆ ನಿಂತ, "ಪಕ್ಷ"ಪಾತದ ಸಂಕುಚಿತ ರಾಜಕೀಯ ಸಿದ್ಧಾಂತಗಳಿಗೆ ಹೊರತಾದ ವರ್ತಮಾನದ ಅಗತ್ಯ ಮತ್ತು ದೂರದೃಷ್ಟಿಯಿಂದ ಕೂಡಿದ ಬಹುರೂಪಿ ಸಂಸ್ಕೃತಿಯ ಸ್ಪಂದನೆಯುಳ್ಳ ಹೊಸ ಶಿಕ್ಷಣ ನೀತಿಯನ್ನು ರೂಪಿಸುವಂತೆ ಶಿಕ್ಷಣ ತಜ್ಞರು ಮತ್ತು ಶಿಕ್ಷಣ ಪ್ರೇಮಿಗಳು ಸರ್ಕಾರವನ್ನು ಒತ್ತಾಯಿಸಬೇಕಾಗಿದೆ.

ಭಾರತದ ಉನ್ನತ ಶಿಕ್ಷಣದ ಸ್ಥಿತಿಗತಿ ಅರಿಯಲು ಕರ್ನಾಟಕದ ಉದಾಹರಣೆಯನ್ನು ಇಟ್ಟುಕೊಂಡು ವಿವರಿಸಿದರೆ ವಸ್ತುಸ್ಥಿತಿಗೆ ಹತ್ತಿರವಾದ ಸ್ಪಷ್ಟ ಚಿತ್ರಣ ಮೂಡುವುದು. ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವ ಕಾಲದಿಂದಲೂ ಉನ್ನತ ಶಿಕ್ಷಣವು ಸರ್ಕಾರದ ಹಿಡಿತದಲ್ಲಿಯೇ ಇದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಈ ಚಿತ್ರಣ ಸಂಪೂರ್ಣವಾಗಿ ಬದಲಾಗಿದ್ದು, ಹೆಚ್ಚಿನ ಸ್ನಾತಕ ಪದವಿ ಕಾಲೇಜುಗಳು ಸರ್ಕಾರಕ್ಕಿಂತ ಖಾಸಗಿಯವರ ಕೈಯಲ್ಲಿಯೇ ಇವೆ. ಕಳೆದೊಂದು ದಶಕದಿಂದೀಚೆಗೆ ರಾಜ್ಯ ಸರ್ಕಾರ ಹಲವು ಹೊಸ ವಿಶ್ವವಿದ್ಯಾಲಯಗಳನ್ನು ತೆರೆದಿದ್ದರೂ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಖಾಸಗಿ ವಿಶ್ವವಿದ್ಯಾಲಯಗಳೂ ತಲೆ ಎತ್ತಿವೆ. ಈಚಿನ ವರ್ಷಗಳಲ್ಲಿ ಸರ್ಕಾರವು ಉನ್ನತ ಶಿಕ್ಷಣದ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತ ಶಿಕ್ಷಣದ ಖಾಸಗೀಕರಣದ ಹಾದಿಯನ್ನು ಮುಕ್ತಗೊಳಿಸಿದೆ. ಈ ಖಾಸಗಿ ಪದವಿ ಕಾಲೇಜುಗಳು, ಖಾಸಗಿ ವಿಶ್ವವಿದ್ಯಾಲಯಗಳು ಮಾರುಕಟ್ಟೆಯಲ್ಲಿ ಬೇಡಿಕೆ ಇರುವ, ಹೆಚ್ಚಿನ ಲಾಭ ತರುವ ಹೊಸ ಹೊಸ ಮೂಲವಿಜ್ಞಾನ ಪದವಿ ಕೋರ್ಸ್‌ಗಳನ್ನು ಮಾತ್ರ ಆರಂಭಿಸುತ್ತಿವೆ. ಹಾಗೂ ಮೂಲ ವಿಜ್ಞಾನ ಕಲೆ, ಮಾನವಿಕ ವಿಷಯಗಳನ್ನೊಳಗೊಂಡ ಸಾಂಪ್ರದಾಯಿಕ ಪದವಿ ಕೋರ್ಸ್‌ಗಳನ್ನು ನಿರ್ಲಕ್ಷಿಸುತ್ತಿವೆ. ಈ ಖಾಸಗಿ ಕಾಲೇಜುಗಳು ಮತ್ತು ಖಾಸಗಿ ವಿಶ್ವವಿದ್ಯಾಲಯಗಳಿಗೆ ಸೇರುವ ಹೆಚ್ಚಿನ ವಿದ್ಯಾರ್ಥಿಗಳು ಶ್ರೀಮಂತರು ಹಾಗೂ ಹೊರರಾಜ್ಯ ಮತ್ತು ಹೊರದೇಶಗಳಿಂದ ಬಂದವರು ಎಂಬುವುದು ಗಮನಾರ್ಹ ಸಂಗತಿ. ಖಾಸಗಿ ಕಾಲೇಜುಗಳು ಮೂಲವಿಜ್ಞಾನ, ಕಲೆ, ಮಾನವಿಕ ವಿಷಯಗಳನ್ನು ನಿರ್ಲಕ್ಷಿಸುತ್ತಿರುವುದು ಹಾಗೂ ಪ್ರತಿಭಾವಂತ ವಿದ್ಯಾರ್ಥಿಗಳು ಈ ಸಾಂಪ್ರದಾಯಿಕ ಪದವಿ ಕೋರ್ಸ್‌ಗಳನ್ನು ಆಯ್ಕೆ ಮಾಡಿಕೊಳ್ಳದಿರುವುದು ಶಿಕ್ಷಣದ ಪ್ರಗತಿಯ ದೃಷ್ಟಿಯಿಂದ ಆರೋಗ್ಯಕರ ಬೆಳವಣಿಗೆಯಲ್ಲ. ಸದ್ಯದ ಈ ಪರಿಸ್ಥಿತಿಯೇ ಮುಂದುವರಿದರೆ ಪ್ರಾಥಮಿಕ, ಪ್ರೌಢ ಮತ್ತು ಪದವಿಪೂರ್ವ ಹಂತಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ವಿಜ್ಞಾನ, ಕಲೆ, ಮಾನವಿಕ ವಿಷಯಗಳನ್ನು ಸಮರ್ಥವಾಗಿ, ಪರಿಣಾಮಕಾರಿಯಾಗಿ ಬೋಧಿಸಲು / ಕಲಿಸಲು

# ಮರವಾಗುವ ಬಯಕೆ






ನನಗೂ ಇದೆ
ಮರವಾಗಿ ಬೆಳೆಯುವ ಬಯಕೆ
ಬೆಳೆದು ನಿಲ್ಲಲಿಕ್ಕಲ್ಲ ನೂರುಕಾಲ
ಬದುಕುತ್ತೇನೆ ನೆರಳಾಗಿ ಮೂರು ಕಾಲ

ಜೀವನವೆಲ್ಲಾ ಪಡೆದಿದ್ದಾಯಿತು
ನೀಡುವ ಮಾತು ದೂರವೆ ಉಳಿಯಿತು
ಪ್ರೀತಿಸಲಿಲ್ಲ ಜಗದ ಪ್ರಕೃತಿ
ಪಡೆಯಲಿಚ್ಛಿಸುತ್ತೇನೆ ಜನರ ಸಂಪ್ರೀತಿ

ಚಿಗುರೊಡೆಯುತ್ತೇನೆ
ಹಳೆ ಕೊಳೆಯ ತೊಳೆದು
ಹೂವಂತೆ ಅರಳುವೆನು
ಹೊಸ ಚೆಲುವ ಪಡೆದು

ಸೂಸುತ್ತಾ ನಸುಗಂಪು
ನೀಡುತ್ತಾ ತುಸು ತಂಪು
ಕೊಡೆಯ ಬಿಡಿಸುತ್ತೇನೆ ನಾನು
ನನ್ನೊಡಲಲ್ಲಿ ಗೂಡು ಕಟ್ಟಿಕೊಳ್ಳಿ ನೀವು

ಸಂಭ್ರಮಿಸುತ್ತೇನೆ
ನಿಮ್ಮ ಸಂತಸದ ಕೂಗಿಗೆ
ಸಾರ್ಥಕವ ಪಡೆದೇನು
ನಾನು ಮರವಾದ ಬಾಳಿಗೆ

**ಆರ್. ಶಿವಶಂಕರ ಸೀಗೆಹಟ್ಟಿ**
ಸೀಗೆಹಟ್ಟಿ, ದೊಡ್ಡಘಟ್ಟ ಅಂಚೆ
ಹಿರಿಯೂರು ತಾಲೂಕು, ಚಿತ್ರದುರ್ಗ ಜಿಲ್ಲೆ – ೫೭೭ ೫೯೮

ಶಕ್ತರಾದ ಉಪನ್ಯಾಸಕರು ದೊರಕುವುದು ದುಸ್ತರವಾಗುವುದು. ಪ್ರತಿಭಾವಂತ ವಿದ್ಯಾರ್ಥಿಗಳು ಹೆಚ್ಚಿನವರು ತಾಂತ್ರಿಕ, ವೈದ್ಯಕೀಯ ಮುಂತಾದ ವೃತ್ತಿಪರ ಕೋರ್ಸ್‌ಗಳನ್ನು ಮಾತ್ರ ಆಯ್ಕೆ ಮಾಡುತ್ತಿರುವುದು, ಆ ಪ್ರವೃತ್ತಿಯನ್ನು ಪೋಷಿಸುವಂತಹ ವಾತಾವರಣ ನಿರ್ಮಾಣವಾಗಿರುವುದು ಉನ್ನತ ಶಿಕ್ಷಣ – ಮುಖ್ಯವಾಗಿ ಮೂಲವಿಜ್ಞಾನ, ಕಲೆ, ಮಾನವಿಕ ವಿಷಯಗಳ ಅಧ್ಯಯನವು ನಿರ್ಲಕ್ಷ್ಯಕ್ಕೊಳಗಾಗಲು ಮುಖ್ಯ ಕಾರಣವಾಗಿದೆ. ಈ ಬೆಳವಣಿಗೆಯು ಮುಂದಿನ ದಿನಗಳಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಗಂಭೀರ ಪರಿಣಾಮನ್ನುಂಟುಮಾಡುವುದು.

ಮೂಲ ವಿಜ್ಞಾನ, ಕಲೆ, ಮಾನವಿಕ ವಿಷಯಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿರುವುದಕ್ಕೆ ಕೇವಲ ವಿದ್ಯಾರ್ಥಿಗಳನ್ನು ಮಾತ್ರ ಹೊಣೆಗಾರರನ್ನಾಗಿ ಮಾಡುವುದು ಸೂಕ್ತವೆ ? ಕಲೆ, ವಿಜ್ಞಾನ, ಮಾನವಿಕ ವಿಷಯಗಳನ್ನು ಕಾಲಕಾಲಕ್ಕೆ ಅಗತ್ಯ ಮತ್ತು ಅನುಕೂಲಕ್ಕೆ ತಕ್ಕಂತೆ ಉನ್ನತೀಕರಿಸುವ, ಪರಿಷ್ಕರಿಸುವ ಕಾರ್ಯ ಏಕೆ ನಡೆದಿಲ್ಲ ? ಸಾಂಪ್ರದಾಯಿಕ ಪದವಿ ಪಡೆದವರು ಹೆಚ್ಚಿನವರು ನಿರುದ್ಯೋಗಿಗಳಾಗುತ್ತಿರುವುದು ಏಕೆ ? ಮುಖ್ಯವಾಗಿ ಕಲೆ, ವಿಜ್ಞಾನ, ಮಾನವಿಕ ವಿಷಯಗಳ ಬೋಧನೆಯಲ್ಲಿ ಇರುವ ಕೊರತೆಗಳೇನು ? ಈ ವಿಷಯಗಳು ಮತ್ತು ಅವುಗಳ ಬೋಧನೆಯನ್ನು ಹೇಗೆ ಪ್ರಸ್ತುತಗೊಳಿಸುವುದು ? ಎಂಬ ಬಗ್ಗೆ ತುರ್ತಾಗಿ ಚಿಂತನ–ಮಂಥನ ನಡೆಯಬೇಕು.

ಇನ್ನೊಂದು ಮುಖ್ಯ ವಿಷಯವನ್ನು ಇಲ್ಲಿ ಪ್ರಸ್ತಾಪಿಸಬೇಕು : ಇಂದು ಪದವಿ ಹಂತದಲ್ಲಿ ಕಲೆ ಮತ್ತು ಮಾನವಿಕ ವಿಷಯಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳುತ್ತಿರುವ ಹೆಚ್ಚಿನ ವಿದ್ಯಾರ್ಥಿಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದ ಜಾತಿ, ಸಮುದಾಯ ವರ್ಗಗಳಿಗೆ ಸೇರಿದವರು. ಇವರಲ್ಲಿ ಶೇಕಡ ಎಂಬತ್ತು ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದಿಂದ ಬಂದವರು ಹಾಗೂ ಮೊದಲ ತಲೆಮಾರಿನ ಪದವಿ ಆಕಾಂಕ್ಷಿಗಳು. ವಿಜ್ಞಾನ ವಿಷಯದಲ್ಲಿ ಪದವಿ ಪಡೆಯಲು ಬಯಸುವವರು ಕೂಡ ಬಹುತೇಕ ತಾಂತ್ರಿಕ–ವೈದ್ಯಕೀಯ ಕೋರ್ಸ್‌ಗಳಿಗೆ ಪ್ರವೇಶ ಪಡೆಯಲು ವಿಫಲರಾದವರು, ಇಲ್ಲವೆ ಪಿ.ಯು.ಸಿ.ಯಲ್ಲಿ ನಪಾಸಾಗಿ ಮತ್ತೆಮತ್ತೆ ಪ್ರಯತ್ನಿಸಿ ಆ ಹಂತ ದಾಟಿ ಬಂದವರು. ಮೂಲ ವಿಜ್ಞಾನದಲ್ಲಿ ಪದವಿ ಪಡೆಯಬೇಕು ಎಂಬ ಇಚ್ಛೆಯಿಂದ ಆಯ್ಕೆ ಮಾಡಿಕೊಳ್ಳುವವರು ವಿರಳ. ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳಲ್ಲಿ ಪದವಿ ಪಡೆಯಲು ಬಯಸುತ್ತಿರುವವರಲ್ಲಿ ಶೇಕಡ ಎಂಬತ್ತು ವಿದ್ಯಾರ್ಥಿಗಳು ನಗರ ಪ್ರದೇಶದಿಂದ ಬಂದವರು, ಆರ್ಥಿಕವಾಗಿ ಉತ್ತಮ ಮಟ್ಟದಲ್ಲಿರುವವರು. ಹೀಗಾಗಿ ಉನ್ನತ ಶಿಕ್ಷಣ ಬಯಸುವ ವಿದ್ಯಾರ್ಥಿಗಳ ಸಾಮಾಜಿಕ, ಆರ್ಥಿಕ ಮತ್ತು ಪ್ರಾದೇಶಿಕ ಸಂಗತಿಗಳು ಅವರು ಆಯ್ಕೆ ಮಾಡಿಕೊಳ್ಳುವ ಪದವಿ ಕೋರ್ಸ್‌ಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಈ ಎಲ್ಲ ಸಂಗತಿಗಳನ್ನು ಪರಿಗಣಿಸದೆ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯೊಂದನ್ನು ರೂಪಿಸುವುದು ಅರ್ಥಪೂರ್ಣವೆನಿಸದು.




ಕಲೆ, ಮಾನವಿಕ, ವಿಜ್ಞಾನ, ವಾಣಿಜ್ಯ ಪಠ್ಯಕ್ರಮ ಕುರಿತು ಎರಡು ಮಾತು ಹೇಳಬೇಕು. ವಾಣಿಜ್ಯ ವಿಷಯದ ಪಠ್ಯಕ್ರಮ ಸಾಕಷ್ಟು ಸುಧಾರಿಸಿದಂತಿದೆ. ಈ ಮಾತನ್ನು ವಿಜ್ಞಾನ ವಿಷಯದಲ್ಲಿ ಹೇಳುವುದು ಕಷ್ಟ. ಮುಖ್ಯವಾಗಿ ಭಾಷಾ ತರಗತಿಗಳನ್ನು ವಿದ್ಯಾರ್ಥಿಗಳು ಗಂಭೀರವಾಗಿ ಪರಿಗಣಿಸಬೇಕು. ಭಾಷೆಯನ್ನು ಚೆನ್ನಾಗಿ ಕಲಿಯದೆ ಉನ್ನತ ಶಿಕ್ಷಣದ ಹಂತದಲ್ಲಿ ಯಾವುದೇ ವಿಷಯದಲ್ಲಿ ಜ್ಞಾನಾರ್ಜನೆ ಸಾಧ್ಯವಾಗದು. ಭಾಷಾ ತರಗತಿಗಳು ಮನರಂಜನೆ ನೀಡುವ, ಮನಸ್ಸನ್ನು ಲಘು ಹಾಸ್ಯದಲ್ಲಿ ತೇಲಿಸುವ ವೇಳೆಯಾಗಬಾರದು. ಹಾಗೆಯೇ ಸಾಹಿತ್ಯದ ಪಠ್ಯಕ್ರಮದಲ್ಲಿ ಮುಖ್ಯ ಬದಲಾವಣೆ ಅಗತ್ಯವಿದೆ: ನಮ್ಮ ವಿದ್ಯಾರ್ಥಿಗಳಿಗೆ ಶೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಟಾಲ್‌ಸ್ಟಾಯ್ ಮುಂತಾದವರು ಪರಿಚಯಿಸಲ್ಪಡುತ್ತಾರೆ. ಆದರೆ ಅವರಿಗೆ ನಮ್ಮ ದೇಶ ಭಾಷೆಗಳಲ್ಲಿ ಅತ್ಯಂತ ಶ್ರೇಷ್ಠ ಲೇಖಕರೆನಿಸಿದ ವೈಕಂ ಬಷೀರ್, ಶ್ರೀ ಶ್ರೀ ಜಯಕಾಂತನ್, ಪ್ರೇಮ್‌ಚಂದ್, ಶರಚ್ಚಂದ್ರ, ಫಣೀಂದ್ರನಾಥ ರೇಣು ಮುಂತಾದವರು ತಿಳಿದಿರುವುದಿಲ್ಲ. ಯುರೋಪಿನ ಇತಿಹಾಸ, ಭಾರತದ ಇತಿಹಾಸ ಓದುವ ವಿದ್ಯಾರ್ಥಿಗಳಿಗೆ ತಮ್ಮ ಜಿಲ್ಲೆ ತಾಲ್ಲೂಕಿನ ಇತಿಹಾಸ ತಿಳಿದಿರುವುದಿಲ್ಲ. ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರಗಳೂ ಹೀಗೆ ಭಾರತೀಕರಣಗೊಳ್ಳಬೇಕಾದ ಅಗತ್ಯವಿದೆ. ಭಾರತದ ಸಂಕೀರ್ಣ ಸಾಮಾಜಿಕ–ಆರ್ಥಿಕ ವ್ಯವಸ್ಥೆಯನ್ನು ಸೂಕ್ಷ್ಮತೆ ಮತ್ತು ಸಹನೆಯಿಂದ ಅರ್ಥಮಾಡಿಸಬೇಕು. ಪಠ್ಯಕ್ರಮದ ಲೋಪದಿಂದ Macro levelನಲ್ಲಿ ಏನೋ ಕಲಿತಿದ್ದೇವೆ ಎಂಬ ಅಮೂರ್ತ ಭಾವನೆ ವಿದ್ಯಾರ್ಥಿಗಳಲ್ಲಿರುವುದು ಅಷ್ಟೇ ಹೊರತು, Macro levelನಲ್ಲಿ ನಿರ್ದಿಷ್ಟವಾಗಿ ಕಲಿತಾಗ ಮೂಡುವ ಸ್ಪಷ್ಟತೆ ಇರುವುದಿಲ್ಲ. ಈ ಬಗ್ಗೆ ಉನ್ನತ ಶಿಕ್ಷಣ ನೀತಿ ನಿರೂಪಣೆ ಮಾಡುವಾಗ ಗಮನ ಕೊಡಬೇಕು.

ಪ್ರಸ್ತುತ ಕಾಲ ಸಂದರ್ಭದಲ್ಲಿ ವಿವಾದಾಸ್ಪದವಾಗಬಹುದಾದ ಪ್ರಶ್ನೆಯೊಂದನ್ನು ಇಲ್ಲಿ ಕೇಳ ಬಯಸುತ್ತೇನೆ : ದೇಶದ ಎಲ್ಲಾ ಯುವಕರು ಉನ್ನತ ಶಿಕ್ಷಣ ಪಡೆಯಬೇಕೆ ? ಎಲ್ಲರಿಗೂ ಉನ್ನತ ಶಿಕ್ಷಣದ ಅಗತ್ಯವಾದರೂ ಏನಿದೆ ? ಉನ್ನತ ಶಿಕ್ಷಣ ಎಲ್ಲರಿಗೂ ಏತಕ್ಕೆ ಬೇಕು ? – ಎಂದು ಕೇಳಿಕೊಳ್ಳಬೇಕಾದ ಕಾಲ ಎದುರಾಗಿದೆ ಎಂದೇ ಭಾವಿಸುತ್ತೇನೆ. ದೇಶದ ಸಾಮಾಜಿಕ–ಆರ್ಥಿಕ, ಸಾಮಾಜಿಕ–ರಾಜಕೀಯ ವ್ಯವಸ್ಥೆಯ ಬದಲಾವಣೆ ಮತ್ತು ಬೆಳವಣಿಗೆಯಲ್ಲಿ ಉನ್ನತ ಶಿಕ್ಷಣ ಮಹತ್ವದ ಪಾತ್ರ ವಹಿಸುವುದು ನಿಜ. ಆದರೂ ದೇಶದ ಪ್ರತಿಯೊಬ್ಬರಿಗೆ ಉನ್ನತ ಶಿಕ್ಷಣದ ಅಗತ್ಯವೇ ಇಲ್ಲ. ನಮ್ಮಲ್ಲಿ ಖಾಸಗಿ ಮತ್ತು ಸರ್ಕಾರದ ವಿವಿಧ ಹಂತಗಳಲ್ಲಿ ಮಾಡಬೇಕಾದ ಎಷ್ಟೋ ಕೆಲಸಗಳನ್ನು ಪಿ.ಯು.ಸಿ. ನಂತರ ಮೂರರಿಂದ ಆರು ತಿಂಗಳ ತರಬೇತಿ ಪಡೆದವರು ಯಶಸ್ವಿಯಾಗಿ ನಿರ್ವಹಿಸಲು ಸಾಧ್ಯ. ಈ ಹಂತದಲ್ಲಿ ಪದವಿ ಪಡೆದವರೇ ನಿರ್ವಹಿಸಬೇಕಾದ ಕೆಲಸಗಳು ಹೆಚ್ಚಿಲ್ಲ. ಯಾರು ಉನ್ನತ ಶಿಕ್ಷಣ ಪಡೆದು ಸಂಶೋಧನೆ ಮಾಡಬಯಸುತ್ತಾರೆ ಅಂತಹವರು ಸ್ನಾತಕೋತ್ತರ ಪದವಿ ಪಡೆಯಬೇಕು. ಕೇವಲ ಜ್ಞಾನಾರ್ಜನೆಗಾಗಿ ಓದುವವರಿಗೆ ಸ್ನಾತಕೋತ್ತರ ಪದವಿಯ ಅಗತ್ಯವೇ ಇಲ್ಲ. ಸರ್ಕಾರದ ಆದ್ಯತೆ ದೇಶದ ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ನೀಡುವುದಾಗಬೇಕು. ರಾಜ್ಯ–ಕೇಂದ್ರ ಸರ್ಕಾರಗಳು ಯುನೆಸ್ಕೊ ಮುಂತಾದ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ಅಪಾರ ಆರ್ಥಿಕ ನೆರವು ಪಡೆಯುತ್ತಿದ್ದರೂ ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ಕೊಡುವುದು ಸಾಧ್ಯವಾಗಿಲ್ಲ. ಪ್ರಾಥಮಿಕ ಶಿಕ್ಷಣದ ಗತಿಯೇ ಹೀಗಿರುವಾಗ ಉನ್ನತ ಶಿಕ್ಷಣ, ಸಂಶೋಧನೆಯ ಸ್ಥಿತಿಗತಿಗಳು ನಮ್ಮಲ್ಲಿ ಹೇಗಿರಬೇಡ ? ಆದರೂ ಉನ್ನತ ಶಿಕ್ಷಣಕ್ಕೆ ಸೇರಬಯಸುವವರನ್ನು ಮೀಸಲಾತಿಗನುಗುಣವಾಗಿ ಆಯ್ಕೆ ಮಾಡಿಕೊಳ್ಳಬೇಕು.

ದೇಶದಲ್ಲಿ ಪ್ರತಿವರ್ಷ ಹೊಸಹೊಸ ವಿಶ್ವವಿದ್ಯಾಲಯಗಳು ಸ್ಥಾಪನೆಯಾಗುತ್ತಿದ್ದರೂ ಅವು ಗುಣಮಟ್ಟದ ಶಿಕ್ಷಣ ನೀಡಲು ವಿಫಲವಾಗಿವೆ. ಮುಖ್ಯವಾಗಿ ವ್ಯಾಪಕ ಅಧ್ಯಯನ ಮತ್ತು ಹೊಸ ಜ್ಞಾನಸೃಷ್ಟಿ ಅಥವಾ ಜನಪರವಾದ ಸಂಶೋಧನೆಗಳು ಅಪೇಕ್ಷಿತ ಮಟ್ಟದಲ್ಲಿ ನಡೆಯದಿರುವುದರಿಂದ ಉನ್ನತ ಶಿಕ್ಷಣ ಕ್ಷೇತ್ರ ಬಡವಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಎಷ್ಟೋ ವಿಷಯಗಳನ್ನು ಚೆನ್ನಾಗಿ ಕಲಿಸುವ ವಿದ್ವಾಂಸರು ಹಾಗೂ ಹೊಸ ಹೊಸ ಸಂಶೋಧನೆಗೆ ಸೂಕ್ತ ಮಾರ್ಗದರ್ಶನ ನೀಡಬಲ್ಲ ಸಮರ್ಥರಾದ ಮಾರ್ಗದರ್ಶಕರ ಕೊರತೆಯಿಂದ ಉನ್ನತ ಶಿಕ್ಷಣ ಕ್ಷೇತ್ರವು ಬೌದ್ಧಿಕ ದಾರಿದ್ರ್ಯದಲ್ಲಿ ನರಳುತ್ತಿದೆ. ರಾಜಕೀಯ ಹಸ್ತಕ್ಷೇಪ, ಜಾತಿ ರಾಜಕಾರಣ, ಭ್ರಷ್ಟಾಚಾರ, ಲೈಂಗಿಕ ಹಗರಣ ಮುಂತಾದ ಮಾರಕ ಸಂಗತಿಗಳಿಂದ ಹಲವು ವಿಶ್ವವಿದ್ಯಾಲಯಗಳು ಕುಖ್ಯಾತಿ ಪಡೆದಿವೆ. ಈ ಪರಿಸ್ಥಿತಿಗೆ ಉನ್ನತ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದವರೆಲ್ಲ ಸಮಾನ ಹೊಣೆಗಾರರಾಗಿರುತ್ತಾರೆ. ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡುವ ಬೋಧಕರ

ಸಂಬಳ-ಸಾರಿಗೆ-ಸೌಲಭ್ಯಗಳು ಹೆಚ್ಚಿವೆಯೇ ಹೊರತು, ಬೋಧನೆ, ಅಧ್ಯಯನ, ವಿದ್ವತ್ತು, ಕಲಿಸುವ ಪ್ರೀತಿ-ಬದ್ಧತೆಗಳಲ್ಲ. ವಿಶ್ವವಿದ್ಯಾಲಯಗಳಲ್ಲಿ ಸಹ ಅರೆಕಾಲಿಕ ಉಪನ್ಯಾಸಕರ ಸಂಖ್ಯೆ ಹೆಚ್ಚುತ್ತಿರುವುದು ಆರೋಗ್ಯಕರವಲ್ಲ. ಅದು ಶಿಕ್ಷಣದ ಉಪೇಕ್ಷೆಗೆ ಒಂದು ಉದಾಹರಣೆ, ಅಷ್ಟೆ.

ಕೆಲವು ವಿಶ್ವವಿದ್ಯಾಲಯಗಳಲ್ಲಿ ಶೈಕ್ಷಣಿಕ ವಾತಾವರಣವೇ ಇಲ್ಲ, ಹೀಗಾಗಿ ಎಷ್ಟೋ ವಿಶ್ವವಿದ್ಯಾಲಯಗಳು ಪರೀಕ್ಷಾ ಪ್ರಾಧಿಕಾರಗಳ ಮಟ್ಟಕ್ಕೆ ಕುಸಿದಿವೆ.

ವಿಶ್ವವಿದ್ಯಾಲಯದ ಮೂಗಿನಡಿ ನಡೆಯುವ ಸ್ನಾತಕೋತ್ತರ ವಿಭಾಗಗಳ ಪರಿಸ್ಥಿತಿಯೇ ಹೀಗಿರುವಾಗ ಪದವಿ ಕಾಲೇಜುಗಳಲ್ಲಿ ಸ್ಥಾಪನೆಯಾಗಿರುವ ಸ್ನಾತಕೋತ್ತರ ಕೇಂದ್ರಗಳ ಪರಿಸ್ಥಿತಿ ಹೇಗಿರಬಹುದು ? ಈಗ ರಾಜ್ಯದಲ್ಲಿ ನಾಲ್ಕು ನೂರಕ್ಕೂ ಹೆಚ್ಚು ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು, ಮುನ್ನೂರ ಅರವತ್ತು ಅನುದಾನಿತ ಕಾಲೇಜುಗಳು, ಸಾವಿರಕ್ಕೂ ಹೆಚ್ಚು ಅನುದಾನರಹಿತ ಖಾಸಗಿ ಕಾಲೇಜುಗಳಿವೆ. ಈ ಎಲ್ಲ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧ್ಯಾಪಕರಲ್ಲಿ ಅರೆಕಾಲಿಕ ಮತ್ತು ಅತಿಥಿ ಉಪನ್ಯಾಸಕರೇ ಹೆಚ್ಚು. ಖಾಯಂ ನೌಕರಿಯಿಲ್ಲದ, ಜೀವನ ನಿರ್ವಹಣೆಗೆ ಅಗತ್ಯವಾದಷ್ಟು ಸಂಬಳವೂ ಇರದ, ಅತಂತ್ರ ಸ್ಥಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರಿಂದ ಉನ್ನತ ಶಿಕ್ಷಣ ಸುಧಾರಣೆಗೊಳ್ಳುವುದಾದರೂ ಹೇಗೆ ? ಈ ಯುವ ಉತ್ಸಾಹಿ ಯುವಕರು ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸಿದರೂ ಅವರನ್ನು ನಿರುತ್ಸಾಹಗೊಳಿಸುವ, ಕಲಿಸುವ ಪ್ರೀತಿಯನ್ನು ಕುಗ್ಗಿಸುವ ವಾತಾವರಣದಲ್ಲಿ ಅವರು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಸಾಧ್ಯವೇ ? ಹೀಗಾಗಿ ಜ್ಞಾನದ ಹಂಬಲ, ವಿದ್ಯಾರ್ಜನೆಯ ಬಯಕೆ, ಸಮಕಾಲೀನ ಸವಾಲುಗಳನ್ನು ಎದುರಿಸಲು ಕೌಶಲಗಳನ್ನು ಕಲಿಯುವ ಆಸೆಯಿಂದ ಪದವಿ ಕಾಲೇಜುಗಳಿಗೆ ಬರುತ್ತಿರುವ ಚಿಮ್ಮುವ ಉತ್ಸಾಹದ ಯುವಜನರ ಆಶೋತ್ತರಗಳು ಇಂತಹ ನಿರುತ್ಸಾಹಕರ ವಾತಾವರಣದಲ್ಲಿ ಈಡೇರುವುದಾದರೂ ಹೇಗೆ ? ಇದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುತ್ತಿಲ್ಲ.

ಒಂದು ರಾಜ್ಯದಲ್ಲಿ ಎಷ್ಟು ವಿಶ್ವವಿದ್ಯಾಲಯಗಳಿವೆ, ಎಷ್ಟು ಸ್ನಾತಕೋತ್ತರ ಕೇಂದ್ರಗಳಿವೆ, ಎಷ್ಟು ಪದವಿ ಕಾಲೇಜುಗಳಿವೆ ಎಂಬ ಪ್ರಶ್ನೆ ಮುಖ್ಯವಾಗಬಾರದು. ಅವುಗಳಲ್ಲಿ ಎಷ್ಟು ವಿಶ್ವವಿದ್ಯಾಲಯಗಳು, ಪದವಿ ಕಾಲೇಜುಗಳು ಗುಣಮಟ್ಟದ ಶಿಕ್ಷಣ ನೀಡುತ್ತಿವೆ ಎಂಬುದು ನಮ್ಮ ಹೆಮ್ಮೆಯ ಸಂಗತಿಯಾಗಬೇಕು. ಹೀಗಾಗಿ ನಮ್ಮಲ್ಲಿರುವ ಎಷ್ಟೋ ಕಾಲೇಜುಗಳನ್ನು, ಸ್ನಾತಕೋತ್ತರ ಕೇಂದ್ರಗಳನ್ನು ಮಾತ್ರವಲ್ಲ, ಕೆಲವು ವಿಶ್ವವಿದ್ಯಾಲಯಗಳನ್ನು ಮುಚ್ಚಿದರೂ ಯಾವ ನಷ್ಟವೂ ಉಂಟಾಗದು; ಹಾಗಿದೆ ಅವುಗಳ ದುಃಸ್ಥಿತಿ. ಇಂತಹ ಚಿಂತಾಜನಕ ಪರಿಸ್ಥಿತಿಯಲ್ಲಿ ಉನ್ನತ ಶಿಕ್ಷಣವು ಏದುಸಿರು ಬಿಡುತ್ತಿದ್ದರೂ ೨೦೨೦ನೇ ಇಸವಿಯ ವೇಳೆಗೆ ಉನ್ನತ ಶಿಕ್ಷಣವನ್ನು ಪಡೆಯುವವರ ಸಂಖ್ಯೆಯನ್ನು ಈಗಿರುವ ಶೇಕಡ ಹದಿನಾಲ್ಕರಿಂದ ಇಪ್ಪತ್ತಕ್ಕೆ ಏರಿಸುವ ಪ್ರಸ್ತಾಪ ಸರ್ಕಾರದ ಮುಂದಿದೆ.



ಗುಣಮಟ್ಟದ ಬೋಧನೆ, ಜನಪರ ಮತ್ತು ಹೊಸ ಜ್ಞಾನ ಸೃಷ್ಟಿಸುವಂತಹ ಸಂಶೋಧನೆಗೆ ಪ್ರೋತ್ಸಾಹ, ಶೈಕ್ಷಣಿಕ ವಾತಾವರಣ ನಿರ್ಮಾಣ ಮುಂತಾದ ಅಗತ್ಯಗಳನ್ನು ಪೂರೈಸದೆ ಕೇವಲ ವಿದ್ಯಾರ್ಥಿಗಳ ಸಂಖ್ಯೆಯನ್ನು ಹೆಚ್ಚಿಸಿದ ಮಾತ್ರಕ್ಕೆ ಏನನ್ನೂ ಸಾಧಿಸಿದಂತಾಗದು. ರಾಜಕೀಯ ಲಾಭಕ್ಕೆ, ರಾಜಕಾರಣಿಗಳ ಪ್ರತಿಷ್ಠೆ ಪ್ರಚಾರಕ್ಕೆ ವಿಶ್ವವಿದ್ಯಾಲಯಗಳನ್ನು ಹೊಸದಾಗಿ ಪ್ರಾರಂಭಿಸುವುದರಿಂದ ಶೈಕ್ಷಣಿಕ ಪ್ರಗತಿ, ಜ್ಞಾನಸೃಷ್ಟಿ ಸಾಧ್ಯವಾಗದು.

ಉನ್ನತ ಶಿಕ್ಷಣ ಎದುರಿಸುತ್ತಿರುವ ಮತ್ತೊಂದು ಗಂಭೀರ ಸಮಸ್ಯೆ ಇದೆ: ಅದು ಉನ್ನತ ಶಿಕ್ಷಣದ Compartmentalization ; ಎಂದರೆ ತಾಂತ್ರಿಕ ವಿಶ್ವವಿದ್ಯಾಲಯ, ವೈದ್ಯಕೀಯ ವಿಶ್ವವಿದ್ಯಾಲಯ, ಕಾನೂನು ವಿಶ್ವವಿದ್ಯಾಲಯ, ಜನಪದ ವಿಶ್ವವಿದ್ಯಾಲಯ, ಸಂಸ್ಕೃತ ವಿಶ್ವವಿದ್ಯಾಲಯ, ಸಂಗೀತ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಕೃಷಿ ವಿಶ್ವವಿದ್ಯಾಲಯ, ತೋಟಗಾರಿಕೆ ವಿಶ್ವವಿದ್ಯಾಲಯ, ಪಶುಸಂಗೋಪನಾ ವಿಶ್ವವಿದ್ಯಾಲಯ - ಹೀಗೆ ವಿಷಯವಾರು ವಿಶ್ವವಿದ್ಯಾಲಯ ಸ್ಥಾಪನೆ ಶಿಕ್ಷಣದ ಸಮಗ್ರತೆ ಮತ್ತು ಅಂತರರಾಷ್ಟ್ರೀಯ ಅಧ್ಯಯನಕ್ಕೆ ಮಾರಕವಾಗುವುದು. ಈ ವಿನಾಶಕಾರಿ ಬೆಳವಣಿಗೆಯನ್ನು ಕುರಿತು ಶಿಕ್ಷಣತಜ್ಞರು ವಿರೋಧಿಸಿದ್ದರೂ ರಾಜಕೀಯ ಮತ್ತು ಇತರೆ ಲಾಭದ ಲೆಕ್ಕಾಚಾರದಲ್ಲಿ ಮುಳುಗಿರುವ ರಾಜಕಾರಣಿಗಳು, ಅಧಿಕಾರಿಗಳ ಕಿವಿಗೆ ಆ ಪ್ರತಿರೋಧದ ಧ್ವನಿ ಕೇಳುತ್ತಿಲ್ಲ. ತಜ್ಞರ ವಿವೇಕದ ಮಾತುಗಳಿಗೆ ಆಳುವ ವರ್ಗ ಕಿವಿ ಮುಚ್ಚಿ ಬಹಳ ಕಾಲವೇ ಆಗಿದೆ. ವಿಶ್ವವಿದ್ಯಾಲಯದ ಬೆಳವಣಿಗೆ, ಉನ್ನತ ಶಿಕ್ಷಣದ ಹಿತದೃಷ್ಟಿಯನ್ನು ಗಮನದಲ್ಲಿ ಇಟ್ಟುಕೊಂಡು ಅಗತ್ಯ ಮೂಲ ಸೌಲಭ್ಯ, ಬೋಧಕ ವರ್ಗ, ಶೈಕ್ಷಣಿಕ ವಾತಾವರಣ ನಿರ್ಮಾಣ ಮುಂತಾದ ಯಾವುದಕ್ಕೂ ಗಮನ ಕೊಡದೆ ಯಾವ ಪುರುಷಾರ್ಥಕ್ಕೆ ತೆರಿಗೆ ಹಣ ಪೋಲುಮಾಡಿ ಹೊಸ ವಿಶ್ವವಿದ್ಯಾಲಯಗಳನ್ನು ಆರಂಭಿಸಲಾಗುತ್ತಿದೆ ? ಬಾಲಗ್ರಹ ಪೀಡಿತವಾಗಿರುವ, ರೋಗಗ್ರಸ್ತವಾಗಿರುವ ವಿಶ್ವವಿದ್ಯಾಲಯಗಳ ಪರಿಸ್ಥಿತಿಯನ್ನು ಮೊದಲು ಸುಧಾರಿಸಬೇಕಲ್ಲವೇ ? ಎಷ್ಟೋ ಪ್ರಥಮ ದರ್ಜೆ ಕಾಲೇಜುಗಳ ಸ್ಥಾಪನೆಯಲ್ಲೂ ಯಾವುದೇ ವಿವೇಕ ಕೆಲಸ ಮಾಡಿದೆ ಎಂದು ಹೇಳಲಾಗದು. ಅಗತ್ಯವಿರುವ ಕಡೆ ಕಾಲೇಜು ತೆರೆಯದೆ, ಈಗಾಗಲೇ ಇರುವ ಕಡೆ ಹೊಸ ಕಾಲೇಜು ಪ್ರಾರಂಭಿಸುವುದು ನಡೆದೇ ಇದೆ.

ಒಟ್ಟಾರೆ ಪದವಿ ಕಾಲೇಜು, ಸ್ನಾತಕೋತ್ತರ ಕೇಂದ್ರ, ವಿಶ್ವವಿದ್ಯಾಲಯಗಳು ಗಂಭೀರ ಸಮಸ್ಯೆಗಳನ್ನು ಎದುರಿಸುತ್ತಿವೆ. ಅವು ಹಲವು ಕೊರತೆಗಳ ನಡುವೆ ಹೇಗೋ ಕಾರ್ಯ ನಿರ್ವಹಿಸುತ್ತಿವೆ. ಉನ್ನತ ಶಿಕ್ಷಣದ ಮಾತೃ ಸಂಸ್ಥೆಯಂತಿರುವ ಪದವಿ ಕಾಲೇಜುಗಳನ್ನು, ಸ್ನಾತಕೋತ್ತರ ಕೇಂದ್ರಗಳನ್ನು ಅರೆಕಾಲಿಕ ಮತ್ತು ಅತಿಥಿ ಉಪನ್ಯಾಸಕರನ್ನು ಇಟ್ಟುಕೊಂಡು ಎಷ್ಟು ಕಾಲ ನಡೆಸುವುದು ? ಎಲ್ಲೆಲ್ಲೂ ಬೌದ್ಧಿಕ ದಾರಿದ್ರ್ಯ, ದುರ್ಬಲ ಮತ್ತು ಅಪ್ರಸ್ತುತ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳು, ಸಂಶೋಧನೆಗೆ ಪ್ರೋತ್ಸಾಹಕರ ವಾತಾವರಣವಿಲ್ಲದಿರುವುದು - ಇಂತಹ ಕೊರತೆಗಳಿಂದ ಕೂಡಿ ರೋಗಗ್ರಸ್ತವಾಗಿರುವ ಉನ್ನತ ಶಿಕ್ಷಣ ವ್ಯವಸ್ಥೆಗೆ ಹೊಸ ರಕ್ತ ತುಂಬದೆ, ಕೇವಲ ಹೊರ ರೂಪದಲ್ಲಿ ಬದಲಾವಣೆ ಮಾಡಿ ರೂಪಿಸಿದ ಹೊಸ ಶಿಕ್ಷಣ ನೀತಿಯಿಂದ ಯಾವ ಪ್ರಯೋಜನವೂ ಇಲ್ಲ. ಶಿಕ್ಷಣ ಪ್ರೇಮಿಗಳು, ಅಧ್ಯಾಪಕರು, ಸಮಾಜ, ಸರ್ಕಾರ - ಎಲ್ಲರೂ ಕೂಡಿ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯನ್ನು - ಪ್ರಜಾತಾಂತ್ರಿಕ ಚೌಕಟ್ಟಿನಲ್ಲಿ, ಪ್ರಜಾಪ್ರಭುತ್ವದ ಮೌಲ್ಯ-ಆಶಯಗಳಿಗೆ ಪೂರಕವಾದ ಉನ್ನತ ಶಿಕ್ಷಣ ನೀತಿಯನ್ನು ರೂಪಿಸಬೇಕು. ಇದು ಸಮೂಹದ ಪಾಲುದಾರಿಕೆಯಿಂದ ಆಗಬೇಕಾದ ಕೆಲಸವೇ ಹೊರತು ನಾಲ್ಕು ಜನರಿಂದಾಗುವ ಕೆಲಸವಲ್ಲ. ಇಂದು ಉನ್ನತ ಶಿಕ್ಷಣಕ್ಕೆ ವಿದ್ಯಾರ್ಥಿಸ್ನೇಹಿಯೂ ಸಮಾಜಮುಖಿಯೂ ಆದ ಹೊಸ ನೀತಿಯೊಂದು ರೂಪುಗೊಳ್ಳಬೇಕಾದ ಅಗತ್ಯ ತುಂಬ ಇದೆ.

**ಎಂ. ಜಿ. ಚಂದ್ರಶೇಖರಯ್ಯ**
ಶ್ರೀ ಕೊಂಗಾಡಿಯಪ್ಪ ಕಾಲೇಜು
ದೊಡ್ಡಬಳ್ಳಾಪುರ - ೫೬೧ ೨೦೩

# ದೇವರಿಗೊಂದು ಪತ್ರ

ನಾಗರಾಜನಾಯಕ ಡಿ. ಡೊಳ್ಳಿನ

**ದೇ**ವರು ಅಂದರೆ ಯಾರು ? ಕಣ್ಣಿಗೆ ಕಾಣುವ ದೇವರು ಅಮ್ಮಾನೇ. ಕಣ್ಣಿಗೆ ಕಾಣದ ದೇವರುಗಳು ಇರುತ್ತಾರಾ ? ದೇವರುಗಳ ಬಗ್ಗೆ ಹೀಗೆ ಹಲವಾರು ಪ್ರಶ್ನೆಗಳು ತಲೆಯಲ್ಲಿ ಸುತ್ತುತ್ತವೆ. ಮೈಮೇಲೆ ದಾರ ಇದ್ದವರಿಗೆ ಒಂದೆಡೆ ಪ್ರಸಾದ, ಇಲ್ಲದವರಿಗೆ ಇನ್ನೊಂದೆಡೆ ಪ್ರಸಾದ ನೀಡೆಂದು ದೇವರು ಹೇಳಿರುತ್ತಾನೆಯೆ ? ಜಾತಿ ವರ್ಗಗಳ ಮೇಲೆ ಭಕ್ತರನ್ನು ಬೇರೆ ಬೇರೆ ಮಾಡುವದು ಯಾರು ? ಹೀಗೆ ಪ್ರಶ್ನೆಗಳು ಹುಟ್ಟುತ್ತವೆ. ನನಗೆ ಚಿಕ್ಕಂದಿನಿಂದಲೂ ದೇವರುಗಳ ಬಗ್ಗೆ ಇರುವ ಇಂತಹ ನೂರಾರು ಪ್ರಶ್ನೆಗಳು ಇಂದಿಗೂ ಹಾಗೆಯೇ ಉಳಿದಿವೆ.

ನನ್ನ ಹೆಸರು ಕನಸು. ನನ್ನ ಅಪ್ಪ ಹೊನ್ನಪ್ಪ . ಅವ್ವ ಶಾಂತವ್ವ . ಅಣ್ಣ ಬೆಳಕು. ನನ್ನ ಅಪ್ಪ ಒಬ್ಬ ಪ್ರಾಥಮಿಕ ಶಾಲೆಯ ಶಿಕ್ಷಕರು. ನಮ್ಮ ವಂಶದಲ್ಲಿ ಮೊದಲು ಶಾಲೆಯ ಮೆಟ್ಟಿಲು ಹತ್ತಿದ್ದು ನನ್ನ ಅಪ್ಪ. ಮನೆಯವರ ವಿರೋಧದ ನಡುವೆಯೂ ಶಾಲೆ ಕಲಿತು ಶಿಕ್ಷಕನಾಗಿದ್ದು ಅಪ್ಪನ ಸಾಧನೆ. ತಾನೇ ದುಡಿದು ಓದಿದ ಅಪ್ಪ ಮನೆಯವರಿಗೆ ಹೊರೆಯಾಗದೆ ಓದಿದ್ದರು. ಯಾಕಂದ್ರೆ ಮನೆಯಲ್ಲಿ ಆಗಿನ್ನೂ ಕಿತ್ತು ತಿನ್ನುತ್ತಿದ್ದ ಬಡತನ. ನೆರೆಯವರಲ್ಲಿ ಓದಿಗೆ ದುಡ್ಡು ಕೇಳಿದರೆ ತನ್ನ ಶಿಕ್ಷಣಕ್ಕೆ ಕುತ್ತು ಬಂದೀತೆಂದು ಕೇಳದೆ ತಾನೇ ದುಡಿದು ಓದುತ್ತಿದ್ದರು. ದುಡಿದ ಹಣದಲ್ಲಿ ಮನೆಗೆ ಸ್ವಲ್ಪ ನೀಡುತ್ತಿದ್ದರು. ಹೀಗೆ ಮುಂದುವರಿಸಿದಾಗಲೇ ನನ್ನ ಅಜ್ಜ ಅಪ್ಪನನ್ನು ಕರೆದೊಯ್ದು ಊರಿನ ಗೌಡರ ಮನೆಯಲ್ಲಿ ಅರವತ್ತು ರೂಪಾಯಿಗಳಿಗೆ ಜೀತಕ್ಕೆ ಇಟ್ಟರು. ಎಂಟು ವರ್ಷಗಳ ಕಾಲ ಜೀತಮಾಡಿ, ಮುಂದೆ ಅಪ್ಪ ಜೀತಪದ್ಧತಿಯಿಂದ ಬಿಡಿಸಿಕೊಂಡು ಬಂದು ಶಿಕ್ಷಣ ಮುಂದುವರಿಸಿದ್ದು ಈಗ ಇತಿಹಾಸ. ಶಿಕ್ಷಣ ಪಡೆದು ಊರಿಗೆ ಮರಳಿದ ಅಪ್ಪನಿಗೆ ಊರಿನ ಕೆಲ ನಿಯಮಗಳು ಕಿರಿ ಕಿರಿ ಅನ್ನಿಸಿ, ಸಹಿಸಲಸಾಧ್ಯವೆನಿಸಿದವು.

ಊರಿನಲ್ಲಿ ಕೆರೆಗೆ ಕುಡಿಯುವ ನೀರು ತರಲು ಹೋದಾಗ ಕಂಡ ದೃಶ್ಯ ಅಪ್ಪನ ಕಣ್ಣಲ್ಲಿ ನೀರು ತರಿಸಿತ್ತು. ಕೆರೆಗೆ ನೀರು ತರಲು ಬಂದಿದ್ದ ಎಲ್ಲರಿಗೂ ಕೆರೆಗೆ ಪ್ರವೇಶವಿರಲಿಲ್ಲ. ಕೆಲವು ಜಾತಿಯ ಜನರಿಗೆ ಮಾತ್ರ ಕೆರೆಗೆ ಮುಕ್ತ ಪ್ರವೇಶ. ಊರ ಹೊರಗಿನ ಕೇರಿಗಳ ಜನರು ಖಾಲಿ ಕೊಡಗಳನ್ನು ಹಿಡಿದುಕೊಂಡು, ಕಾಯಬೇಕಿತ್ತು. ಸ್ಪೃಶ್ಯ ಜಾತಿಯ ಜನರು ಕೆರೆಯಲ್ಲಿ ತುಂಬಿದ ನೀರನ್ನು ಅಲ್ಲಿಯೇ ದಡದಲ್ಲಿ ಸಾಲಾಗಿ ಕುಳಿತ ಅಸ್ಪೃಶ್ಯ ಜನರ ಬಿಂದಿಗೆಗಳಿಗೆ ಸುರಿದರೆ ಮಾತ್ರ ಇವರಿಗೆ ನೀರು. ಮಳೆಗಾಲದಲ್ಲಿ ಕೆರೆ ತುಂಬಿರುತ್ತಿತ್ತು. ತುಂಬಿದಾಗ ನೀರು ಎರಡೇ ಮೆಟ್ಟಿಲುಗಳ ಮಟ್ಟದಲ್ಲಿ ಸಿಗುತ್ತಿದ್ದರಿಂದ ನಮಗೆ ಬೇಗ ನೀರು ಸಿಗುತ್ತಿತ್ತು. ಬೇಸಿಗೆಯಲ್ಲಿ ನೀರು ತಳ ಮುಟ್ಟುತ್ತಿತ್ತು. ಆಗ ಇಪ್ಪತ್ತು ಮೂವತ್ತು ಮೆಟ್ಟಿಲು ಇಳಿದು ಉಚ್ಚ ಜಾತಿಯವರು ನೀರು ತರುತ್ತಿದ್ದಾಗ ಮುಟ್ಟಬಾರದ ಜನರ ಬಿಂದಿಗೆಗೆ ಯಾರೂ ನೀರು ಸುರಿಯುತ್ತಿರಲಿಲ್ಲ. ಶ್ರೇಣೀಕೃತ ಸಮಾಜದಲ್ಲಿ ಕೆಳಗಿನಿಂದ ಒಂದೆರಡು ಜಾತಿಗಳ ಮೇಲಷ್ಟೇ ಇದ್ದ ನನ್ನಪ್ಪ ಹುಟ್ಟಿದ ಕುಲಕ್ಕೆ ಕನಿಷ್ಠ ಕೆರೆಗಾದರೂ ಪ್ರವೇಶವಿತ್ತು. ಆದರೆ ಕೇರಿಗಳಲ್ಲಿ ಹುಟ್ಟಿದವರಿಗೆ ಕುಡಿಯುವ ನೀರು ಪಡೆಯಲೂ ಹಕ್ಕಿರದ್ದನ್ನು ಕಂಡು ಕೋಪಗೊಂಡ ಅಪ್ಪ ಕೆರೆಯ ದಡದ ಮೇಲೆ ನೀರಿಗಾಗಿ ಸಾಲು ಸಾಲಾಗಿ ಇರಿಸಿದ್ದ ಕೆರೆಗೆ ಪ್ರವೇಶವಿಲ್ಲದ ಬಿಂದಿಗೆಗಳನ್ನು ಎತ್ತಿ ಕೆರೆಯಲ್ಲಿ ಹಾಕಿದ್ದೇ ತಡ ಬಡಪಾಯಿಗಳು ಕೊಡ ಉಳಿಸಿಕೊಳ್ಳಲಾದರೂ ಕೆರೆಗೆ ಹಾರಲೇಬೇಕಾದ ಅನಿವಾರ್ಯತೆ ಎದುರಾಯಿತು. ಹೀಗೆ ಕೇರಿಯ ಜನರಿಗೆ ಕುಡಿಯುವ ನೀರಿನ ಪ್ರವೇಶ ಕೊಡಿಸಿದ ಸಣ್ಣ ಕ್ರಾಂತಿ ಅರಿವಿಲ್ಲದೆಯೇ ನಡೆದುಹೋಯಿತು.

ಕೆರೆಗಿಳಿದ ಕೇರಿಯ ಜನರೆಲ್ಲಾ ಭಯದಿಂದ, "ಹೊನ್ನಪ್ಪ , ಅವರು ನಿನ್ನ ಬಿಡ್ತಾರಾ ? ಊರು ಬಿಟ್ಟು ಎಲ್ಲಾದ್ರು ಹೋಗು" ಅಂದಿದ್ರಂತೆ. ಅಪ್ಪ ಅದಕ್ಕೆ ನೀವ್ಯಾರೂ ಹೆದರಬೇಕಿಲ್ಲ. ಕೆರೆ ಯಾರಪ್ಪನ ಸ್ವತ್ತೂ ಅಲ್ಲ. ನಾವೂ ಮನುಷ್ಯರೇ. ಕುಡಿಯುವ ನೀರಿಗೂ ಇನ್ನೊಬ್ಬರ ಅಪ್ಪಣೆಯೇ ? ಎಂದು ಹೇಳಿದ್ದರು. ಈ ಘಟನೆಯಿಂದ ರೊಚ್ಚಿಗೆದ್ದ ಹಿರಿಯರೆನಿಸಿಕೊಂಡವರು ಪಂಚಾಯತಿ ಸೇರಿಸಿ, "ಹೊನ್ನಪ್ಪ ಯಾಕೆ ಹೀಗೆ ಮಾಡಿದೆ ? ಅವರ ಬಿಂದಿಗೆಗಳನ್ನು ಕೆರೆಯಲ್ಲಿ ಎಸೆದು ಕೆರೆಯನ್ನು ಮಲಿನಗೊಳಿಸಿದ ನಿನ್ನನ್ನು ಊರಿನಿಂದ ಹೊರಹಾಕುತ್ತೇವೆ" ಎಂದಾಗ, "ಕುಡಿಯುವ ನೀರಿಗೆ ಯಾರ ಅಪ್ಪಣೆಯೂ ಬೇಕಿಲ್ಲ. ಕೆರೆ ಯಾರಪ್ಪನ ಸ್ವತ್ತೂ ಅಲ್ಲ. ಬಿಂದಿಗೆ ಇಳಿದರೆ ಮಲಿನವಾಗುವುದಾದರೆ ನೀವು ಊರಲ್ಲೆಲ್ಲ ಬರಿಗಾಲಿನಲ್ಲಿ ತಿರುಗಾಡಿ, ಹಾಗೆಯೇ ಕೆರೆಗೆ ಇಳಿದಾಗ ಮಲಿನ ಆಗುವುದಿಲ್ಲವೇ ? ಕುಡಿಯುವ ನೀರಿಗಾಗಿ ಬಡಿದಾಡುವ ಪ್ರಸಂಗ ಬೇಕೆ ? ನೀವೇನಾದರೂ ಕೆರೆಯ ನೀರನ್ನು ತುಂಬಲು ಬಿಡದಿದ್ದರೆ ನಾನು ಮುಖ್ಯಮಂತ್ರಿಯವರಿಗೆ ಪತ್ರ ಬರೀತೀನಿ. ನ್ಯಾಯಾಲಯಕ್ಕೆ ಹೋಗ್ತೀನಿ"



ಕೆಲವು ಜಾತಿಯ ಜನರಿಗೆ ಮಾತ್ರ ಕೆರೆಗೆ ಮುಕ್ತ ಪ್ರವೇಶ. ಊರ ಹೊರಗಿನ ಕೇರಿಗಳ ಜನರು ಖಾಲಿ ಕೊಡಗಳನ್ನು ಹಿಡಿದುಕೊಂಡು ಕಾಯಬೇಕಿತ್ತು. ಸ್ಪೃಶ್ಯ ಜಾತಿಯ ಜನರು ಕೆರೆಯಲ್ಲಿ ತುಂಬಿದ ನೀರನ್ನು ಅಲ್ಲಿಯೇ ದಡದಲ್ಲಿ ಸಾಲಾಗಿ ಕುಳಿತ ಅಸ್ಪೃಶ್ಯ ಜನರ ಬಿಂದಿಗೆಗಳಿಗೆ ಸುರಿದರೆ ಮಾತ್ರ ಇವರಿಗೆ ನೀರು. ಮಳೆಗಾಲದಲ್ಲಿ ಕೆರೆ ತುಂಬಿರುತ್ತಿತ್ತು. ತುಂಬಿದಾಗ ನೀರು ಎರಡೇ ಮೆಟ್ಟಿಲುಗಳ ಮಟ್ಟದಲ್ಲಿ ಸಿಗುತ್ತಿದ್ದರಿಂದ ನಮಗೆ ಬೇಗ ನೀರು ಸಿಗುತ್ತಿತ್ತು. ಬೇಸಿಗೆಯಲ್ಲಿ ನೀರು ತಳ ಮುಟ್ಟುತ್ತಿತ್ತು. ಆಗ ಇಪ್ಪತ್ತು ಮೂವತ್ತು ಮೆಟ್ಟಿಲು ಇಳಿದು ಉಚ್ಚ ಜಾತಿಯವರು ನೀರು ತರುತ್ತಿದ್ದಾಗ ಮುಟ್ಟಬಾರದ ಜನರ ಬಿಂದಿಗೆಗೆ ಯಾರೂ ನೀರು ಸುರಿಯುತ್ತಿರಲಿಲ್ಲ.




ಎಂದು ಎಚ್ಚರಿಕೆ ನೀಡಿದ್ದರು. ಇದರಿಂದ ಕೋಪಗೊಂಡ ಪಟ್ಟಭದ್ರ ಜನ ಅಪ್ಪನನ್ನು ಕಂಡರೆ ಹಲ್ಲು ಮಸೆಯುತ್ತಿದ್ದರು. ಅಪ್ಪನಿಗೆ ಸರಕಾರಿ ಉದ್ಯೋಗದ ನೇಮಕಾತಿ ಆದೇಶ ಪತ್ರಗಳು ಬಂದಿದ್ದರೂ, ಅವು ಆತನ ಕೈ ಸೇರದಂತೆ ಮಾಡುತ್ತಿದ್ದರು. ಯಾಕಂದ್ರೆ ಊರಿನ ಅಂಚೆ ಇಲಾಖೆಯನ್ನು ನಡೆಸುತ್ತಿದ್ದವರು ಮೇಲ್ವರ್ಗದ ಜಾತಿಯವರು. ಕೊನೆಗೆ ಅಪ್ಪ ಆ ವ್ಯಾಪ್ತಿಯ ಪ್ರಧಾನ ಅಂಚೆ ಅಧಿಕಾರಿಗಳಿಗೆ ತಿಳಿಸಿದಾಗ ಪತ್ರಗಳನ್ನು ನೀಡತೊಡಗಿದರು. ಜೀವನದ ಪ್ರತಿ ಕ್ಷಣವೂ ಹೋರಾಟದಿಂದಲೇ ಬದುಕಿದ ಅಪ್ಪ ಉಳಿದವರಿಗೆ ಸಾಮಾನ್ಯವಾಗಿ ಸಿಗುವ ಎಲ್ಲ ಸೌಕರ್ಯಗಳು ನಮಗೆ ಮಾತ್ರ ಹೋರಾಟದಿಂದ ದಕ್ಕುತ್ತಿದ್ದವು ಎಂದು ಹೇಳುತ್ತಿರುತ್ತಾರೆ.

ಅಚ್ಚರಿ ಅಂದರೆ ಆ ಊರಿನಲ್ಲಿ ಕೆರೆ ಕಾಯುತ್ತಿದ್ದದು ನನ್ನ ಅಜ್ಜನೇ. ಆದರೆ ಕೆರೆಯ ಈ ಗಲಾಟೆ ನಡೆಯುವ ಹೊತ್ತಿಗೆ ಅಜ್ಜ ಮರಣಹೊಂದಿದ್ದ. ಆ ಕೆಲಸ ಮುಂದೆ ನಮ್ಮ ದೊಡ್ಡಪ್ಪನ ಪಾಲಾಗಿತ್ತು. ದೊಡ್ಡಪ್ಪ, "ನಿನಗ್ಯಾಕಲೇ ಊರವರ ಉಸಾಬರಿ ?" ಎಂದು ಬೈಯುತ್ತಿದ್ದ. ಅವರನ್ನು ಎದುರು ಹಾಕಿಕೊಂಡು ಈ ಊರಲ್ಲಿ ಬದುಕೋಕೆ ಆಗ್ತೈತನಲೇ ಎನ್ನುತ್ತಿದ್ದರು. ಅಪ್ಪ ಮನೆಯವರ, ಕೇರಿಯ ಜನರ ವಿರೋಧದ ನಡುವೆಯೂ ಕೆರೆಗೆ ಸರ್ವರಿಗೂ ಪ್ರವೇಶ ಕಲ್ಪಿಸುವಲ್ಲಿ ಯಶಸ್ವಿಯಾಗಿದ್ದರು.

ಹೀಗೆ ದಿನಗಳು ಕಳೆದಂತೆ ಅಪ್ಪನಿಗೆ ಶಿಕ್ಷಕ ವೃತ್ತಿಗೆ ಆದೇಶ ಬಂದಿತ್ತು. ಶಿಕ್ಷಕನ ವೃತ್ತಿಯನ್ನು ಪ್ರಾರಂಭಿಸಿದ ಅಪ್ಪ ಕರ್ನಾಟಕದ ಹಲವಾರು ಕಡೆಗಳಲ್ಲಿ ಕಾರ್ಯ ನಿರ್ವಹಿಸಿ, ಶಿಕ್ಷಕ ವೃತ್ತಿಗೆ ನ್ಯಾಯ ಸಲ್ಲಿಸಿ, ಇದೀಗ ನಿವೃತ್ತಿ ಹೊಂದಿದ್ದಾರೆ. ನಿವೃತ್ತಿಯ ನಂತರ ಅಪ್ಪ ಕೃಷಿಕರಾಗಿದ್ದಾರೆ. ಅಪ್ಪ ನಮಗೆ ಪೌರಾಣಿಕ ದೇವರುಗಳಿಗಿಂತ, ನಮ್ಮ ನಡುವೆ ಇದ್ದುಹೋದ ಸಿದ್ಧ ಪುರುಷರಾದ ಸಿದ್ಧಾರೂಢರು, ಬಸವಣ್ಣ, ಶಿಶುನಾಳ ಶರೀಫರು ಮತ್ತಿತರ ಶರಣರು, ತತ್ವಪದಕಾರರ ಬಗ್ಗೆ ಹೇಳಿ ಬೆಳೆಸಿದ್ದರು. ನಾವು ಪದವಿ ಓದುವವರೆಗೂ ನಮಗೆ ನಮ್ಮ ಮನೆಯ ದೇವರು ಯಾವುದು ಅಂತ ಅಪ್ಪ ತಿಳಿಸಿದ್ದರೂ ಕರೆದುಕೊಂಡು ಹೋಗಿರಲಿಲ್ಲ. ಹೀಗೆ ಮುಂತಾದ ಶರಣರ, ದಾಸರ ಪದಗಳ ಕೇಳಿ ಬೆಳೆದ ನಾನು ಚಿಕ್ಕವನಿದ್ದಾಗ ದೇವರಿಗೊಂದು ಪತ್ರ ಬರೆದಿದ್ದೆ. ಪತ್ರಕ್ಕೆ ಉತ್ತರ ಬರಲೇ ಇಲ್ಲ ಪತ್ರ ತಲುಪಿತೋ ಇಲ್ಲವೋ ಎಂಬುದೇ ನನಗೆ ತಿಳಿಯಲಿಲ್ಲ.

ನಾನು ಅಪ್ಪನ ಮುದ್ದಿನ ಮಗ. ತನ್ನ ಕನಸುಗಳನ್ನೆಲ್ಲಾ ನನಸು ಮಾಡಲೆಂದು ನನಗೆ 'ಕನಸು' ಎಂಬ ಹೆಸರಿಟ್ಟಿದ್ದು. ನಾನು ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದ ವೇಳೆ ನಮ್ಮ ಶಾಲೆಯಲ್ಲಿ ಸರಸ್ವತಿ ಎಂಬ ಶಿಕ್ಷಕರಿದ್ದರು. ಈ ಟೀಚರ್ ಕೆಳಜಾತಿಯ ಮಕ್ಕಳೊಂದಿಗೆ ಸೇರುತ್ತಿರಲಿಲ್ಲ. ಸದಾ ಬೈಯುತ್ತಿದ್ದರು. "ಆಚಾರ, ವಿಚಾರ ಗೊತ್ತಿಲ್ಲದ ಈ ದರಿದ್ರ ಮಕ್ಕಳನ್ನು ತಂದು ನಮ್ಮ ಪ್ರಾಣ ತಿಂತಾರೆ" ಎಂದು ಸದಾ ಗೊಣಗುತ್ತಿದ್ದರು. ನಮ್ಮ ತರಗತಿಯಲ್ಲಿ ತೇಜಸ್ವಿನಿ ಎಂಬ ಅವರ ಜಾತಿಯ ವಿದ್ಯಾರ್ಥಿನಿಯೊಬ್ಬಳಿದ್ದಳು. ಅವಳು ತಂದ ನೀರನ್ನು ಕುಡಿಯುತ್ತಿದ್ದರು. ನೀರು ಬೇಕೆಂದಾಗ ಅವಳನ್ನೇ ಕಳುಹಿಸುತ್ತಿದ್ದರು. ಬೇರೆ ಶಿಕ್ಷಕರು ನನ್ನಿಂದ ನೀರು ತರಿಸಿಕೊಂಡು ಕುಡಿದರೆ, ಇವರು ಮಾತ್ರ ಆ ನೀರನ್ನು ಮುಟ್ಟುತ್ತಿರಲಿಲ್ಲ. ಇದನ್ನು ನೋಡಿದ ನಮಗೆಲ್ಲಾ ನಾವು ನೀರು ಕೊಡಬಾರದೇ, ನಮ್ಮಿಂದ ಅವರು ನೀರು ಸ್ವೀಕರಿಸಬಾರದೇ ಎನಿಸುತ್ತಿತ್ತು. ಪಾಠ ಹೇಳಿ ಸರಿದಾರಿಗೆ ತರಬೇಕಾದ ಟೀಚರ್ ಸರಸ್ವತಿದೇವಿ ತರಹದವರು ಹೀಗೆ ಮಾಡಿದ್ದು ನಮಗೆ ಬೇಸರವನ್ನುಂಟುಮಾಡಿತ್ತು. ಇದರಿಂದ ಬೇಸರಗೊಂಡ ನಾನು ಈ ಅಂಶವನ್ನೂ ಆ ಪತ್ರದಲ್ಲಿ ಬರೆದಿದ್ದೆ.

ಆ ಪತ್ರ ಹೀಗಿತ್ತು :

"ಪ್ರೀತಿಯ ಜಗವ ಕಾಯುವ ದೇವರೆ.

ನಾವು ಮನುಷ್ಯರಲ್ಲವೇ ? ನಮಗೇಕೆ ಎಲ್ಲೆಡೆ ಮುಕ್ತ ಪ್ರವೇಶವಿಲ್ಲ ? ಸರಸ್ವತಿದೇವಿ ಟೀಚರ್‌ಗೆ ನೀರು ಕೊಡಬಾರದೇ ? ಟೀಚರ್ ನಾವು ತಂದ ನೀರು ಕುಡಿದರೆ ಏನಾಗುತ್ತದೆ ? ಹಲವು ಕಡೆ ಜನಿವಾರ ನೋಡಿ ಪ್ರಸಾದ ನೀಡುವ ಪರಿಪಾಠ ಏಕಿದೆ ? ಹಾಗಾದರೆ ಅವರು ಶ್ರೇಷ್ಠರೇ ? ನಾವು ಕನಿಷ್ಠರೇ ? ಹೇಳು ದೇವರೆ, ಹೇಳು. ನಾನು ಅವರಂತೆ ದಿನನಿತ್ಯ ನಿನಗೆ ಊದಿನಕಡ್ಡಿ ಬೆಳಗುತ್ತೇನೆ. ಗುರುಗಳು ಹೇಳಿದ ಪಾಠವನ್ನು ಓದುತ್ತೇನೆ. ನಾ ಮಾಡಿದ ತಪ್ಪಾದರೂ ಏನು ? ಹೇಳು ತಂದೆ.

– ಎಂದು ಇಪ್ಪತ್ತೈದು ಪೈಸೆಯ ಅಂಚೆಯ ಕಾರ್ಡಿನಲ್ಲಿ ಬರೆದು, (ಸೃಷ್ಟಿಕರ್ತ ಬ್ರಹ್ಮ ಎಂದು ಎಲ್ಲೋ ಹಿರಿಯರು ಹೇಳಿದ್ದ ನೆನಪು) 'ಸೃಷ್ಟಿಕರ್ತ ಬ್ರಹ್ಮ, ಕೇರಾಫ್ ದೇವಲೋಕ' ಎಂಬ ವಿಳಾಸಕ್ಕೆ ಕಳುಹಿಸಿದ್ದೆ. ಆ ಪತ್ರಕ್ಕೆ ಉತ್ತರ ಬರಲೇ ಇಲ್ಲ.

ಎಂದೂ ಈ ಪೌರಾಣಿಕ ದೇವರುಗಳನ್ನು ನೆನೆಯದ ನಾನು ಗಣಪತಿಯನ್ನು ನೆನೆಯುತ್ತೇನೆ. ಯಾಕಂದ್ರೆ ಗಣಪತಿ ನಮಗೆ ಮುಕ್ತ ಪ್ರವೇಶ ನೀಡಿದ್ದಾನೆ. ಗೆಳೆಯರೊಂದಿಗೆ ಸೇರಿ ಗಣಪತಿಯನ್ನು ಪ್ರತಿಷ್ಠಾಪಿಸಿದ್ದೇವೆ. ಎಲ್ಲರಿಗೂ ಒಂದೇ ಪಂಕ್ತಿಯಲ್ಲಿ ಕೂಡಿಸಿ ಊಟ ಮಾಡಿಸಿದ್ದೇವೆ. ಪಂಕ್ತಿಭೇದಗಳಿಲ್ಲದೆ ಗಣಪತಿಯ ಹಬ್ಬವನ್ನು ಎಲ್ಲರೂ ಆಚರಿಸಿದ್ದಾರೆ. ಮೂಲಭೂತವಾದಿಗಳಲ್ಲದ, ಇತರ ಧರ್ಮದ ಗೆಳೆಯರ ಮನೆಯಲ್ಲೂ ಗಣಪತಿಯನ್ನು ಕೂಡಿಸಿದ್ದಾರೆ. ಮಡಿ ಮೈಲಿಗೆ ಎನ್ನದೇ ಗಣಪತಿಗೆ ಮದ್ಯ-ಮಾಂಸದಿಂದ ಎಡೆ ಹಿಡಿದು ಪೂಜಿಸಿದ್ದಾರೆ.

ಸ್ವಾತಂತ್ರ್ಯ ಬಂದು ಎಪ್ಪತ್ತು ವರ್ಷಗಳಾಗುತ್ತ ಬಂದರೂ ಸಮಾನತೆ ಅನ್ನುವುದು ಮರೀಚಿಕೆಯಾಗಿದೆ. ಪುರಾತನದಿಂದಲೂ ಅಕ್ಷರ ಜ್ಞಾನ ಪಡೆದ ಹಿರಿಯರೇ ಈ ಗೊಡ್ಡು ಆಚರಣೆಯನ್ನು ಆಚರಿಸುತ್ತಾರೆ. ಮೌಢ್ಯಕ್ಕೆ ನಮ್ಮನ್ನು ತಳ್ಳುತ್ತಾರೆ. ಹೀಗಾಗಿಯೇ ಮೂಢನಂಬಿಕೆಗಳನ್ನು ಆಚರಿಸದೆ, ಪಂಕ್ತಿಭೇದ ಮಾಡದೆ, ಎಲ್ಲರನ್ನೂ ಸಮಾನವೆಂದು ಕಂಡ ಸಿದ್ಧಾರೂಢರು, ಶಿಶುನಾಳ ಶರೀಫಜ್ಜ, ಇವನಾರವ ಇವನಾರವ ಎಂದೆನಿಸದೇ ಇವ ನಮ್ಮವ ಎಂದೆನಿಸಯ್ಯ ಎಂದ ವಿಶ್ವಗುರು ಬಸವಣ್ಣ, ಶೋಷಿತರ ಧ್ವನಿ ಡಾ॥ ಬಿ. ಆರ್. ಅಂಬೇಡ್ಕರ್ ನಮಗೆಲ್ಲರಿಗೂ ಆದರ್ಶವಾಗಬೇಕಿದೆ. ನನ್ನ ಪ್ರಕಾರ ಮೌಢ್ಯದ ಕತ್ತಲನ್ನು ಹೊಡೆದೋಡಿಸಿ ಬೆಳಕಿನತ್ತ ಹೆಜ್ಜೆ ಇಟ್ಟ ಇವರೇ ನಮಗೆ ದೇವರುಗಳು.

**ನಾಗರಾಜನಾಯಕ ಡಿ. ಡೊಳ್ಳಿನ**
'ತಾಯಿ ನೆರಳು', ಪ್ರಗತಿ ನಗರ, ಕಿನ್ನಾಳ ರಸ್ತೆ
ಕೊಪ್ಪಳ – ೫೮೩ ೨೩೧



ಆಕಾಶವಾಣಿಯ ಭಾಗವಾಗಿ ಪ್ರಾರಂಭವಾದ ಟೆಲಿವಿಷನ್ ಕ್ರಮಬದ್ಧವಾದ ರೀತಿಯಲ್ಲಿ ಪ್ರತಿದಿನ ಸುದ್ದಿ ಪ್ರಸಾರ, ಸಾಕ್ಷ್ಯಚಿತ್ರಗಳ ಪ್ರಸಾರ ಪ್ರಾರಂಭವಾದ್ದು ೧೯೬೫ರಲ್ಲಿ. ಆಗ ಪ್ರಸಾರ ದೆಹಲಿಗೆ ಮಾತ್ರ ಸೀಮಿತವಾಗಿತ್ತು. ೧೯೭೨ರಲ್ಲಿ ಟಿವಿ ಪ್ರಸಾರವನ್ನು ಮುಂಬಯಿ ಮತ್ತು ಅಮೃತಸರಗಳಿಗೆ ವಿಸ್ತರಿಸಲಾಯಿತು. ೧೯೭೫ರ ವೇಳೆಗೆ ಭಾರತದ ಏಳು ನಗರಗಳಲ್ಲಿ ಟೆಲಿವಿಷನ್ ಪ್ರಸಾರ ಪ್ರಾರಂಭವಾಯಿತು. ೧೯೭೬ರಲ್ಲಿ ಆಕಾಶವಾಣಿಯಿಂದ ಟೆಲಿವಿಷನ್ ಪ್ರಸಾರ ಬೇರ್ಪಟ್ಟು ಪ್ರತ್ಯೇಕಗೊಂಡಿತು. ೧೯೮೨ರಲ್ಲಿ ಕಪ್ಪು-ಬಿಳುಪು ಚಿತ್ರ ಪ್ರಸಾರ ಕೊನೆಗೊಂಡು ಬಣ್ಣದ ಚಿತ್ರಗಳ ಪ್ರಸಾರ ಪ್ರಾರಂಭಗೊಂಡಿತು. ಅದೇ ವರ್ಷ ರಾಷ್ಟ್ರೀಯ ಪ್ರಸಾರವೂ ಶುರುವಾಯಿತು. ಆಗ ಇದ್ದದ್ದು ರಾಷ್ಟ್ರೀಯ ಚಾನಲ್ ಒಂದೇ. ಅದು ಸರಕಾರದ ಒಡೆತನದಲ್ಲಿದ್ದ ದೂರದರ್ಶನ ಮಾತ್ರ. ನಿಗದಿತ ಅವಧಿಗಳಲ್ಲಿ ಮಾತ್ರ ಕಾರ್ಯಕ್ರಮಗಳೂ ಪ್ರಸಾರವಾಗುತ್ತಿದ್ದವು. ಎರಡನೇ ಚಾನೆಲ್ ಡಿಡಿ ಮೆಟ್ರೋ ಬಂದದ್ದು ಕೂಡ ೧೯೮೦ರ ದಶಕದಲ್ಲೇ.

# ಟಿವಿ ಲೋಕ : ಪ್ರೇಕ್ಷಕರನ್ನು ಸೆರೆಹಿಡಿದಿರಿಸುವ ಟೆಲಿವಿಷನ್

**ಬೆಂ**ಗಳೂರಿನಲ್ಲಿ ಮೊನ್ನೆ ಭಾನುವಾರ ಟಿವಿ ನೋಡುತ್ತಿರುವಾಗ ನಾಯಿ ಬೊಗಳಿದ್ದಕ್ಕೆ ಗೆಳೆಯನನ್ನೇ ಕೊಂದುಹಾಕಿದ ಘಟನೆಯೊಂದು ಸಂಭವಿಸಿತು. ದೂರದರ್ಶನದಲ್ಲಿ ಪ್ರಸಾರವಾಗುತ್ತಿದ್ದ ಕ್ರಿಕೆಟ್ ಮ್ಯಾಚ್ ಕುತೂಹಲಕಾರಿ ಘಟ್ಟ ಮುಟ್ಟಿದಾಗ ನಡೆದ ಪ್ರಕರಣ ಇದು. ಟಿವಿ ಪ್ರಭಾವ ಎಂಥದ್ದು ಎಂಬುದಕ್ಕೆ ಇದು ಒಂದು ಇತ್ತೀಚಿನ ಉದಾಹರಣೆ. ಕ್ರಿಕೆಟ್‌ನ ಅತಿಯಾದ ವ್ಯಾಮೋಹವೂ ಇದರಲ್ಲಿ ಸೇರಿದೆ. ಟಿವಿ ಪ್ರಭಾವದಿಂದ ಇಂಥ ದುರ್ಘಟನೆಗಳು, ಪ್ರೀತಿ ಪ್ರೇಮ, ಆತ್ಮಹತ್ಯೆ ಪ್ರಕರಣಗಳು ಅಪರೂಪವೇನಲ್ಲ. ದೃಶ್ಯಮಾಧ್ಯಮ ಮನಸ್ಸಿನ ಮೇಲೆ ಎಂಥ ಪರಿಣಾಮ ಉಂಟುಮಾಡುತ್ತದೆ ಎನ್ನುವುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಅದು ಒಳ್ಳೆಯದೂ ಆಗಿರಬಹುದು, ಕೆಟ್ಟದ್ದೂ ಆಗಿರಬಹುದು. ಹಿಂದೆ ಸಿನಿಮಾ ಬಂದಾಗ ಅದರಿಂದ ಪ್ರಭಾವಿತರಾದವರು ದುಷ್ಕೃತ್ಯಗಳಲ್ಲಿ, ಸುಕೃತ್ಯಗಳಲ್ಲಿ ತೊಡಗಿದ್ದುದನ್ನು ಕಂಡಿದ್ದೇವೆ. ಅಮೆರಿಕದಲ್ಲಿ 'ದಿ ಗ್ರೇಟ್ ಟ್ರೇನ್ ರಾಬರಿ' ಚಿತ್ರ ನೋಡಿ ಪ್ರಭಾವಿತರಾದವರು ಅದನ್ನೇ ಅನುಕರಣೆ ಮಾಡಿದ್ದ ಪ್ರಕರಣ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಕೆದಕುತ್ತಾ ಹೋದರೆ ಇನ್ನೆಷ್ಟೋ ಉದಾಹರಣೆಗಳನ್ನು ಕೊಡುತ್ತಾ ಹೋಗಬಹುದು. ಇಪ್ಪತ್ತನೇ ಶತಮಾನದ ಹಲವು ಅದ್ಭುತಗಳಲ್ಲಿ ಟೆಲಿವಿಷನ್ ಸಹ ಒಂದು. ಕನ್ನಡದಲ್ಲಿ ಸಂವಾದಿಯಾಗಿ ದೂರದರ್ಶನ ಎಂದಾಗಿದೆ. ರೇಡಿಯೋಗೆ ಆಕಾಶವಾಣಿಯಂತೆ. ಅದು ಮನೋರಂಜನೆಯನ್ನು ನಮ್ಮ ಮನೆಯ ಬಾಗಿಲಿಗೇ ತಂದಿದೆ. ಟೆಲಿವಿಷನ್ ಕಂಡುಹಿಡಿದು ಇನ್ನೂ ನೂರು ವರ್ಷ ತುಂಬಿಲ್ಲ. ಭಾರತಕ್ಕೆ ಪ್ರವೇಶಿಸಿ ಅರವತ್ತು ವರ್ಷಗಳು ಕೂಡ ಆಗಿಲ್ಲ. ಆದರೂ ಅದು ಪ್ರಪಂಚದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಮಾಧ್ಯಮವಾಗಿ ಹೊಮ್ಮಿದೆ. ಜಗತ್ತಿನ ಯಾವುದೇ ಮೂಲೆಯಲ್ಲಿಯಾದರೂ ಸರಿ ಸಂಭವಿಸುವ ವಿದ್ಯಮಾನಗಳನ್ನು ಕ್ಷಣಾರ್ಧದಲ್ಲಿ ಇಡೀ ಪ್ರಪಂಚಕ್ಕೆ ತಲುಪಿಸುವ ಸಾಮರ್ಥ್ಯವನ್ನು ಹೊಂದಿರುವುದು ಟೆಲಿವಿಷನ್ ಎನ್ನುವುದರಲ್ಲಿ ಸಂಶಯವಿಲ್ಲ. ಈ ಹಿಂದೆ ನಿಗದಿತ ಸಮಯದಲ್ಲಿ ಸುದ್ದಿ ಪ್ರಸಾರ ಮಾಡುತ್ತಿದ್ದ ರೇಡಿಯೋಗಿಂತ ವೇಗವಾಗಿ ಚಿತ್ರಸಮೇತ ಟಿವಿ ಮಾಡಬಲ್ಲದು. ಬಾಹ್ಯಾಂತರಿಕ್ಷ ವಿಜ್ಞಾನದಲ್ಲಿ ಆಗಿರುವ ಪ್ರಗತಿ ಮತ್ತು ಕಕ್ಷೆಯಲ್ಲಿ ತೇಲಾಡುತ್ತಿರುವ ಉಪಗ್ರಹಗಳಿಂದ ಇದು ಸಾಧ್ಯವಾಗಿದೆ. ವೀಕ್ಷಕರನ್ನು ಸೆರೆಹಿಡಿದಿಡುವ ಶಕ್ತಿಯನ್ನು ಹೊಂದಿದ್ದು ಪ್ರತಿ ಮನೆಯಲ್ಲೂ ಪ್ರತಿಷ್ಠಾಪನೆಯಾಗಿರುವ ಟಿವಿ ಆಬಾಲವೃದ್ಧರಾದಿಯಾಗಿ ಎಲ್ಲರಿಗೂ ಪ್ರಿಯವಾಗಿದೆ. ದಿನದ ಇಪ್ಪತ್ತನಾಲ್ಕು ಗಂಟೆಯೂ ಪ್ರಸಾರಮಾಡುವ ಈ ಮಾಧ್ಯಮ ನೂರಾರು ಚಾನೆಲ್‌ಗಳನ್ನು ಎಲ್ಲ ಭಾಷೆಯಲ್ಲೂ ಹೊಂದಿದೆ. ಭಾರತದಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ ಪ್ರಸಾರ ಪ್ರಾರಂಭವಾಗಿದ್ದು ೧೯೮೦ರ ದಶಕದಲ್ಲಿ. ಟೆಲಿವಿಷನ್ ಪ್ರಾರಂಭವಾದ ಮೇಲೆ ಪತ್ರಿಕೆಗಳ ಪ್ರಸಾರ ಇಳಿಮುಖವಾಗುವುದೆಂಬ ಆತಂಕ ಇತ್ತು. ಆದರೆ ಅಂಥದ್ದೇನೂ ಆಗಲಿಲ್ಲ ಎನ್ನಬೇಕು. ಪ್ರಿಂಟ್ ಮೀಡಿಯಾ ಮತ್ತು ಎಲೆಕ್ಟ್ರಾನಿಕ್ ಮಾಧ್ಯಮ ಎರಡೂ ಜೊತೆಯಾಗೇ ಬೆಳೆದಿವೆ. ಎರಡೂ ಕೂಡ ಬಂಡವಾಳಗಾರರ ಬಿಗಿ ಮುಷ್ಟಿಯಲ್ಲಿವೆ. ಈಗಿನ ಕಂಪ್ಯೂಟರ್ ಯುಗದಲ್ಲಿ ಇದರ ಜೊತೆಗೆ ಸಾಮಾಜಿಕ ಜಾಲತಾಣವೂ ಸೇರಿದೆ. ಹೀಗೆ ವಿಸ್ತಾರಗೊಂಡಿರುವ ಅಭಿವ್ಯಕ್ತಿ ಮಾಧ್ಯಮ ಮನುಕುಲಕ್ಕೆ ಒಳಿತು ಮಾಡಿದೆಯೇ, ಕೆಡುಕು ಮಾಡಿದೆಯೇ ಎನ್ನುವುದು ಬೇರೆಯ ವಿಚಾರ. ಆದರೆ ಇಂದು ಈ ಮೂರೂ

**ಸಿ. ಆರ್. ಕೃಷ್ಣರಾವ್**

ಮಾಧ್ಯಮಗಳು ನಮ್ಮ ಜೀವನದ ಅವಿಭಾಜ್ಯ ಅಂಗಗಳಾಗಿವೆ ಎನ್ನುವುದಂತೂ ನಿಜ.

ಟೆಲಿವಿಷನ್‌ನ ಬೆಳವಣಿಗೆ ಅಸಾಧಾರಣವಾದದ್ದು. ಮೊದಲಿನಲ್ಲಿ ಸೀಮಿತವಾದ ಪ್ರದೇಶದಲ್ಲಿ ಮಾತ್ರ ಕೆಲವೇ ಗಂಟೆಗಳ ಕಾಲ ಪ್ರಸಾರವಾಗುತ್ತಿದ್ದ ಕಾರ್ಯಕ್ರಮಗಳು ಜಗದ್ವ್ಯಾಪಿಯಾಗಿ ಹರಡಿವೆ, ದಿನವಿಡೀ ಪ್ರಸಾರಗೊಳ್ಳುತ್ತಿವೆ. ಬೇರಾವ ಮಾಧ್ಯಮವೂ ಇಷ್ಟು ಅಲ್ಪಾವಧಿ ಕಾಲದಲ್ಲಿ ಪ್ರಪಂಚದಾದ್ಯಂತ ಪಸರಿಸಿದ್ದು ಕಾಣಸಿಗದು. ಅಖಂಡವಾಗಿ ವೃದ್ಧಿಗೊಳ್ಳುತ್ತಿರುವ ತಂತ್ರಜ್ಞಾನವೇ ಇದಕ್ಕೆ ಕಾರಣ. ಕಪ್ಪು–ಬಿಳುಪು ಚಿತ್ರಗಳನ್ನು ಪ್ರಸಾರ ಮಾಡುತ್ತಿದ್ದ ಈ ಮಾಧ್ಯಮ ಬಣ್ಣಗಳನ್ನು ಒಗ್ಗಿಸಿಕೊಂಡಿದ್ದು ಕೂಡ ಬಹುಬೇಗ. ಕಿರುತೆರೆ ಎಂದು ಕರೆಸಿಕೊಂಡಿರುವ ಈ ಮಾಧ್ಯಮ ಈಗ 'ಹೋಮ್ ಥಿಯೇಟರ್' ಆಗಿ ಬೃಹತ್ತಾಗಿ ಬೆಳೆದಿದೆ. ಭಾರಿ ಗಾತ್ರ ಹೊಂದಿದ್ದ ಟಿವಿ ಸೆಟ್‌ಗಳು ಮಾಯವಾಗಿ ಈಗ ಗೋಡೆಗೇ ಲಗತ್ತಿಸಬಹುದಾದ ತೆಳುರೂಪ ತಾಳಿದೆ. ಈಗಾಗಲೇ ಮಾರುಕಟ್ಟೆಯಲ್ಲಿ ೩–ಡಿ ಸೆಟ್‌ಗಳು ಕಾಣಿಸಿಕೊಂಡಿವೆ. ಶ್ರೀಮಂತರು, ಬಡವರು ಎಲ್ಲರ ಮನೆಗಳಲ್ಲೂ ಇಂದು ಟಿವಿ ಸೆಟ್‌ಗಳು ಶೋಭಿಸುತ್ತಿವೆ ಎನ್ನಬಹುದು. ಒಂದು ಕಾಲಕ್ಕೆ ಶ್ರೀಮಂತರ ಮನೆಗಳಲ್ಲಿ ಮಾತ್ರ ಇರುತ್ತಿದ್ದ ರೇಡಿಯೋಗಳು, ಈಗ ನಾನಾ ರೂಪ ತಾಳಿ ಇನ್ನೂ ಜೀವಂತವಾಗಿವೆ. ಆಗೆಲ್ಲ ಇನ್ನು ಮುಂದೆ ಹಾಡುವವರ, ಪಾತ್ರಧಾರಿಗಳ, ಸುದ್ದಿ ಪ್ರಸಾರ ಮಾಡುವವರ ಚಿತ್ರಗಳನ್ನು ನೋಡಬಹುದಂತೆ ಎಂದು ಹೇಳುತ್ತಿದ್ದರು. ಅದು ನಿಜವಾಗಲು ಹೆಚ್ಚು ಕಾಲ ಬೇಕಾಗಲಿಲ್ಲ.



ಹತ್ತೊಂಬತ್ತನೇ ಶತಮಾನದ ಕೊನೆಯಲ್ಲಿ, ೧೮೭೫ರಲ್ಲೇ ಅಮೆರಿಕದ ಬಾಸ್ಟನ್ನಿನಲ್ಲಿ ವಾಸಿಸುತ್ತಿದ್ದ ಸಿ. ಆರ್. ಕ್ಯಾರಿ ಎಂಬಾತ ತನ್ನ ಪ್ರಯೋಗಾಲಯದಲ್ಲಿ ಸರಳ ರೀತಿಯ ಟೆಲಿವಿಷನ್ ರಚಿಸಿದ್ದ. ಇದರಲ್ಲಿ ವಸ್ತುವಿನಿಂದ ಪ್ರತಿಫಲಿಸಲ್ಪಟ್ಟ ಬೆಳಕು ಗಾಜಿನ ಯವವೊಂದನ್ನು ಹಾದು ಪ್ರಭೆ ವಿದ್ಯುತ್‌ಕೋಶದ ಮೇಲೆ ಬಿದ್ದಿತು. ಇದು ವಸ್ತುವಿನ ಪ್ರತಿಬಿಂಬವನ್ನು ರೂಪಿಸಿತು. ಆದರೆ ಈ ಸಂಶೋಧನೆ ಮೇಲೇಳಲಿಲ್ಲ. ಇದಾದ ಮೇಲೆ ೧೯೨೬ರಲ್ಲಿ ಇಂಗ್ಲೆಂಡಿನ ಜಾನ್ ಬೈರ್ಡ್ ಎಂಬುವನು ಪ್ರಥಮವಾಗಿ ಸಾರ್ವಜನಿಕ ಟೆಲಿವಿಷನ್ ಏರ್ಪಡಿಸಿದ. ಆದರೆ ಟೆಲಿವಿಷನ್ ಬಳಕೆಗೆ ಬಂದದ್ದು ಮೊದಲು ಇಂಗ್ಲೆಂಡಿನಲ್ಲಿ, ೧೯೩೨ರಲ್ಲಿ. ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಂಪೆನಿ, ಹ್ರಸ್ವವಾಗಿ ಬಿಬಿಸಿ ಎಂದೇ ಪ್ರಖ್ಯಾತವಾಗಿದ್ದ ಸಂಸ್ಥೆ ಸುದ್ದಿ ಪ್ರಸಾರ ಮಾಡತೊಡಗಿತು. ಮನೋರಂಜನೆಗಾಗಿ ಟೆಲಿವಿಷನ್ ಕಾರ್ಯಕ್ರಮಗಳೂ ಪ್ರಾರಂಭವಾದದ್ದು ೧೯೩೬ರಲ್ಲಿ. ಆ ವರ್ಷ ನವೆಂಬರ್ ತಿಂಗಳಲ್ಲಿ ಬಿಬಿಸಿ ಮನೋರಂಜನೆಗಾಗಿ ಕಾರ್ಯಕ್ರಮಗಳನ್ನು ಬಿತ್ತರಿಸಲು ಪ್ರಾರಂಭಿಸಿತು. ಅಮೆರಿಕದಲ್ಲಿ ಟೆಲಿವಿಷನ್ ಬಂದದ್ದು ೧೯೩೯ರಲ್ಲಿ. ಅಲ್ಲಿನ ನ್ಯಾಷನಲ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್ ನ್ಯೂಯಾರ್ಕ್ ನಗರದಲ್ಲಿ ಪ್ರೇಕ್ಷಣ ಕೇಂದ್ರವೊಂದನ್ನು ಸ್ಥಾಪಿಸಿ ವಾರ್ತೆಗಳನ್ನು ಬಿತ್ತರಿಸತೊಡಗಿತು. ಆಗ ಅದು ನ್ಯೂಯಾರ್ಕ್ ನಗರಕ್ಕಷ್ಟೇ ಸೀಮಿತವಾಗಿತ್ತು. ೧೯೪೧ರ ಹೊತ್ತಿಗೆ ಅಮೆರಿಕದಾದ್ಯಂತ ಟೆಲಿವಿಷನ್ ವ್ಯವಸ್ಥೆ ಹಬ್ಬಿತು. ಟೆಲಿವಿಷನ್ ಸಂಪರ್ಕ ಜಗದ್ವ್ಯಾಪಿಯಾಗಿ ಹರಡಿದ್ದು ಎರಡನೇ ಮಹಾಯುದ್ಧದ ನಂತರ, ಕೃತಕ ಭೂ ಉಪಗ್ರಹಗಳು ಕಕ್ಷೆಗೇರಿದ ಮೇಲೆ. ಭಾರತದಲ್ಲಿ ಟೆಲಿವಿಷನ್ ಪ್ರಾರಂಭವಾದ್ದು ೧೯೫೯ರ ದೆಹಲಿಯಲ್ಲಿ. ಆಗ ಭಾರತದಂಥ ಬಡದೇಶಕ್ಕೆ ಇದು ಬೇಕೇ ಎಂಬ ಟೀಕೆ ಇತ್ತು. ಆಹಾರಧಾನ್ಯಗಳ ಕೊರತೆ ಇದ್ದು ಅಮೆರಿಕದಿಂದ ಗೋಧಿ ಆಮದು ಮಾಡಿಕೊಳ್ಳುತ್ತಿದ್ದ ಕಾಲ ಅದು. ಹಾಗಾಗಿ 'ಹೊಟ್ಟೆಗೇ ಹಿಟ್ಟಿಲ್ಲದಾಗ ಜುಟ್ಟಿಗೆ ಮಲ್ಲಿಗೆ' ಎಂಬ ಮೂದಲಿಕೆ ಇತ್ತು, ಟೆಲಿವಿಷನ್ ಪ್ರಸಾರ ಪ್ರಾರಂಭವಾದಾಗ. ಆಕಾಶವಾಣಿಯ ಭಾಗವಾಗಿ ಪ್ರಾರಂಭವಾದ ಟೆಲಿವಿಷನ್ ಕ್ರಮಬದ್ಧವಾದ ರೀತಿಯಲ್ಲಿ ಪ್ರತಿದಿನ ಸುದ್ದಿ ಪ್ರಸಾರ, ಸಾಕ್ಷ್ಯಚಿತ್ರಗಳ ಪ್ರಸಾರ ಪ್ರಾರಂಭವಾದ್ದು ೧೯೬೫ರಲ್ಲಿ. ಆಗ ಪ್ರಸಾರ ದೆಹಲಿಗೆ ಮಾತ್ರ ಸೀಮಿತವಾಗಿತ್ತು. ೧೯೭೨ರಲ್ಲಿ ಟಿವಿ ಪ್ರಸಾರವನ್ನು ಮುಂಬಯಿ ಮತ್ತು ಅಮೃತಸರಗಳಿಗೆ ವಿಸ್ತರಿಸಲಾಯಿತು. ೧೯೭೫ರ ವೇಳೆಗೆ ಭಾರತದ ಏಳು ನಗರಗಳಲ್ಲಿ ಟೆಲಿವಿಷನ್ ಪ್ರಸಾರ ಪ್ರಾರಂಭವಾಯಿತು. ೧೯೭೬ರಲ್ಲಿ ಆಕಾಶವಾಣಿಯಿಂದ ಟೆಲಿವಿಷನ್ ಪ್ರಸಾರ ಬೇರ್ಪಟ್ಟು ಪ್ರತ್ಯೇಕಗೊಂಡಿತು. ೧೯೮೨ರಲ್ಲಿ ಕಪ್ಪು–ಬಿಳುಪು ಚಿತ್ರ ಪ್ರಸಾರ ಕೊನೆಗೊಂಡು ಬಣ್ಣದ ಚಿತ್ರಗಳ ಪ್ರಸಾರ ಪ್ರಾರಂಭಗೊಂಡಿತು. ಅದೇ ವರ್ಷ ರಾಷ್ಟ್ರೀಯ ಪ್ರಸಾರವೂ ಶುರುವಾಯಿತು.

ಆಗ ಇದ್ದದ್ದು ರಾಷ್ಟ್ರೀಯ ಚಾನಲ್ ಒಂದೇ. ಅದು ಸರಕಾರದ ಒಡೆತನದಲ್ಲಿದ್ದ ದೂರದರ್ಶನ ಮಾತ್ರ. ನಿಗದಿತ ಅವಧಿಗಳಲ್ಲಿ ಮಾತ್ರ ಕಾರ್ಯಕ್ರಮಗಳೂ ಪ್ರಸಾರವಾಗುತ್ತಿದ್ದವು. ಎರಡನೇ ಚಾನೆಲ್ ಡಿಡಿ ಮೆಟ್ರೋ ಬಂದದ್ದು ಕೂಡ ೧೯೮೦ರ ದಶಕದಲ್ಲೇ. ನಿಗದಿತ ಅವಧಿಗಳಲ್ಲಿ ಮಾತ್ರ ಕಾರ್ಯಕ್ರಮಗಳು ಪ್ರಸಾರವಾಗುತ್ತಿದ್ದವು. ಸೀರಿಯಲ್ಲುಗಳು, ಅಂದರೆ ಧಾರಾವಾಹಿಗಳು ಪ್ರಸಾರಗೊಂಡದ್ದೂ ಆಗಲೆ. ರಾಮಾಯಣ, ಮಹಾಭಾರತ ಕಥಾನಕಗಳು ಪ್ರಸಾರಗೊಂಡು ಜನಪ್ರಿಯತೆ ಗಳಿಸಿದ್ದು ಕೂಡ ಎಂಬತ್ತರ ದಶಕದಲ್ಲೆ. ದೂರದರ್ಶನ ಪ್ರಸಾರ ಮಾಡುತ್ತಿದ್ದ ಜನಪ್ರಿಯ ಧಾರಾವಾಹಿಗಳು ಹಮ್ ಲೋಗ್, ವಾಗ್ಲೆ ಕಿ ದುನಿಯ, ಬುನಿಯಾದ್, ಯೇ ಜೊ ಹೈ ಜಿಂದಗಿ, ಭಾರತ್ ಏಕ್ ಖೋಜ್, ಸ್ವೋರ್ಡ್ ಆಫ್ ಟೀಪು ಸುಲ್ತಾನ್, ಚಂದ್ರಕಾಂತಾ, ಚಾಣಕ್ಯ ಮೊದಲಾದವು. ಚಿತ್ರಹಾರ್, ರಂಗೋಲಿ ಮೊದಲಾದ ಹಿಂದಿ ಚಲನಚಿತ್ರ ಗೀತೆಗಳ ಪ್ರಸಾರ ಕಾರ್ಯಕ್ರಮ ಪ್ರೇಕ್ಷಕರನ್ನು ಹಿಡಿದಿರಿಸಿತ್ತು. ಪತ್ತೇದಾರಿ ಧಾರಾವಾಹಿಗಳಾದ ಕರಮ್‌ಚಂದ್, ಬ್ಯೋಮ್‌ಕೇಶ್ ಭಕ್ಷಿ, ಜನಪ್ರಿಯ ಕಾರ್ಯಕ್ರಮಗಳಾಗಿದ್ದುವು. ಮಕ್ಕಳ ಮನೋರಂಜನೆಗಾಗಿ ಪ್ರಸಾರಗೊಂಡ ಧಾರಾವಾಹಿಗಳು ದಾದಾ ದಾದೀಕಿ ಕಹಾನಿಯ, ಮಾಲ್ಗುಡಿ ಡೇಸ್, ತೆನಾಲಿರಾಮ ಮೊದಲಾದವು. ಕ್ರಿಕೆಟ್ ಮ್ಯಾಚ್‌ಗಳ ನೇರಪ್ರಸಾರ, ದೆಹಲಿಯಲ್ಲಿ ನಡೆದ ಏಶಿಯನ್ ಗೇಮ್ಸ್ ಪ್ರಸಾರವಾದದ್ದು ೧೯೮೨ರಲ್ಲಿ.

೧೯೯೦ರ ದಶಕದಲ್ಲಿ ಪ್ರಾರಂಭವಾದ ಉದಾರೀಕರಣ, ಜಾಗತೀಕರಣ ನೀತಿಗಳಿಂದ ಬಂದದ್ದು ಖಾಸಗೀ ಚಾನೆಲ್‌ಗಳಿಗೆ ಪರವಾನಗಿ. ಖಾಸಗಿ ಹಾಗೂ ವಿದೇಶೀ ಪ್ರಸಾರಗಳಿಗೆ ಇದರಿಂದ ಮುಕ್ತ ಅವಕಾಶ ದೊರೆಯಿತು. ಸಿ.ಎನ್.ಎನ್., ಸ್ಟಾರ್ ಟಿವಿ, ಝೀ ಟಿವಿ, ಈ ಟಿವಿ, ಸನ್ ಟಿವಿ ಮೊದಲಾದವು ಬಂದದ್ದು ಆಗಲೆ. ೧೯೬೨ರಲ್ಲಿ ೪೧ ಟೆಲಿವಿಷನ್ ಸೆಟ್‌ಗಳು, ಒಂದೇ ಒಂದು ಚಾನೆಲ್ ಮಾತ್ರ ಇದ್ದ ಭಾರತದಲ್ಲಿ ೧೯೯೫ರ ವೇಳೆಗೆ ಎಪ್ಪತ್ತು ಮಿಲಿಯ ಮನೆಗಳನ್ನು ಅಲಂಕರಿಸಿತ್ತು. ಟಿವಿ ವೀಕ್ಷಕರ ಸಂಖ್ಯೆ ೪೦೦ ಮಿಲಿಯ ದಾಟಿತ್ತು ಮತ್ತು ಚಾನೆಲ್‌ಗಳ ಸಂಖ್ಯೆ ೧೦೦ ಚಾನೆಲುಗಳನ್ನು ಮುಟ್ಟಿತ್ತು. ಕೇಬಲ್ ಟಿವಿ, ಡಿಟಿಎಚ್, ಐಪಿ ಟಿವಿ ಮುಂತಾದ ವ್ಯವಸ್ಥೆಗಳು ಬಂದದ್ದು ಕೂಡ ಆಗಲೆ. ದೂರದರ್ಶನದ ಎಲ್ಲ ಚಾನೆಲ್‌ಗಳ ವ್ಯವಸ್ಥೆಯನ್ನು ನೋಡಿಕೊಳ್ಳಲು ವಾರ್ತಾ ಇಲಾಖೆಯ ಅಡಿಯಲ್ಲಿ ಸ್ಥಾಪನೆಗೊಂಡದ್ದು ಪ್ರಸಾರ ಭಾರತಿ ಕಾರ್ಪೊರೇಷನ್. ಎಲ್ಲ ಕೇಬಲ್ ನಿರ್ವಾಹಕರು ಕಡ್ಡಾಯವಾಗಿ ಉಚಿತವಾಗಿ ದೂರದರ್ಶನ ಚಾನೆಲ್‌ಗಳನ್ನು ಪ್ರಸಾರ ಮಾಡಬೇಕೆಂಬ ನಿಯಮವಿದೆ. ೨೦೧೫ರ ವೇಳೆಗೆ ೧೬೭ ಮಿಲಿಯ ಮನೆಗಳಲ್ಲಿ ಟೆಲಿವಿಷನ್ ಸೆಟ್‌ಗಳು ಇದ್ದವು ಎಂದು ಒಂದು ಅಂದಾಜು. ಹಾಗೆಯೇ ದೇಶದಲ್ಲಿ ೮೨೩ ಟಿವಿ ಚಾನೆಲ್‌ಗಳು ಬೇರೆ ಬೇರೆ ಭಾಷೆಗಳಲ್ಲಿ ಪ್ರಸಾರ ಮಾಡುತ್ತಿವೆ. ದಿನದ ಇಪ್ಪತ್ತನಾಲ್ಕು ಗಂಟೆಗಳು ಕೂಡ ಈಗ ಟಿವಿ ಚಾನೆಲ್‌ಗಳು ಚಾಲ್ತಿಯಲ್ಲಿರುತ್ತವೆ. ಧಾರಾವಾಹಿಗಳು, ಚಲನಚಿತ್ರಗಳು, ನಾನಾ ಬಗೆಯ ಕಾರ್ಯಕ್ರಮಗಳು ಸುದ್ದಿಗಳು ಪ್ರಸಾರಗೊಳ್ಳುತ್ತವೆ. ಒಂದೊಂದು ಟಿವಿ ವಾಹಿನಿಯೂ ನಾಲ್ಕಾರು ಚಾನೆಲ್‌ಗಳನ್ನು ಹೊಂದಿರುತ್ತವೆ. ಸುದ್ದಿ ಮಾಧ್ಯಮಗಳು, ಪೂರ್ತಿ ಚಲನಚಿತ್ರಗಳನ್ನು, ಚಿತ್ರಗೀತೆಗಳನ್ನು, ಧಾರಾವಾಹಿಗಳನ್ನು ಪ್ರಸಾರ ಮಾಡುವ ಚಾನೆಲ್‌ಗಳೂ ಇವೆ.

***(ಮುಂದುವರಿಯುವುದು)***


ಸಿ. **ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು – ೫೬೦ ೦೮೫

# ಪತ್ರ ಬರೆಹದ ಕಾಲ ಮುಗಿದಿಲ್ಲ!



*ಪತ್ರಗಳ ಸಂಗ್ರಹವನ್ನು ಆತ್ಮ ಚರಿತ್ರೆಯಂತೆಯೂ ಹಾಗೂ ಒಂದು ಕಾಲಘಟ್ಟದ ವೃತ್ತಾಂತವಾಗಿಯೂ ಓದಬಹುದು. ಸಾಮಾನ್ಯವಾಗಿ ಪತ್ರಗಳು ಎಷ್ಟೇ ಜಾಣ್ಮೆಯಿಂದ ಪತ್ರ ಬರೆಯುವವನ ಒಡಲಾಳವನ್ನು ಬಚ್ಚಿಡದಿದ್ದರೂ ಅವನ ಆತ್ಮಕತೆಯನ್ನು ಅನುರಣಿಸುತ್ತವೆ. ಈ ದೃಷ್ಟಿಯಿಂದ ಪತ್ರಾವಲಿಯಲ್ಲಿ ಅಲ್ಲಿ-ಇಲ್ಲಿ ಬರುವ ತುಂಡು ಘಟನೆಗಳನ್ನು ಪುನರ್‌ಜೋಡಿಸಿ ಓದಿದಾಗ ಡೋಣೂರ ಹಾಗೂ ಸಜ್ಜನರವರ, ಕಡೇಪಕ್ಷ ಅವರಿಬ್ಬರ ಬೌದ್ಧಿಕ ಆತ್ಮಕಥನವನ್ನಾದರೂ ನಿರೂಪಿಸಬಹುದು.*

**ಪ**ತ್ರಾವಲಿ (೨೦೦೭) ಯು ಜಿ. ಬಿ. ಸಜ್ಜನರು ಬಸವರಾಜ ಡೋಣೂರರಿಗೆ ೧೯೯೭ರಿಂದ ೨೦೦೭ರ ನಡುವಣ ಅವಧಿಯಲ್ಲಿ ಬರೆದ ಪತ್ರಗಳ ಸಂಗ್ರಹ. ಬಸವರಾಜ ಡೋಣೂರ ಅವರು ಮಧ್ಯ ಪ್ರದೇಶದ ಆದಿವಾಸಿ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದಲ್ಲಿ ಈಗ ಪ್ರಾಧ್ಯಾಪಕರಾಗಿದ್ದಾರೆ. ಪ್ರಿನ್ಸಿಪಲ್ ಜಿ. ಬಿ. ಸಜ್ಜನರು ತಮಗೆ ಇಂಗ್ಲಿಷ್ ಭಾಷೆಯ ಮೇಲಿರುವ ಹಿಡಿತದಿಂದಲೇ ಉತ್ತರ ಕರ್ನಾಟಕದಲ್ಲಿ ಚಿರಪರಿಚಿತರು. ಅವರು ನಾಲ್ಕು ದಶಕಗಳವರೆಗೆ ವಿವಿಧ ವಿದ್ಯಾಸಂಸ್ಥೆಗಳಲ್ಲಿ ಇಂಗ್ಲಿಷ್ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಗುರು-ಶಿಷ್ಯರ ನಡುವೆ ಸುಮಾರು ಒಂದು ದಶಕದವರೆಗೆ ನಡೆದ ಈ ಪತ್ರವ್ಯವಹಾರ, ಈಗ ನಮಗೆ ಪುಸ್ತಕರೂಪದಲ್ಲಿ ಓದಲು ದೊರಕಿದೆ. ಈ ಪುಸ್ತಕವನ್ನು ಪರಿಚಯಿಸುತ್ತ 'ಪತ್ರಸಂಸ್ಕೃತಿಯ' ಕುರಿತು ಜಿಜ್ಞಾಸೆ ನಡೆಸುವುದು ಈ ಲೇಖನದ ಮುಖ್ಯ ಉದ್ದೇಶ.

ಈ ಪತ್ರ ವ್ಯವಹಾರಗಳ ಕಾಲಘಟ್ಟ ಒಂದು ದಶಕದಷ್ಟಾಗಿದ್ದು, ಅವು ಸಾಹಿತ್ಯ, ಸಂಸ್ಕೃತಿ, ಭಾಷಾ ಕಲಿಕೆ, ಅದರಲ್ಲಿಯೂ ಇಂಗ್ಲಿಷ್ ಭಾಷಾ ಕಲಿಕೆ, ಸಾಹಿತಿಗಳು, ಅವರ ಕ್ರಿಯೆ ಮತ್ತು ಕೃತಿಗಳು, ಶೈಕ್ಷಣಿಕ ವಾತಾವರಣ ಮುಂತಾದ ವೈಚಾರಿಕ ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುತ್ತವೆ. ಸುಮಾರು ಮುನ್ನೂರಕ್ಕೂ ಮೀರಿದ ಈ ಪತ್ರಗಳಿಗೆ ಒಂದು 'ಕಾಲ'ದ ಜೊತೆಗೆ 'ದೇಶ'ದ ಆಯಾಮವಿದೆ. ಪುಸ್ತಕದ ಒಂದು ಮಗ್ಗಲಿನಲ್ಲಿ ಧಾರವಾಡದ ಕಲ್ಯಾಣ ನಗರದಿಂದ ಬರೆದ ಡೋಣೂರ ಅವರ ಪತ್ರಗಳು ಅವರ ಮಹತ್ವಾಕಾಂಕ್ಷೆ, ಲೇಖಕರಾಗಬೇಕೆಂಬ ಹಂಬಲ, ಅದಕ್ಕೆ ಪೂರಕವಾದ ಓದು-ಬರಹ, ಭಾಷಾ ತಯಾರಿಕೆಯ ಪ್ರಯತ್ನ ಮತ್ತು ಆ ವಯಸ್ಸಿಗೆ ಅನಿವಾರ್ಯವಾಗಿ ಇರಲೇಬೇಕಾದ ಸ್ವಲ್ಪ ಅಪರಿಪಕ್ವತೆಯ ಜೊತೆಗೆ ಅವರ ಶ್ರದ್ಧೆ, ಶ್ರಮ ಮತ್ತು ಸಾಹಿತ್ಯ ಪ್ರೇಮವನ್ನು ತೆರೆದಿಡುತ್ತವೆ. ಪುಸ್ತಕದ ಇನ್ನೊಂದು ಮಗ್ಗಲಿನಲ್ಲಿ ಸಜ್ಜನರ ಪತ್ರಗಳು ಅನುಭವಜನ್ಯವಾಗಿದ್ದು, ಸೂಕ್ಷ್ಮ ಒಳನೋಟಗಳು ಮತ್ತು ಸಂಯಮಶೀಲತೆಯನ್ನು ಹೊರಹೊಮ್ಮಿಸುತ್ತ, ಆ ಕಡೆಯಿಂದ ಬಂದ ಚೂಪು ಬಾಣಗಳನ್ನು ಪ್ರೀತಿಯಿಂದ ಸ್ವೀಕರಿಸಿ ಎಜುಕೇಟ್ ಮಾಡುವ ಶಕ್ತಿಯನ್ನು ಹೊಂದಿವೆ. ಡೋಣೂರ ಅವರ ಕೆಲವು ಪತ್ರಗಳು ಸಹ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತೆ ಕೆಲವು ಬೌದ್ಧಿಕ ಒಳನೋಟಗಳನ್ನು ಒದಗಿಸುತ್ತವೆ.

ಪತ್ರ ಬರೆಯುವ ಕಾಲ ಇನ್ನೇನು ಮುಗಿಯಿತು ಎಂದು ನಾವು ಅಂದುಕೊಂಡಿರುವಾಗ ಈ ಪತ್ರಗುಚ್ಛವನ್ನು ನಾವೇಕೆ ಓದಬೇಕು, ಒಂದುವೇಳೆ ಓದುವುದಾದರೆ ಅದನ್ನು ಹೇಗೆ ಓದಬೇಕು, ಎನ್ನುವ ಪ್ರಶ್ನೆಗಳು ಸಹಜವಾಗಿ ಉದ್ಭವಿಸುತ್ತವೆ. ಮೊದಲನೆಯದಾಗಿ, ಪತ್ರ ಬರಹದ ಕಾಲ ಮುಗಿದಿಲ್ಲ, ಬಹುಶಃ ಮುಗಿಯುವ ಕಾಲ ಬರುವುದೇ ಇಲ್ಲ ಅಂತ ಅನಿಸುತ್ತದೆ. ಪತ್ರ ಬರವಣಿಗೆ ಇನ್ನೂ ಹೆಚ್ಚಾಗಿದೆಯೇ ಹೊರತು ಕಡಿಮೆಯಾಗಿಲ್ಲ ಎನ್ನುವುದೇ ನನ್ನ ವಾದ. ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪತ್ರದ ರೂಪ, ಅದನ್ನು ಬರೆಯುವ ಕ್ರಮ, ಶೈಲಿ, ಭಾಷೆ, ಸಂದರ್ಭ ಮತ್ತು ಪತ್ರ ಸಂವಹನದ ಮಾಧ್ಯಮಗಳು ಮಾರ್ಪಾಡು ಗೊಂಡಿವೆಯೇ ಹೊರತು, ಪತ್ರ ಬರೆಯುವ ಸಂಸ್ಕೃತಿ ಅವನತಿ ಹೊಂದಿಲ್ಲ. ಅಂಚೆ ಕಾಗದದ ಬದಲು ಈ-ಮೇಲ್, ಮೊಬೈಲ್ ಸಂದೇಶ ಮತ್ತು ಇನ್ನಿತರ ವಿದ್ಯುನ್ಮಾನ ಸಂವಹನಗಳಲ್ಲಿ ಪತ್ರ ಬರೆಯುವ ಚಟುವಟಿಕೆ ಮುಂದುವರಿದಿದೆ.

**ಎನ್. ಎಸ್. ಗುಂಡೂರ**

ಪತ್ರಗಳನ್ನು ಬರೆಯುವುದು ಕೇವಲ ಒಂದು ಕಲೆಯಲ್ಲ, ಅದೊಂದು ಬೌದ್ಧಿಕ ಸದ್ಗುಣ. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಪತ್ರ ಬರೆಯುವುದನ್ನು ಕಲಿಸುವುದು ಶೈಕ್ಷಣಿಕ ಕ್ಷೇತ್ರದ ಅವಿಭಾಜ್ಯ ಅಂಗವಾಗಿ ಬೆಳೆದುಬಂದಿದೆ. ಅದು ಪತ್ರ ಬರೆಯುವ ಚಟುವಟಿಕೆಯನ್ನು ವ್ಯಕ್ತಿತ್ವ ವಿಕಸನದ ಒಂದು ಸೂತ್ರವನ್ನಾಗಿ ನೋಡುತ್ತಾ ಬಂದಿದೆ. ನಾವು ನಮ್ಮ ವಿಚಾರಶಕ್ತಿ, ಆಲೋಚನಾ ಕ್ರಮ, ತರ್ಕ, ನಿರೂಪಣಾ ಸಾಮರ್ಥ್ಯ, ಭಾಷೆಯ ಮೇಲೆ ಸಾಧಿಸಬೇಕಾದ ಹಿಡಿತ ಮುಂತಾದ ಬೌದ್ಧಿಕ ಕೌಶಲ್ಯಗಳನ್ನು ಪತ್ರಗಳನ್ನು ಓದುವ ಮತ್ತು ಬರೆಯುವ ಚಟುವಟಿಕೆಯ ಮೂಲಕ ವೃದ್ಧಿಸಿಕೊಳ್ಳುತ್ತೇವೆ. ಪತ್ರ ವ್ಯವಹಾರ ಮಾಡುವುದು ಒಬ್ಬ ವಿದ್ಯಾವಂತನ ಚಟುವಟಿಕೆಗಳಲ್ಲಿ ಒಂದು. ಪತ್ರ ಓದುವುದು ಮತ್ತು ಪತ್ರ ಬರೆಯುವುದು ಶೈಕ್ಷಣಿಕ ಕಲಿಕೆಯ ಒಂದು ಅನುಭವ. ವಾಕ್ಯರಚನೆಗಳಿಂದ ಹಿಡಿದು ಆಲೋಚನೆ ಮಾಡುವ ಕ್ರಮ ಮತ್ತು ನಿರೂಪಣಾ ಶಕ್ತಿ ಬೆಳೆಸುವ ತಾಣವಾಗಿ ಪತ್ರ ಸಂಸ್ಕೃತಿಯನ್ನು ನೋಡಬಹುದು. ಹದಿನೆಂಟನೇ ಶತಮಾನದ ಇಂಗ್ಲಿಷ್ ಸಾಹಿತ್ಯದಲ್ಲಿ 'ಲೆಟರ್ ರೈಟರ್ಸ್' ಎನ್ನುವ ಸಾಹಿತಿಗಳ ವರ್ಗೀಕರಣವನ್ನು ನೋಡುತ್ತೇವೆ.

ಪತ್ರ ಬರೆಯುವುದು ಒಂದು ಕಲೆಯಾಗಿ ಸಾಹಿತ್ಯಿಕ ಮೌಲ್ಯವನ್ನು ಹೊಂದಿದ್ದರೆ (ಶೈಲಿಯ ದೃಷ್ಟಿಯಿಂದ ಒಳ್ಳೆಯ ಪತ್ರವನ್ನು ಬರೆಯುವ ರೀತಿ), ಸಾಹಿತ್ಯ ಎಂಬ ಸಂಸ್ಥೆಯ ಜೊತೆ ಪತ್ರ ಸಂಸ್ಕೃತಿಯ ಸಂಬಂಧ ಇನ್ನೂ ಮಹತ್ವದ್ದಾಗಿದೆ. ಇಂಗ್ಲಿಷ್ ಕಾದಂಬರಿ ಹುಟ್ಟಿದ್ದು ಪತ್ರ ಬರೆಯುವ ಕಲೆಯ ಮೂಲಕವೇ. ಇಂಗ್ಲಿಷ್ ಸಾಹಿತ್ಯದಲ್ಲಿ ಮೊದಲ ಕಾದಂಬರಿ ಎಂದು ಕರೆಯಲ್ಪಡುವ ರಿಚರ್ಡ್‌ಸನ್‌ನ ಪಮೇಲಾ ಕಾದಂಬರಿಯು ಪತ್ರಗಳ ನಿರೂಪಣೆಯ ಚೌಕಟ್ಟನ್ನು ಹೊಂದಿದ್ದು, 'ಎಪಿಸ್ಟಲರಿ ನಾವೆಲ್' ಎಂಬ ಪ್ರಕಾರ ಹುಟ್ಟಿಕೊಂಡು, ಪಾಶ್ಚಾತ್ಯ ಕಾದಂಬರಿಯ 'ವಾಸ್ತವತೆ' ಬೆಳೆಯಲು ಒಂದು ಶಕ್ತಿಯುತ ತಂತ್ರವಾಗಿ ಹೊರಹೊಮ್ಮಿತು. ಅಷ್ಟೇ ಅಲ್ಲದೆ, ಶೇಕ್ಸ್‌ಪಿಯರ್‌ನಂತಹ ನಾಟಕಕಾರನು ರಂಗವೇದಿಕೆಯ ಮೇಲೆ ಪ್ರಸ್ತುತಪಡಿಸಲು ಕಠಿಣವಾಗುವ ದೃಶ್ಯಗಳನ್ನು ಪತ್ರಗಳ ನಿರೂಪಣೆ ಮಾಡುವ ತಂತ್ರವನ್ನು ಬಳಸಿದ್ದು ನಮಗೆಲ್ಲಾ ತಿಳಿದಿದೆ. ರಂಗಮಂದಿರದ ಮೇಲೆ ತೋರಿಸಲಾಗದ ದೃಶ್ಯಗಳನ್ನು ಪತ್ರದ ನಿರೂಪಣೆಯ ಮೂಲಕ ತೋರಿಸಿದ ಉದಾಹರಣೆಯನ್ನು ನಾವು ಅವನ ಮರ್ಚೆಂಟ್ ಆಫ್ ವೆನಿಸ್‌ನಂತಹ ನಾಟಕದಲ್ಲಿ ಕಾಣುತ್ತೇವೆ. ಆಂಟೋನಿಯಾನ ಹಡಗುಗಳು ಮುಳುಗಿಹೋದ ಘಟನೆಯ ನಿರೂಪಣೆಯಾಗುವುದು ಪತ್ರದ ಮೂಲಕವೇ. ಹೀಗೆ ಒಂದು ಸಾಹಿತ್ಯ ಪ್ರಕಾರವಾಗಿ, ಇತರೆ ಸಾಹಿತ್ಯ ಪ್ರಕಾರಗಳನ್ನು ರೂಪಿಸುವ ತಂತ್ರವಾಗಿ ಪತ್ರ ಬರೆಯುವದೂ ಕೂಡ ಒಂದು ಮಹತ್ವದ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಸಂಸ್ಥೆಯಾಗಿ ಬೆಳೆದಿದೆ. ಜಗತ್ತಿನ ಗದ್ಯ ಇತಿಹಾಸವನ್ನು ಬರೆಯುವುದಾದರೆ ಪತ್ರ ಬರವಣಿಗೆ ವಿವಿಧ ಭಾಷೆಗಳ ಗದ್ಯಗಳನ್ನು ರೂಪಿಸಿರುವುದನ್ನು ಅಲ್ಲಗಳೆಯುವಂತಿಲ್ಲ.

ಪತ್ರಗಳ ಸಂಗ್ರಹವನ್ನು ಆತ್ಮ ಚರಿತ್ರೆಯಂತೆಯೂ ಹಾಗೂ ಒಂದು ಕಾಲಘಟ್ಟದ ವೃತ್ತಾಂತವಾಗಿಯೂ ಓದಬಹುದು. ಸಾಮಾನ್ಯವಾಗಿ ಪತ್ರಗಳು ಎಷ್ಟೇ

ಜಾಣ್ಮೆಯಿಂದ ಪತ್ರ ಬರೆಯುವವನ ಒಡಲಾಳವನ್ನು ಬಿಚ್ಚಿಡದಿದ್ದರೂ ಅವನ ಆತ್ಮಕತೆಯನ್ನು ಅನುರಣಿಸುತ್ತವೆ. ಈ ದೃಷ್ಟಿಯಿಂದ ಪತ್ರಾವಲಿಯಲ್ಲಿ ಅಲ್ಲಿ-ಇಲ್ಲಿ ಬರುವ ತುಂಡು ಘಟನೆಗಳನ್ನು ಪುನರ್ ಜೋಡಿಸಿ ಓದಿದಾಗ ಡೋಣೂರ ಹಾಗೂ ಸಜ್ಜನರವರ, ಕಡೇಪಕ್ಷ ಅವರಿಬ್ಬರ ಬೌದ್ಧಿಕ ಆತ್ಮಕಥನವನ್ನಾದರೂ ನಿರೂಪಿಸಬಹುದು.

ಮೊದಲನೆಯದಾಗಿ, ಈ ಪತ್ರಗಳು ಸಜ್ಜನರದು ಪತ್ರಪ್ರೇಮದ ವ್ಯಕ್ತಿತ್ವ ಎನ್ನುವುದನ್ನು ಕಟ್ಟಿಕೊಡುತ್ತವೆ. ಸಜ್ಜನರು ತಮ್ಮ ಮುನ್ನುಡಿಯಲ್ಲಿ ದಾಖಲಿಸಿದಂತೆ, ಅವರು ಪುಸ್ತಕ ಮತ್ತು ಲೇಖನಗಳಿಗಿಂತ ಹೆಚ್ಚು ಪತ್ರಗಳನ್ನು ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಬರೆದಿದ್ದು ನಮಗೆ ತಿಳಿಯುತ್ತದೆ. ಇವರ ಪತ್ರಗಳಲ್ಲಿ ಪತ್ರ ಬರವಣಿಗೆಯ ಕುರಿತು ಕೆಲವು ಉಲ್ಲೇಖಗಳನ್ನು ನಾವು ಕಾಣುತ್ತೇವೆ. ಉದಾಹರಣೆಗೆ, ತಮ್ಮ ಒಂದು ಪತ್ರದಲ್ಲಿ ಇವರು ಉಲ್ಲೇಖಿಸುವಂತೆ ಎರಡೇ ಸಾಲುಗಳನ್ನು ಬರೆದು ಪತ್ರ ಮುಗಿಸುವವರಲ್ಲಿ ಇವರು ವಿಚಾರ ದರಿದ್ರತನವನ್ನು, ಭಾವ ದರಿದ್ರತನವನ್ನು, ಶಬ್ದ ದರಿದ್ರತನವನ್ನು ಕಾಣುತ್ತಾರೆ. ಈ ಪತ್ರ ಬರೆಯುವ ಗೀಳನ್ನು ತಮ್ಮ ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಸ್ವಾಸ್ಥ್ಯವನ್ನು ಉಳಿಸಿಕೊಳ್ಳುವ ಒಂದು ಚಟುವಟಿಕೆಯನ್ನಾಗಿ ನೋಡಿದ ಸಜ್ಜನರು ನಮ್ಮ ಮುಂದೆ 'ಪತ್ರ-ಲೇಖಕ'ರಾಗಿ ನಿಲ್ಲುತ್ತಾರೆ.




ಸಜ್ಜನರ ಪತ್ರಗಳ ನಿಕಟ ಓದಿನಿಂದ ಅವರ ಜೀವನ ದರ್ಶನ, ಸಾಹಿತ್ಯ ಸಂಸ್ಕೃತಿ, ಅದರಲ್ಲಿಯೂ ವಿಶೇಷವಾಗಿ ಬರವಣಿಗೆ ಮತ್ತು ಭಾಷಾ ಕಲಿಕೆಯ ಬಗ್ಗೆ ಇವರಿಗಿರುವ ಆಳವಾದ ಒಳನೋಟಗಳು ಓದುಗರ ಅನುಭವಕ್ಕೆ ಬರುತ್ತವೆ. ಜೀವನ ದರ್ಶನಕ್ಕೆ ಸಂಬಂಧಪಟ್ಟ ಹೊಳಹುಗಳಿಗೆ ಉದಾಹರಿಸುವುದಾದರೆ : "ಮಾಡುವವನು ಬೇಡುವವನಿಗಿಂತ ಶುದ್ಧವಾಗಿರಬೇಕು", "ವಚನ ನೀಡುವ ಬೆಳಕಿನಲ್ಲಿ ನಮ್ಮ ಬದುಕನ್ನು ನಿಭಾಯಿಸಬಹುದು", "ಬದುಕೇ ಸಂಕೀರ್ಣ. ನಂಬಿ ಕೆಡುವುದುಂಟು, ನಂಬಿ ಬದುಕುವುದೂ ಉಂಟು", "ಬಸವಣ್ಣನವರು ಏನೆಲ್ಲಾ ಬಿಟ್ಟರು. ಬದುಕಿನಲ್ಲಿ ಬಳಸಿಯೂ ಬ್ರಹ್ಮಚಾರಿಯಾಗಿದ್ದರು", "ಯಾರಾರಿಗೆ ಎಂತೆಂತಹ ಅನುಭವಗಳು ಆಗಿವೆ ಎಂಬುದನ್ನು ಪ್ರತಿಯೊಬ್ಬರೂ ತಿಳಿದಿರಬೇಕು", "ದುಡಿಯುವ ಶಕ್ತಿ ನಿಂತ ದಿನ 'ಮನೆಗೆ ಹೋಗಪ್ಪಾ' ಎಂದು ಧಣಿ ಹೇಳುತ್ತಿದ್ದ ದೇಶ ಇದು" ಮುಂತಾದವುಗಳು. ಸಾಹಿತ್ಯಕ್ಕೆ ಹಾಗೂ ಭಾಷೆಗೆ ಸಂಬಂಧಪಟ್ಟಂತೆ ಅವರ ಎಷ್ಟೋ ಒಳನೋಟಗಳನ್ನು ನಾವಿಲ್ಲಿ ಕಾಣಬಹುದು.

ಈ ಗುರು-ಶಿಷ್ಯರ ಪತ್ರ ಬರವಣಿಗೆಯಲ್ಲಿ ಡೋಣೂರ ಅವರ ಕೆಲವು ಪತ್ರಗಳು ಅವರ ಬೌದ್ಧಿಕ ಗೊಂದಲ, ಬೆಳವಣಿಗೆ, ಸಂಘರ್ಷ, ಕಷ್ಟಪಟ್ಟು ಕೆಲಸ ಮಾಡುವ ಗುಣ ಮುಂತಾದವುಗಳನ್ನು ಬಿಚ್ಚಿಡುತ್ತವೆ. ಹೆಚ್ಚಿನ ಪತ್ರಗಳು ಅವರ ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಜೀವನದಲ್ಲಿ ಬರುವ ಅಸ್ತಿತ್ವವಾದಿ ಪ್ರಶ್ನೆಗಳನ್ನು ಪರಿಹರಿಸಿಕೊಳ್ಳಲು ಬರೆದವು. ಡೋಣೂರ ಅವರ ಬೌದ್ಧಿಕ ಬೆಳವಣಿಗೆಯ ನಕ್ಷೆಯನ್ನು ಮೂಡಿಸುವ ಈ ಪತ್ರಗಳು, ಅವರು ದೊಡ್ಡ ನಾಟಕಕಾರನಾಗುವ ಹೆಬ್ಬಯಕೆ, ಧಾರಾವಾಹಿಗಳಲ್ಲಿ ಅಭಿನಯಿಸುವ ಆಸೆ, ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಗಳ ಮೇಲೆ ಹಿಡಿತ ಸಾಧಿಸಬೇಕೆಂಬ ಹಠ, ಉತ್ತಮ ಕತೆಗಳನ್ನು ಹೇಗೆ ಬರೆಯಬೇಕೆಂಬ ಕಲಿಕೆಯ ಹಂಬಲ, ಎಲ್ಲವೂ ಅವರು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲೆತ್ನಿಸಿದ ಬಗೆಯನ್ನು ನಿರೂಪಿಸುತ್ತವೆ. ಈ ಪತ್ರ ಸಂವಹನದಲ್ಲಿ ಡೋಣೂರ ಅವರು ಕಲಿಯುವವ ರಾಗಿದ್ದರೂ, ಇವರ ಕೆಲವು ಪತ್ರಗಳನ್ನು ಓದಿದಾಗ ಸಜ್ಜನರಷ್ಟೇ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತಹ ಆಳವಾದ ಒಳನೋಟಗಳನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಡೋಣೂರರ ಪತ್ರಗಳು ಇವರ ಬೌದ್ಧಿಕ ಶ್ರಮ, ಸಂಘರ್ಷದ ಬದುಕು, ತಾತ್ವಿಕ ಬದ್ಧತೆ, ಉತ್ತಮ ಬರವಣಿಗೆಯಲ್ಲಿ ತೊಡಗಿಕೊಳ್ಳಬೇಕೆನ್ನುವ ಹೆಬ್ಬಯಕೆ ಯನ್ನು ತೋರಿಸುತ್ತವೆ. ಆ ಕಾಲದ ಶಿಕ್ಷಕನಿಗೆ ಧಾರವಾಡದಲ್ಲಿ ಇಂತಹ ಒಂದು ಹಂಬಲವಿದ್ದದ್ದು ಅಲ್ಲಿಯ ವೈಚಾರಿಕ ಪರಂಪರೆಗೆ ಸಮಾಧಾನದ ಸಂಗತಿಯೇ ಸರಿ.

ಬಿಡಿ-ಬಿಡಿಯಾದ ಪತ್ರಗಳನ್ನು ಒಟ್ಟಾರೆಯಾಗಿ ಓದುವುದು ಹೇಗೆ ? ಅವುಗಳ ಈ ಒಟ್ಟಾರೆತೆಯಲ್ಲಿ ಇರುವ ಮಹತ್ವವಾದರೂ ಏನು ? ಪತ್ರಗಳನ್ನು ಬಿಡಿಬಿಡಿಯಾಗಿ ಖಾಸಗಿ ಸಂವಹನದ ದೃಷ್ಟಿಯಿಂದ ಓದುವ ಅನುಭವವೇ ಬೇರೆ. ಅವುಗಳನ್ನು ಒಂದು ಕಾಲಘಟ್ಟ ಕಳೆದ ನಂತರ ಹಿಂತಿರುಗಿ ಒಟ್ಟಾರೆಯಾಗಿ ಓದುವ ಅನುಭವವೂ ಬೇರೆಯೇ ಆಗಿರುತ್ತದೆ. ಬಿಡಿ ಪತ್ರ ಒಂದು ಕಲೆಯಾದರೆ ಪತ್ರಗಳ ಸಂಗ್ರಹ ಒಂದು ಕಲಾಕೃತಿ ಇದ್ದಂತೆ. ಬಿಡಿ ಪತ್ರಗಳಿಗೆ ಆ ಕಾಲದ ತುರ್ತು, ಮಾತಿನ ಚಕಮಕಿ, ಸಂಘರ್ಷ, ರಷ್ಯಾದ ವಿಮರ್ಶಕ-ಚಿಂತಕ ಮಿಖಾಯಿಲ್ ಭಕ್ತಿನ್ ಕರೆಯುವ 'ಡೈಲಾಜಿಕ್' ಲಕ್ಷಣಗಳು ಪ್ರಧಾನವಾದರೆ, ಪುಸ್ತಕ ರೂಪದಲ್ಲಿರುವ ಪತ್ರ ಸಂಗ್ರಹಗಳಲ್ಲಿ ನಿರೂಪಣೆ ಪ್ರಧಾನವಾಗಿ ಕಾಣುತ್ತದೆ. ಪತ್ರಗಳು ಬಿಡಿಬಿಡಿ ಯಾದಾಗ ತೀರಾ ಖಾಸಗಿ ಸಂವಹನದ ಪಠ್ಯಗಳಾಗಿರುತ್ತವೆ. ಕಾಲಾನಂತರ ಅವುಗಳು ಒಂದು ಕಡೆ ಸೇರಿ ಪುಸ್ತಕ ರೂಪ ಪಡೆದಾಗ ಖಾಸಗಿ ಚೌಕಟ್ಟನ್ನು ಮೀರಿ ಒಂದು ಸಾರ್ವಜನಿಕ ಪಠ್ಯಗಳಾಗುವ ಮೂಲಕ ಕಲಾಕೃತಿಯ ಸ್ಥಾನಮಾನ ಪಡೆಯುತ್ತವೆ. ಈ ಪತ್ರಗಳನ್ನು ಒಟ್ಟಾರೆಯಾಗಿ ಓದಿದಾಗ ಅವುಗಳಿಗೆ ಹೊಸದೊಂದು ನಿರೂಪಣಾ ಶಕ್ತಿ ಬಂದು ಕಾದಂಬರಿಯೊಂದನ್ನು ಓದಿದಷ್ಟು, ನಾಟಕವೊಂದನ್ನು ನೋಡಿದಷ್ಟು ಅನುಭವ ಕೊಡುತ್ತವೆ. ನಿರೂಪಣಾ ಶಕ್ತಿ ಮತ್ತು ನಾಟಕೀಯತೆ ಅವುಗಳ ಅವಿಭಾಜ್ಯ ಅಂಗಗಳಾಗುತ್ತವೆ. ಪತ್ರಾವಲಿಯನ್ನು ಓದಿದಾಗ ನನಗೆ ಇದೇ ತರಹದ ಅನುಭವವಾಯಿತು. ಅಷ್ಟೇ ಅಲ್ಲದೆ, "ವಾಟ್ ಈಸ್ ಆ್ಯನ್ ಆಥರ್" ಎಂಬ ಲೇಖನದಲ್ಲಿ ಮಿಷೆಲ್ ಫು ಕೋ ಗುರುತಿಸುವಂತೆ ಬಿಡಿ ಪತ್ರಗಳಲ್ಲಿ ನಾವು ಬರೆಯುವವನ ಸಹಿಯನ್ನು ಕಾಣುತ್ತೇವೆಯೇ ಹೊರತು ಪತ್ರ ಬರೆಯುವವನು ಲೇಖಕನಾಗುವುದಿಲ್ಲ. ಪತ್ರಗಳು ಒಟ್ಟಾರೆಯಾಗಿ ಪುಸ್ತಕ ರೂಪದಲ್ಲಿ ಪ್ರಕಟವಾದಾಗ 'ಲೇಖಕ' ಅನ್ನುವವನು ಹುಟ್ಟಿಕೊಳ್ಳುತ್ತಾನೆ.

ಇಂತಹ ಖಾಸಗಿ ಕಥನಗಳ ಒಡಲಾಳದಲ್ಲಿಯೇ ಆ ಕಾಲದ 'ಯುಗಧರ್ಮ' ಮತ್ತು ಬೌದ್ಧಿಕ ಇತಿಹಾಸಗಳನ್ನು ಕಟ್ಟಬಹುದು. ಪತ್ರಾವಲಿಯು ೨೦ನೇ ಶತಮಾನದ ಅಂತ್ಯ ಹಾಗೂ ೨೧ನೇ ಶತಮಾನದ ಆರಂಭದಲ್ಲಿ ಧಾರವಾಡದಲ್ಲಿರುವ ಬೌದ್ಧಿಕ ಹಾಗೂ ಸಾಂಸ್ಕೃತಿಕ ವಾತಾವರಣದ ಮೇಲೆ ಬೆಳಕು ಚೆಲ್ಲುತ್ತದೆ. ಧಾರವಾಡದ ಎಷ್ಟೋ ಸಾಹಿತಿಗಳು, ಚಿಂತಕರು, ಅಧ್ಯಾಪಕರು, ಪುಸ್ತಕ ಪ್ರಕಾಶಕರು ಇಲ್ಲಿಯ ಪಾತ್ರಧಾರಿಗಳು. ಡಿ. ಎಚ್. ಲಾರೆನ್ಸ್, ಜಿ. ಬಿ. ಷಾ, ಶೇಕ್ಸ್‌ಪಿಯರ್, ಲಿಯೊ ಟಾಲ್‌ಸ್ಟಾಯ್‌ರಂತಹ ಲೇಖಕರ ಕೃತಿಗಳಿಂದ ಹಿಡಿದು ಸಮಕಾಲೀನ ಕನ್ನಡ ಸಾಹಿತ್ಯ ಕೃತಿಗಳ ಚರ್ಚೆಯನ್ನು ನಾವಿಲ್ಲಿ ಕಾಣಬಹುದು. ಡಾ॥ ಎಂ. ಎಂ. ಕಲಬುರ್ಗಿಯವರ ಕೆಟ್ಟಿತ್ತು ಕಲ್ಯಾಣ ದ ಚರ್ಚೆಯೇ ಆಗಿರಲಿ, ಕೀರ್ತಿನಾಥ ಕುರ್ತಕೋಟಿಯಂಥವರ ಸೂಕ್ಷ್ಮ ಒಳನೋಟಗಳ ದಾಖಲೆಗಳೇ ಆಗಲಿ, ಚಂಪಾ, ಗಿರಡ್ಡಿ ಗೋವಿಂದರಾಜ, ಶಂಕರ್ ಮುಖಾಶಿ ಪುಣೇಕರ, ಜಿ. ಎಸ್. ಆಮೂರ, ಸಿದ್ಧಲಿಂಗ ಪಟ್ಟಣಶೆಟ್ಟಿ, ರವಿ ಬೆಳಗೆರೆ, ಅಂಥವರ ಉಲ್ಲೇಖವಾಗಿರಲಿ ಹಾಗೂ ಮನೋಹರ ಗ್ರಂಥಮಾಲಾದಂತಹ ಪ್ರಕಾಶನ ಸಂಸ್ಥೆ, ಕರ್ನಾಟಕ ಕಾಲೇಜು ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಚಿತ್ರಣವೇ ಇರಲಿ, ಸಜ್ಜನರಿಗೆ ಅರ್ಪಿಸಿದ ಹೆಜ್ಜೇನು ಎಂಬ ಅಭಿನಂದನಾ ಗ್ರಂಥದ ತಯಾರಿಯ ವಿವರವೇ ಇರಲಿ, ಅವೆಲ್ಲವೂ ಆ ಕಾಲದ ವಾತಾವರಣದ 'ಯುಗಧರ್ಮ'ವನ್ನು ಪುನರ್‌ನಿರ್ಮಿಸಲು ಸಹಾಯಕವಾಗುತ್ತವೆ. ಮುಂದೆ ಸುಮಾರು ನೂರಾರು ವರ್ಷಗಳ ನಂತರ ಯಾರಾದರೂ ಈ ಕಾಲದ ಬೌದ್ಧಿಕ ನಕ್ಷೆಯನ್ನು ಬಿಡಿಸುವಂತಹ ಅಧ್ಯಯನ ಕೈಗೊಂಡರೆ, ಇದು ಒಂದು ಒಳ್ಳೆಯ ಆಕರ ಗ್ರಂಥವಾಗುತ್ತದೆ. ಆದ್ದರಿಂದ ಪತ್ರಗಳ ಸಂಗ್ರಹ ಸಾಮಾನ್ಯ ಓದುಗನಿಗೆ ಕಲೆಯ ಅನುಭವವನ್ನು ಕೊಟ್ಟರೆ, ಸಂಶೋಧಕನಿಗೆ ದಾಖಲೆಯ ಸಾಮಗ್ರಿಯಾಗಿ ನೆರವಾಗುತ್ತದೆ.

**ಎನ್. ಎಸ್. ಗುಂಡೂರ**
ಸಹ ಪ್ರಾಧ್ಯಾಪಕರು, ಇಂಗ್ಲಿಷ್ ಅಧ್ಯಯನ ಮತ್ತು ಸಂಶೋಧನ ವಿಭಾಗ
ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು

# 'ಗಮ್ಮತ್ತು' ಮತ್ತು 'ಕಿಮ್ಮತ್ತಿನ' ಮರಾಠಿ ನೆಲದ ಕನ್ನಡ ತಮಾಶಾ

ಭಾರತೀಯ ಕುಲವೃತ್ತಿ ಅವಲಂಬಿತ ಈ ಮೊದಲಿನ ಕೃಷಿ ಪ್ರಧಾನ ಕಾಲಮಾನದಲ್ಲಿ ಮನುಷ್ಯನಿಗೆ ಕೆಲಸ ಕಡಿಮೆ; ಹೀಗಾಗಿ ಬಿಡುವಿನ ಸಮಯ ಜಾಸ್ತಿ. ತಂತ್ರಜ್ಞಾನದ ಒತ್ತಡವಿಲ್ಲದ ಆ ಸಂದರ್ಭದಲ್ಲಿ ಮನರಂಜನೆಗೆ ಕೊರತೆ ಇರಲಿಲ್ಲ. ತಾವೇ ಸಾಂಸ್ಕೃತಿಕ ವೇದಿಕೆ ಸಿದ್ಧಪಡಿಸಿ, ತಾವೇ ಹಾಡಿ ಕುಣಿದು ಸಂಭ್ರಮಿಸಿದ ಕಾಲದಲ್ಲಿ ಸೃಜನಶೀಲದ ಒರತೆಯೊಳಗೆ ಜನಪದ ಕಲೆಗಳು ರೂಪಧಾರಣವಾದವು. ಬದಲಾವಣೆ ಜನಪದ ಕಲೆಯ ಮೂಲ ಲಕ್ಷಣವಾಗಿರುವುದರಿಂದ ಆಯಾ ಕಾಲಕ್ಕನುಗುಣವಾಗಿ ಈ ಮನರಂಜನೆ ಕಲೆಗಳು ಬೆಳೆಯುತ್ತ, ಸಮಕಾಲೀನ ಸ್ವಭಾವಗಳಿಗೆ ಸ್ಪಂದಿಸುತ್ತ ಬಂದಿವೆ. ಕನ್ನಡದ ಜನಪದ ಬಯಲಾಟಗಳು ಮನರಂಜನೆಯ ತಳಹದಿಯೊಂದಿಗೆ ಹುಟ್ಟಿಕೊಂಡರೂ ಮನುಷ್ಯ ಸ್ವಭಾವ ನಿಯಂತ್ರಿಸುವ ಮತ್ತು ತಿದ್ದುವ ದೃಷ್ಟಿಯಿಂದ ನೈತಿಕತೆ ಮತ್ತು ಅಧ್ಯಾತ್ಮ ಆಯಾಮ ಪಡೆದುಕೊಂಡಿದ್ದುಂಟು. ಆದರೆ, ಜನಪದ ಕಲೆಗಳ ಕೇಂದ್ರ ತಾಣ ಮನುಷ್ಯ ಪ್ರಧಾನ ಅವಶ್ಯಕತೆಯಾದ ಸೆಕ್ಸ್. ಅದರ ಜೀವಂತಿಕೆಗೆ ಮನರಂಜನೆಯ ರೂಪದಲ್ಲಿ ಪ್ರೀತಿ-ಪ್ರೇಮ-ಪ್ರಣಯದ ವಿಭಿನ್ನ ಆಯಾಮಗಳ ಮೂಲಕ ಈ ಕಲೆಗಳಲ್ಲಿ ಅಭಿವ್ಯಕ್ತಿಸುತ್ತ ಬರಲಾಗಿದೆ.

ಕನ್ನಡ ಜನಪದ ಕಲೆಗಳ ಪರಂಪರೆಯಲ್ಲಿ ಶ್ರೀಕೃಷ್ಣ ಪಾರಿಜಾತ, ಸಂಗ್ಯಾ ಬಾಳ್ಯಾ, ರಾಧಾನಾಟದಂತಹ ಬಯಲಾಟಗಳು ಶೃಂಗಾರ ಅಥವಾ ಸೆಕ್ಸ್ ಕೇಂದ್ರಿತ ರೂಪ ಪಡೆದವು. ಕನ್ನಡದ ಈ ಕಲೆಗಳನ್ನೇ ಹೋಲುವ ನೆರೆಯ ಮಹಾರಾಷ್ಟ್ರದಲ್ಲಿ ಲಾವಣಿ ಹಾಗೂ ತಮಾಶಾದಂತಹ ಜನಪದ ನಾಟ್ಯಕಲೆಗಳು ವಿಶೇಷ ಪಾತ್ರ ನಿರ್ವಹಿಸಿವೆ. ಶ್ರೀಕೃಷ್ಣ ಪಾರಿಜಾತ ಮತ್ತು ರಾಧಾನಾಟದ ಪ್ರಭಾವ ಮರಾಠಿಯ ಲಾವಣಿ ಮತ್ತು ತಮಾಶಾಗಳ ಮೇಲೆ ಆಗಿವೆ ಎಂದು ಜನಪದ ಕಲೆ ಪರಂಪರೆಯನ್ನು ಮೆಲಕುಹಾಕುತ್ತ ಕೆಲ ವಿದ್ವಾಂಸರು ವಾದಿಸುತ್ತಾರೆ. ಸೆಕ್ಸ್ ಕೇಂದ್ರಿತ ಶೃಂಗಾರ ಮನೋವೃತ್ತಿ ಕನ್ನಡಕ್ಕೆ ಮಾತ್ರ ಸೀಮಿತಗೊಳ್ಳದ ಕಾರಣ ಈ ವಾದ ಎಷ್ಟರಮಟ್ಟಿಗೆ ಸತ್ಯ ? ಎಂಬ ಪ್ರಶ್ನೆ ಎದುರಾಗುತ್ತದೆ. ಅದೇನೇ ಇರಲಿ ಈ ಕಲೆಗಳು ಶೃಂಗಾರದ ಕಾರಣದಿಂದ ಕಲಾರಸಿಕರ ಮನಸೆಳೆಯುವುದಂತೂ ಸತ್ಯ.

ಸಂಘರ್ಷ, ಹೋರಾಟಗಳನ್ನು ಮೈಗೂಡಿಸಿಕೊಂಡು ಬಂದ ಮರಾಠಿಗರ



*ಗೊಲ್ಲತಿಯರ ಆಕರ್ಷಕ ನೃತ್ಯದ ಸೊಬಗು*

ಸಾಮಾನ್ಯವಾಗಿ ತಮಾಶಾದಲ್ಲಿ ನಿರ್ದಿಷ್ಟವಾದ ಕಥಾವಸ್ತು ಇರುವುದಿಲ್ಲ. ಮನೋರಂಜನೆ ಇಲ್ಲಿ ಮುಖ್ಯವಾಗಿರುವುದರಿಂದ ಅದಕ್ಕೆ ಪೂರಕವಾದ ಸನ್ನಿವೇಶಗಳು ನಿರ್ಮಾಣಗೊಳ್ಳುತ್ತವೆ. ಅದಕ್ಕೆ ತಕ್ಕುದಾದ ಹಾಡು ಮತ್ತು ನೃತ್ಯ. ಜೊತೆಯಲ್ಲಿಯೇ ಸಮಕಾಲೀನ ಸಂಗತಿಗಳ ವಿಡಂಬನೆ. ಇವೆಲ್ಲವೂ ಅಸಂಗತದಲ್ಲಿಯೇ ಸಂಗತದಂತೆ ಪ್ರದರ್ಶಿತಗೊಳ್ಳುತ್ತವೆ. ತಮಾಶಾ ಕಲೆಯಲ್ಲಿ ಸಾಮಾನ್ಯವಾಗಿ ಎರಡು ಭಾಗಗಳಿರುತ್ತವೆ. ಒಂದು ಪೂರ್ವರಂಗ, ಇನ್ನೊಂದು ಉತ್ತರರಂಗ. ಮೂಲ ಮರಾಠಿಯಲ್ಲಿನ ಈ ವಿಭಾಗೀಯ ಸ್ವರೂಪವನ್ನು ಕನ್ನಡದಲ್ಲಿಯೂ ಅನುಸರಿಸಲಾಗಿದೆ. ಪೂರ್ವರಂಗದಲ್ಲಿ ಪರಂಪರಾಗತವಾದ ಆಕರ್ಷಕ ನೃತ್ಯ ಮತ್ತು ಅದಕ್ಕೆ ತಕ್ಕುದಾದ ಶೃಂಗಾರಮಯ ಹಾಡುಗಳಿಗೆ ಪ್ರಾಧಾನ್ಯತೆ. ಜೊತೆಗೆ ಶೃಂಗಾರ, ಪ್ರಣಯ ಮತ್ತು ಲೈಂಗಿಕ ಹಿನ್ನೆಲೆಯ ಚಟಾಕಿಗಳ ಸುರಿಮಳೆಯಿಂದಾಗಿ ಪ್ರೇಕ್ಷಕರನ್ನು ನಗೆಗಡಲಿನಲ್ಲಿ ತೇಲಿಸಲಾಗುತ್ತದೆ. ಲಾವಣಿ ಗತ್ತಿಗೆ ಗೆಜ್ಜೆ ನಾದದ ಹೆಜ್ಜೆ ಹಾಕುವ ಶೃಂಗಾರಭರಿತ ಗೊಲ್ಲತಿಯರ ಆಕರ್ಷಕ ನೃತ್ಯ ಪೂರ್ವರಂಗವನ್ನು ಆವರಿಸಿಕೊಂಡಿರುತ್ತದೆ. ನೃತ್ಯಗಾರ್ತಿಯರ ಮೈಬಳುಕು-ಗೆಜ್ಜೆಯ ನಿನಾದಕ್ಕೆ ಡೊಲಕಿ ವಾದ್ಯ ಜೀವ ತುಂಬುತ್ತದೆ. ಡೊಲಕಿ ಇಲ್ಲದೆ ಹೋದರೆ ಇವಾವುದೂ ನಡೆಯದು. ಡೊಲಕಿಯ ಲಯ ಮತ್ತು ಗತ್ತಿಗೆ ದಪ್ಪು ಮತ್ತು ಹಾರ್ಮೋನಿಯಂಗಳ ಒಳ್ಳೆಯ ಸಾಥ್‌ದಿಂದಾಗಿ ತಮಾಶಾಗೆ ಇನ್ನಷ್ಟು ಮೆರಗು. ಡೊಲಕಿ ಲಯಕ್ಕೆ ಅನುಗುಣವಾಗಿ ಗೆಜ್ಜೆಯ ನಿನಾದ ಹೆಜ್ಜೆ ಹಾಕುವುದು ತಮಾಶಾದಲ್ಲಿ ಸಾಮಾನ್ಯವಾದ ಅಭಿನಯವಲ್ಲ. ಹೆಜ್ಜೆ ತಪ್ಪಿದರೆ ತಮಾಶಾ ಫೇಲ್. ಅಷ್ಟರಮಟ್ಟಿಗೆ ಡೊಲಕಿ ಮತ್ತು ಮೈಬಳುಕಿನ ಸಮನ್ವಯತೆ ಮುಖ್ಯವಾಗುತ್ತದೆ. ಕನ್ನಡ ತಮಾಶಾದಲ್ಲಿ ಈ ಸಂಗತಿಗಳನ್ನು ಹೆಚ್ಚು ಎಚ್ಚರದಿಂದ ಪರಿಣಾಮಕಾರಿಯಾಗಿ ನಿರ್ವಹಿಸಲಾಗಿದೆ.

**ಡಾ॥ ಕೆ. ಎನ್. ದೊಡ್ಡಮನಿ**

ಬದುಕಿನಾನುಭವದ ಒರಿಜಿನಲ್ ಸೃಜನಶೀಲತೆ ಆಧುನಿಕ ಸಾಹಿತ್ಯ-ಸಾಂಸ್ಕೃತಿಕ ಸಂದರ್ಭದಲ್ಲಿ ಹೆಚ್ಚು ಗಟ್ಟಿ ಮತ್ತು ವಾಸ್ತವ ಎಂದು ಹೇಳಲು ಹಿಂಜರಿಯ ಬೇಕಾಗಿಲ್ಲ. ಒಂದೆಡೆ ಪಾರಂಪರಿಕ ಲಾವಣಿ, ತಮಾಶಾದಂತಹ ಜನಪದ ಕಲೆಗಳು ಜನಪ್ರಿಯಗೊಂಡಿರುವಂತೆ, ಶಾಹು ಮಹಾರಾಜ, ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ ಮತ್ತು ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರ ವಿಚಾರಸರಣಿ ಮತ್ತು ಕ್ರಿಯಾಸಾಧನೆಯ ಪ್ರಭಾವದಿಂದ ರೂಪ ಪಡೆದ ಮರಾಠಿ ಆಧುನಿಕ ಸಾಹಿತ್ಯ ಭಾರತೀಯ ಸಾಂಸ್ಕೃತಿಕ ಜಗತ್ತಿನ ವಿಶೇಷ ಗಮನ ಸೆಳೆದಿದೆ. ಮರಾಠಿ ಭಾಷೆಯ ಈ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಗಡಿ ವಿವಾದದ ರಾಜಕೀಯ ಸಂಘರ್ಷದ ಮಧ್ಯದಲ್ಲಿಯೇ ಕನ್ನಡಕ್ಕೆ ಸೆಳೆದುಕೊಳ್ಳುತ್ತ ಬರಲಾಗಿದೆ. ಈ ಬರಸೆಳೆಯುವಿಕೆಯಲ್ಲಿ ಮರಾಠಿ ಸಾಹಿತ್ಯದ ಅನುವಾದದ ಹೆಸರಿನಲ್ಲಿ ಕೆಲವರು ಕದ್ದು ತಮ್ಮದನ್ನಾಗಿಸಿಕೊಂಡು ದುರುಪಯೋಗಪಡಿಸಿಕೊಳ್ಳುತ್ತಿರುವಂತೆ, ಅನೇಕರು ಸದುಪಯೋಗಪಡಿಸಿಕೊಂಡು ಉಭಯ ಭಾಷಾ ಸಾಂಸ್ಕೃತಿಕ ಶ್ರೀಮಂತಿಕೆಗೆ ಕಾರಣರಾಗಿದ್ದಾರೆ. ಅನುವಾದದೊಂದಿಗೆ ಕೆಲ ಸ್ವತಂತ್ರ ಕೃತಿಗಳನ್ನು ಕನ್ನಡ ಸಾಂಸ್ಕೃತಿಕ ಲೋಕಕ್ಕೆ ನೀಡಿದ ನಾಟಕಕಾರ ಪ್ರಾಧ್ಯಾಪಕ ಪ್ರೊ॥ ಡಿ. ಎಸ್. ಚೌಗಲೆ ಅವರು ಈ ದೃಷ್ಟಿಯಿಂದ ಪ್ರಮುಖರಾಗುತ್ತಾರೆ.

ಪ್ರೊ॥ ಡಿ. ಎಸ್. ಚೌಗಲೆ ಮರಾಠಿ ಸಾಹಿತ್ಯ ಮತ್ತು ನಾಟ್ಯಕಲೆಯಿಂದ ಪ್ರಭಾವಿತರಾಗಿ ಕನ್ನಡದಲ್ಲಿ ಹೊಸತನ ಪ್ರಯೋಗದ ಮೂಲಕ ಉಭಯ ರಾಜ್ಯಗಳ ಸಾಂಸ್ಕೃತಿಕ ವಲಯದಲ್ಲಿ ಗಮನ ಸೆಳೆದವರು. 'ಗಾಂಧಿ ವರ್ಸಸ್ ಗಾಂಧಿ' ನಾಟಕದಿಂದ ಆರಂಭಗೊಂಡ ಅವರ ಪ್ರಯೋಗಶೀಲತೆ ಪ್ರಸ್ತುತ ಮರಾಠಿಯ ಜನಪ್ರಿಯ ತಮಾಶಾ ಕಲಾ ಪ್ರಕಾರವನ್ನು ಕನ್ನಡಕ್ಕೆ ಪರಿಚಯಿಸುವುದರವರೆಗೆ ಸಾಗಿಬಂದಿದೆ.

ಆಧುನಿಕ ತಂತ್ರಜ್ಞಾನದ ಹೊಡೆತದಲ್ಲಿಯೂ ಮಹಾರಾಷ್ಟ್ರದಲ್ಲಿ ರಂಗಕಲೆಯ ವೈಭವದ ಜೀವಂತಿಕೆಯನ್ನು ಇಂದಿಗೂ ಕಾಣುತ್ತೇವೆ. ಮರಾಠಿ ಭಾಷಿಕ ಬಾಂಧವರು ಜನಪರ ತಾತ್ವಿಕತೆಯೊಂದಿಗೆ ರಸಿಕತೆಯಲ್ಲಿಯೂ ಒಂದು ಕೈ ಮೇಲೆ ಎನ್ನುವುದಕ್ಕೆ ಲಾವಣಿ ಮತ್ತು ತಮಾಶಾ ಕಲಾ ಪ್ರಕಾರಗಳು ಸಾಕ್ಷಿ ಒದಗಿಸುತ್ತವೆ. ಶೃಂಗಾರ ಭಾವದ ಪ್ರಚೋದನೆಗೆ ಹಾಡು, ಅದಕ್ಕೆ ತಕ್ಕುದಾದ ಆಕರ್ಷಕ ನೃತ್ಯ ಮತ್ತು ಮಾತುಗಾರಿಕೆಯ ಸಮ್ಮೇಳನದ ಈ ಎರಡೂ ಕಲೆಗಳನ್ನು ಮರಾಠಿಗರು ಚೆನ್ನಾಗಿ ದುಡಿಸಿಕೊಂಡು ಜನಪ್ರಿಯಗೊಳಿಸುತ್ತ ಬಂದಿದ್ದಾರೆ. ಕನ್ನಡ ಲಾವಣಿ ಮತ್ತು ಗೀಗೀ ಪದಗಳನ್ನು ರಾಷ್ಟ್ರಪ್ರೇಮ ಮತ್ತು ನೈತಿಕ ಪ್ರಜ್ಞೆಯ ನೆಲೆಯಲ್ಲಿ ಬಳಸಿಕೊಂಡರೆ, ಮರಾಠಿ ಲಾವಣಿಯಲ್ಲಿ ಶೃಂಗಾರ ಭಾವಕ್ಕೆ ಪ್ರಾಧಾನ್ಯತೆ ನೀಡಲಾಗಿದೆ. ಲಾವಣಿ ಹಾಡುಗಾರಿಕೆ ನೃತ್ಯದ ಲಕ್ಷಣಗಳನ್ನು ಮೇಳೈಸಿಕೊಂಡ ತಮಾಶಾ ಕಾಮಪ್ರಚೋದಿತ ಮಾತುಗಳನ್ನು ಕಟ್ಟಿಕೊಂಡು ಆರಂಭದಲ್ಲಿ ಪಾಳೆಗಾರರ ವೇದಿಕೆಗೆ ಮಾತ್ರ ಸೀಮಿತಗೊಂಡಿರುವ ಸಾಧ್ಯತೆಯಿದೆ. ಕಾಲ ಬದಲಾದಂತೆ ಬೀದಿಗಿಳಿದ ಈ ಜನಪದ ಕಲೆ ರಸಿಕ ಮನಸ್ಸುಗಳ ಮೇಲೆ ಲಗ್ಗೆಯಿಟ್ಟು ಮನರಂಜಿಸಿದೆ. ಪಾಳೆಗಾರಿಕೆಯ ವೇದನೆ ಹಾಗೂ ಕಲಾರಸಿಕರ ಮನಸ್ಸುಗಳನ್ನು ಸೆರಗಿನಲ್ಲಿ ಸುತ್ತಿಕೊಂಡು ಬಂದ ಮರಾಠಿ ತಮಾಶಾ ಇಂದು ಜನಪ್ರಿಯ ನಾಟ್ಯಕಲೆಯ ಮಾನ್ಯತೆ ಹಂತ ಮುಟ್ಟಿದೆ. ಹೀಗಾಗಿ ತಮಾಶಾ ಇಂದು ಸಮಕಾಲೀನ ಸಂವೇದನೆಗಳ ಮೂಲಕ ಮರುಸೃಷ್ಟಿಗೊಳ್ಳುತ್ತಿದೆ. ಮರುಸೃಷ್ಟಿಯ ಎಲ್ಲಾ ಗತ್ತುಗಳನ್ನು ಮೈಗೂಡಿಸಿಕೊಂಡು ಪ್ರೊ॥ ಡಿ. ಎಸ್. ಚೌಗಲೆಯವರ ಮೂಲಕ ಕನ್ನಡೀಕರಣಗೊಂಡು ಮರಾಠಿ ನೆಲದ ತಮಾಶಾ ಕನ್ನಡ ಸಾಂಸ್ಕೃತಿಕ ವಲಯಕ್ಕೆ ಲಗ್ಗೆಯಿಟ್ಟಿದೆ. ಸೂಕ್ತ ತರಬೇತಿಗೆ ಅವಕಾಶ ಕಲ್ಪಿಸಿ ಕನ್ನಡ ನೆಲದಲ್ಲಿ ಪ್ರದರ್ಶನಗೊಳ್ಳಲು ಧಾರವಾಡದ ರಂಗಾಯಣ ಸಂಸ್ಥೆ ಹೊಸದೊಂದು ಪ್ರಯೋಗ ಮಾಡಿದ್ದರಿಂದ ಧಾರವಾಡ, ಮೈಸೂರು, ಬೆಳಗಾವಿ, ಮುಂಬೈ ಸೇರಿದಂತೆ ಉಭಯ ರಾಜ್ಯಗಳ ಅನೇಕ ಕಡೆ ಯಶಸ್ವಿ ಪ್ರದರ್ಶನದೊಂದಿಗೆ ಮುಂದುವರಿಯುತ್ತಿದೆ. ಕನ್ನಡದ ಈ ಯಶಸ್ವಿ ಪ್ರಯೋಗಕ್ಕಾಗಿ ಮಹಾರಾಷ್ಟ್ರದ ಪ್ರಸಿದ್ಧ ಕಲಾತಜ್ಞರ ಸಹಾಯವನ್ನೂ ಪಡೆದುಕೊಳ್ಳಲಾಗಿದೆ. ಕನ್ನಡದ ಈ ರಂಗಕಲೆಗೆ ಮುಂಬೈ ವಿಶ್ವವಿದ್ಯಾಲಯದ ಲೋಕಕಲಾ ಅಕಾಡೆಮಿ ವಿಭಾಗದ ಮುಖ್ಯಸ್ಥ ತಮಾಶಾ ರಂಗಪ್ರಕಾರದ ರಾಷ್ಟ್ರಮಟ್ಟದ ತಜ್ಞ ಪ್ರೊ॥ ಗಣೇಶ ಚೆಂದನಶಿವೆ ಅವರ ನಿರ್ದೇಶನ ಮತ್ತು ಅವರ ತಂಡದ ಮೂಲಕ ಕನ್ನಡದ ಕಲಾವಿದರಿಗೆ ತರಬೇತಿ ನೀಡಲಾಗಿದೆ. ಕನ್ನಡದ ಕಲಾವಿದರು ಇದನ್ನು ಸರಿಯಾಗಿ ಬಳಸಿಕೊಂಡಿರುವುದನ್ನು ಒಂದು ಸಲ ತಮಾಶಾ ನೋಡಿಯೇ ನಿರ್ಧರಿಸಬೇಕು.



*ಆಧುನಿಕ ಅರಸನ ದರಬಾರದ ಸಂದರ್ಭ)*

ಕನ್ನಡ ಮರಾಠಿ ಜನಪದ ನಾಟ್ಯಕಲೆಗಳ ಬಗ್ಗೆ ಇನ್ನೊಂದು ಮಾತು. ಶೃಂಗಾರಭಾವ ಪ್ರಧಾನ ಕನ್ನಡದ ಶ್ರೀಕೃಷ್ಣ ಪಾರಿಜಾತ, ರಾಧಾನಾಟ, ಸಂಗ್ಯಾ ಬಾಳ್ಯಾದಂತಹ ಜನಪದ ಬಯಲಾಟಗಳು ಒಂದು ಕಾಲಕ್ಕೆ ಮೆರೆದು ಆಧುನಿಕತೆಯ ಹೊಡೆತಕ್ಕೆ ಸಿಲುಕಿ ಪಳೆಯುಳಿಕೆಗಳಾಗಿ ಬಿದ್ದುಕೊಂಡಿವೆ. ಈ ಬಯಲಾಟಗಳಲ್ಲಿನ ಶಾಶ್ವತ ಕಥಾವಸ್ತು, ಹಳಸಿದ ಭಾಷೆ, ಬಳಸಿ ಬಳಸಿ ಸವಕಲಾದ ಆಟದ ಗತ್ತುಗಳು ಬದಲಾವಣೆಗೆ ಸಾಧ್ಯವಾಗದ ಕಾರಣ ಅವಸಾನ ಅನುಭವಿಸಬೇಕಾಯಿತು. ಕನ್ನಡದ ಲಾವಣಿ, ಗೀಗೀ ಪದಗಳ ಹಣೆಬರವೂ ಇದೇ ರೀತಿಯದು. ಆದರೆ, ಲಾವಣಿ ಮತ್ತು ಗೀಗೀ ಪದಗಳಲ್ಲಿ ಸಮಕಾಲೀನ ಸಂವೇದನೆ – ಸವಾಲುಗಳನ್ನು ಹೊಸ ಪರಿಭಾಷೆಯೊಂದಿಗೆ ದುಡಿಸಿಕೊಂಡು ಹೊಸ ಜೀವತುಂಬುವ ಅವಕಾಶವಿದ್ದರೂ ಕನ್ನಡದ ಜನಪದ ಕಲಾವಿದರು ಆ ಕೆಲಸ ಮಾಡಲಿಲ್ಲ. ಹಳೆಯ ಹಾಡುಗಳಿಗೆ ಜೋತುಬಿದ್ದು, ಸರಕಾರ ನೀಡುವ ಕಾಸಿಗೆ ಮಾತ್ರ ಮೀಸಲಿರಿಸಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಬಾಗಿಲಿಗೆ ಕನ್ನಡದ ಲಾವಣಿ ಮತ್ತು ಗೀಗೀ ಪದಗಳನ್ನು ಕಟೌಟ್ ಹಾಕಿಡಲಾಗಿದೆ. ಇದು ಕನ್ನಡದ ಜನಪದ ಕಲಾವಿದರ ಬಡತನ ಮತ್ತು ಸರಕಾರದಿಂದ ಪಡೆದುಕೊಳ್ಳುವ ಹಣದ ಆಶೆಬುರುಕುತನದ ಪರಿಣಾಮ. ಮರಾಠಿಯ ಲಾವಣಿ ಮತ್ತು ತಮಾಶಾ ಈ ದುರಂತಕ್ಕೆ ಒಳಗಾಗದೆ ಆಧುನಿಕತೆಯ ಮರ್ಮಾಂಗ ಹೊಡೆತ ಅನುಭವಿಸಿದರೂ ಮತ್ತೆ ಕಿತ್ತೆದ್ದು ಜನರ ಮಧ್ಯೆ ಸುಳಿದಾಡಿ ಜನರ ನಾಡಿಮಿಡಿತಕ್ಕೆ ಸ್ಪಂದಿಸಿ ಸಮಕಾಲೀನ ಸಂದರ್ಭ, ಸನ್ನಿವೇಶ ಸವಾಲುಗಳನ್ನು ಹೊಸ ವಿದ್ಯಮಾನಗಳೊಂದಿಗೆ ಸೃಜನಶೀಲ ಭಾಷಾ ದುಡಿಮೆಯೊಂದಿಗೆ ತನ್ನ ಜೀವಂತಿಕೆ ಮತ್ತು ಲವಲವಿಕೆಯನ್ನು ಉಳಿಸಿಕೊಂಡಿವೆ. ಈ ಕಾರಣಕ್ಕಾಗಿಯೇ ತಮಾಶಾ ಇಂದಿಗೂ ಗಮನ ಸೆಳೆಯುತ್ತದೆ ಮತ್ತು ನೆರೆಯ ಕನ್ನಡ ಸಂಸ್ಕೃತಿಯಲ್ಲಿ ಮಿಲನಗೊಳ್ಳುತ್ತದೆ. ಸೃಜನಶೀಲದ ಈ ಜೀವಂತಿಕೆಯ ಕಾರಣದಿಂದಾಗಿ ಡಿ. ಎಸ್. ಚೌಗಲೆ ಅವರ ಕನ್ನಡ ತಮಾಶಾ ಕನ್ನಡಿಗರ ಮನ ತಟ್ಟುತ್ತದೆ.

ಸಾಮಾನ್ಯವಾಗಿ ತಮಾಶಾದಲ್ಲಿ ನಿರ್ದಿಷ್ಟವಾದ ಕಥಾವಸ್ತು ಇರುವುದಿಲ್ಲ. ಮನೋರಂಜನೆ ಇಲ್ಲಿ ಮುಖ್ಯವಾಗಿರುವುದರಿಂದ ಅದಕ್ಕೆ ಪೂರಕವಾದ ಸನ್ನಿವೇಶಗಳು ನಿರ್ಮಾಣಗೊಳ್ಳುತ್ತವೆ. ಅದಕ್ಕೆ ತಕ್ಕುದಾದ ಹಾಡು ಮತ್ತು ನೃತ್ಯ. ಜೊತೆಯಲ್ಲಿಯೇ ಸಮಕಾಲೀನ ಸಂಗತಿಗಳ ವಿಡಂಬನೆ. ಇವೆಲ್ಲವೂ ಅಸಂಗತದಲ್ಲಿಯೇ ಸಂಗತದಂತೆ ಪ್ರದರ್ಶಿತಗೊಳ್ಳುತ್ತವೆ. ತಮಾಶಾ ಕಲೆಯಲ್ಲಿ ಸಾಮಾನ್ಯವಾಗಿ ಎರಡು ಭಾಗಗಳಿರುತ್ತವೆ. ಒಂದು ಪೂರ್ವರಂಗ, ಇನ್ನೊಂದು ಉತ್ತರರಂಗ. ಮೂಲ ಮರಾಠಿಯಲ್ಲಿನ ಈ ವಿಭಾಗೀಯ ಸ್ವರೂಪವನ್ನು ಕನ್ನಡದಲ್ಲಿಯೂ ಅನುಸರಿಸಲಾಗಿದೆ. ಪೂರ್ವರಂಗದಲ್ಲಿ ಪರಂಪರಾಗತವಾದ ಆಕರ್ಷಕ ನೃತ್ಯ ಮತ್ತು ಅದಕ್ಕೆ ತಕ್ಕುದಾದ ಶೃಂಗಾರಮಯ ಹಾಡುಗಳಿಗೆ ಪ್ರಾಧಾನ್ಯತೆ. ಜೊತೆಗೆ ಶೃಂಗಾರ, ಪ್ರಣಯ ಮತ್ತು ಲೈಂಗಿಕ ಹಿನ್ನೆಲೆಯ ಚಟಾಕಿಗಳ

ಸುರಿಮಳೆಯಿಂದಾಗಿ ಪ್ರೇಕ್ಷಕರನ್ನು ನಗೆಗಡಲಿನಲ್ಲಿ ತೇಲಿಸಲಾಗುತ್ತದೆ. ಲಾವಣಿ ಗತ್ತಿಗೆ ಗೆಜ್ಜೆ ನಾದದ ಹೆಜ್ಜೆ ಹಾಕುವ ಶೃಂಗಾರಭರಿತ ಗೊಲ್ಲತಿಯರ ಆಕರ್ಷಕ ನೃತ್ಯ ಪೂರ್ವರಂಗವನ್ನು ಆವರಿಸಿಕೊಂಡಿರುತ್ತದೆ. ನೃತ್ಯಗಾರ್ತಿಯರ ಮೈಬಳಕು–ಗೆಜ್ಜೆಯ ನಿನಾದಕ್ಕೆ ಡೊಲಕಿ ವಾದ್ಯ ಜೀವ ತುಂಬುತ್ತದೆ. ಡೊಲಕಿ ಇಲ್ಲದೆ ಹೋದರೆ ಇವಾವುದೂ ನಡೆಯದು. ಡೊಲಕಿಯ ಲಯ ಮತ್ತು ಗತ್ತಿಗೆ ದಪ್ಪು ಮತ್ತು ಹಾರ್ಮೋನಿಯಂಗಳ ಒಳ್ಳೆಯ ಸಾಥ್‌ದಿಂದಾಗಿ ತಮಾಶಾಗೆ ಇನ್ನಷ್ಟು ಮೆರಗು. ಡೊಲಕಿ ಲಯಕ್ಕೆ ಅನುಗುಣವಾಗಿ ಗೆಜ್ಜೆಯ ನಿನಾದ ಹೆಜ್ಜೆ ಹಾಕುವುದು ತಮಾಶಾದಲ್ಲಿ ಸಾಮಾನ್ಯವಾದ ಅಭಿನಯವಲ್ಲ. ಹೆಜ್ಜೆ ತಪ್ಪಿದರೆ ತಮಾಶಾ ಫೇಲ್. ಅಷ್ಟರಮಟ್ಟಿಗೆ ಡೊಲಕಿ ಮತ್ತು ಮೈಬಳುಕಿನ ಸಮನ್ವಯತೆ ಮುಖ್ಯವಾಗುತ್ತದೆ. ಕನ್ನಡ ತಮಾಶಾದಲ್ಲಿ ಈ ಸಂಗತಿಗಳನ್ನು ಹೆಚ್ಚು ಎಚ್ಚರದಿಂದ ಪರಿಣಾಮಕಾರಿಯಾಗಿ ನಿರ್ವಹಿಸಲಾಗಿದೆ. ಮರಾಠಿ ತಮಾಶಾದ ಡೊಲಕಿಯಲ್ಲಿ ಪಳಗಿದ ಅದ್ಭುತ ಕಲಾವಿದನನ್ನು ಬಳಸಿಕೊಂಡಿರುವುದು ಕನ್ನಡ ತಮಾಶಾದ ಪ್ಲಸ್ ಪಾಯಿಂಟ್. ಔರಂಗಾಬಾದಿನ ಸಾಗರ್ ಜೋಶಿ ಅವರ ಅದ್ಭುತ ಡೊಲಕಿ ಹೊಡೆತ ಪ್ರೇಕ್ಷಕರನ್ನು ಮೈಮರೆಸುತ್ತದೆ. ಮರಾಠಿ ಲಾವಣಿ ಲಯದಲ್ಲಿ ಕನ್ನಡದಲ್ಲಿನ ಹಾಡುಗಾರಿಕೆ ಉಳಿಸಿಕೊಂಡು ಹಾಡಿರುವುದು ತಮಾಶೆಗೆ ಇನ್ನಷ್ಟು ಅನುಕೂಲವಾಗಿದೆ. ಈ ಜವಾಬ್ದಾರಿಯನ್ನು ಹಾಡುಗಾರರೂ ಚೆನ್ನಾಗಿ ನಿರ್ವಹಿಸಿದ್ದಾರೆ.

ಮೂಲ ಮರಾಠಿ ಕಲಾವಿದರು ತಮಾಶಾದಲ್ಲಿ ಡೊಲಕಿಯೊಂದಿಗೆ ಲಾವಣಿ ನಾಟ್ಯವನ್ನು ಪಾರಂಪರಿಕವಾಗಿ ಕರಗತ ಮಾಡಿಕೊಂಡು ಬಂದವರು. ಹೀಗಾಗಿ ಈ ನೃತ್ಯ ಅವರಿಗೆ ನೀರು ಕುಡಿದಷ್ಟು ಸರಳ. ಕನ್ನಡದ ಕಲಾವಿದರಿಗೆ ಈ ಬಗೆಯ ಹೆಜ್ಜೆಯ ನೃತ್ಯ ಕಲಿಕೆಯಾಗುವುದರಿಂದ ಒಂದಿಷ್ಟು ಕಷ್ಟವಾಗುತ್ತದೆ. ಇದನ್ನು ಕನ್ನಡದ ಕಲಾವಿದರು ಮೂಲಕ್ಕೆ ಚ್ಯುತಿಬಾರದಂತೆ ತಮಾಶಾದ ಚೀಜ್ ಕಳೆಗುಂದದಂತೆ ಕಾಯ್ದುಕೊಂಡಿರುವುದು ಕಲಾವಿದರ ಉತ್ತಮ ಅಭಿನಯಕ್ಕೆ ಸಾಕ್ಷಿಯಾಗಿದೆ. ಯುವತಿಯರ ನಾಟ್ಯಲಹರಿ ಆಕರ್ಷಕವಾಗಿ ಮತ್ತು ತುಂಬ ಸಹಜವಾಗಿ ಮೂಡಿದೆ. ತಮಾಶಾದಲ್ಲಿ ನಾಟ್ಯದ ತೀವ್ರತೆ ಅಥವಾ ವೇಗ ಮುಖ್ಯವಾಗುವುದರಿಂದ ಕನ್ನಡದಲ್ಲಿ ಈ ವೇಗ ಸ್ವಲ್ಪ ಕಡಿಮೆ ಅನ್ನಿಸಿದರೂ ಈಗಿರುವ ತೀವ್ರತೆ ತಮಾಶಾದ ರಸಾನುಭವಕ್ಕೆ ತೊಂದರೆಯುಂಟುಮಾಡುವುದಿಲ್ಲ. ಲಾವಣಿ ಹಾಡುಗಾರಿಕೆಯಲ್ಲಿ ಮೂಲ ಮರಾಠಿಯ ಗತ್ತು, ಲಯ, ರಾಗಗಳನ್ನು ಕನ್ನಡದಲ್ಲಿಯೂ ಉಳಿಸಿಕೊಳ್ಳಲಾಗಿದೆ. ನೃತ್ಯಗಾರ್ತಿಯರ ರೇಷ್ಮೆ ಸೀರೆ ಉಡುಗೆ ಮತ್ತು ನಡುಪಟ್ಟಿ, ಕೊರಳಿನ ಹಾರದಂತಹ ವೇಷಭೂಷಣವನ್ನು ಮರಾಠಿ ಶೈಲಿಯಲ್ಲಿ ವಿನ್ಯಾಸಗೊಳಿಸಿರುವುದು ಆಕರ್ಷಕವಾಗಿದೆ.

ಪೂರ್ವರಂಗದಲ್ಲಿನ ಪಾತ್ರ ಮತ್ತು ಮಾತುಗಾರಿಕೆಯೂ ಅಷ್ಟೇ ಪರಿಣಾಮಕಾರಿ. ಸುದರ್ಶನ ಚಕ್ರದ ಸಂಕೇತವಾಗಿ ಬೆರಳಿನಲ್ಲಿ ಕಂಪ್ಯೂಟರ್ ಸಿಡಿ ಹಿಡಿದುಕೊಂಡು ಪ್ರವೇಶಿಸುವ ಶ್ರೀಕೃಷ್ಣ ವೇಷಧಾರಿ ಮತ್ತು ಆತನ ಪರಿಚಾರಕ, ಮಧುರಾ ಸಂತೆಗೆ



*ಗೊಲ್ಲತಿಯರ ಆಕರ್ಷಕ ನೃತ್ಯದ ಸೊಬಗು*

ಮಾಲು ಕೊಂಡೊಯ್ಯುವ ಗೊಲ್ಲತಿಯರ ಸನ್ನಿವೇಶಗಳು ಹಾಗೂ ಉತ್ತರ ಕರ್ನಾಟಕದ ಜವಾರಿ ಭಾಷೆಯ ಚಟಾಕಿಗಳು, ಮಧ್ಯದಲ್ಲಿ ಇಂಗ್ಲಿಷ್ ಪದಗಳ ಸಂದರ್ಭೋಚಿತ ವಿಡಂಬನಾತ್ಮಕ ಬಳಕೆ ಎಲ್ಲವೂ ಪ್ರೇಕ್ಷಕರ ಮನ ಗೆಲ್ಲುತ್ತವೆ. ಅಶ್ಲೀಲತೆಗೆ ಎಡೆಮಾಡಿಕೊಡುವ ದ್ವಂದ್ವಾರ್ಥದ ಪದಬಳಕೆ ಮರಾಠಿ ತಮಾಶಾದಲ್ಲಿ ಸಾಮಾನ್ಯವಾಗಿ ಬಳಕೆಯಾದರೂ ಚೌಗಲೆ ಅವರು ಆ ರೀತಿ ಅಶ್ಲೀಲತೆಗೆ ಜಾರದಂತೆ ಶೃಂಗಾರದ ಮಧುರಭಾವಕ್ಕೆ ಪರಿವರ್ತಿಸಿಕೊಂಡಿರುವುದು ಪ್ರೇಕ್ಷಕರನ್ನು ಮುಜುಗರದಿಂದ ಪಾರುಮಾಡಿದೆ. ಈ ಹಿನ್ನೆಲೆಯಲ್ಲಿ ಮೌಸಿಯೊಂದಿಗೆ ನಡೆಯುವ ಸಂಭಾಷಣೆಯ ಸನ್ನಿವೇಶ ಆಕರ್ಷಕವಾಗಿ ಮೂಡಿಬಂದಿದ್ದು, 'ಮೌಸಿ' ಎಂಬ ಸ್ತ್ರೀ ಪಾತ್ರವನ್ನು ನಿರ್ವಹಿಸಿದ ಪುರುಷ ಕಲಾವಿದನ ಅಭಿನಯ ಗಮನ ಸೆಳೆಯುತ್ತದೆ. ಇದೆಲ್ಲ ಮರಾಠಿ ನೆಲದ ತಮಾಶಾದ ಪ್ರೇರಣೆಯಿಂದ ಪೂರ್ವಭಾಗದಲ್ಲಿ ಮೂಡಿದ ಕನ್ನಡದ ಗಮ್ಮತ್ತು.

ಇನ್ನು ತಮಾಶಾದ ಉತ್ತರರಂಗದಲ್ಲಿ ಪ್ರೊ॥ ಡಿ. ಎಸ್. ಚೌಗಲೆ ಅವರ ಸೃಜಶೀಲತೆಗೆ ಇನ್ನೊಂದು ಸವಾಲು ಎದುರಾಗುತ್ತದೆ. ಇದನ್ನು ಎದುರುಗೊಳ್ಳುವ ಚೌಗಲೆ ಅವರು ಕನ್ನಡ ನಾಡಿನ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಬದುಕಿನ ಕಿಮ್ಮತ್ತು (ಬೆಲೆ) ಕಟ್ಟಲು ತಮಾಶಾವನ್ನು ದುಡಿಸಿಕೊಂಡಿದ್ದಾರೆ. ಕಲಿಯುಗದ ರಾಜನ ದರ್ಬಾರಿನ ಪ್ರಸಂಗದ ಮೂಲಕ ಪ್ರಸ್ತುತ ಕರ್ನಾಟಕಕ್ಕೆ ಮಾತ್ರ ಸೀಮಿತಗೊಳ್ಳದೆ, ದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ ಧೋರಣೆಯ ನಿಲುವುಗಳನ್ನು ವಿಡಂಬನೆಯ ಮೂಲಕ ತಕ್ಕಮಟ್ಟಿಗೆ ಸಮರ್ಥವಾಗಿ ತಂದುಕೊಳ್ಳುವುದರ ಮೂಲಕ ಸಮಾನತೆ ಮತ್ತು ಸಹಬಾಳ್ವೆಯ ಸಂದೇಶವನ್ನು ರವಾನಿಸಲಾಗಿದೆ. ಅರಸನ ದರ್ಬಾರಿಗೆ ಮಾತ್ರ ಸೀಮಿತಗೊಂಡ ನಾರದ ಸೇರಿದಂತೆ ಇತರ ದೇವರುಗಳಲ್ಲಿ ಕಲ್ಯಾಣ ಗುಣಗಳನ್ನು ಬೆಸೆದು ಸಾಮಾನ್ಯ ಜನರ ಬದುಕಿಗೆ ಸ್ಪಂದಿಸುವಂತೆ ಮಾಡಲಾಗಿದೆ. ರೈತನ ಸಾವಿನ ದುರಂತದ ಸನ್ನಿವೇಶ, ಕೋಮುಭಾವನೆ ದಳ್ಳುರಿ, ಅಸಹಿಷ್ಣುತೆ ಸ್ವಭಾವ ಅದರ ಪ್ರತಿರೋಧದಂತಹ ಸಮಕಾಲೀನ ಒಟ್ಟು ಬದುಕಿನ ಕಿಮ್ಮತ್ತು ಕಟ್ಟಿರುವುದು ತಮಾಶಾ ಕೇವಲ ತಮಾಷಾ ಆಗಿ ಉಳಿದುಕೊಳ್ಳದೆ ಸಂವೇದನಾಶೀಲ ಜನಪದ ಕಲೆಯಾಗಿ ಹೊರಹೊಮ್ಮುತ್ತದೆ.

ಈ ಎಲ್ಲ ಕಾರಣದಿಂದಾಗಿ ಡಿ. ಎಸ್. ಚೌಗಲೆ ಅವರ ತಮಾಶಾ ಆಧುನಿಕ ರಂಗಪ್ರಯೋಗದಲ್ಲಿ ಕೇವಲ ಒಂದು ಮನರಂಜನೆ ಕಲೆಯಾಗಿ ಉಳಿದುಕೊಳ್ಳದೆ ಕಥೆ, ಸನ್ನಿವೇಶ, ಸಂಭಾಷಣೆಗಳ ಬದಲಾವಣೆಯನ್ನು ತನ್ನೊಡಲೊಳಗಿಟ್ಟುಕೊಂಡು ಕನ್ನಡದಲ್ಲಿ ಜನಪರ ನಿಲುವಿನ ನೂತನ ರಂಗಪ್ರಯೋಗವಾಗಿ ಸೇರ್ಪಡೆಗೊಳ್ಳುತ್ತದೆ.

**ಡಾ॥ ಕೆ. ಎನ್. ದೊಡ್ಡಮನಿ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಕನ್ನಡ ವಿಭಾಗ
ಜೈನ ಮಹಾವಿದ್ಯಾಲಯ, ರೈಲ್ವೆ ೩ನೇ ಗೇಟ್ ಹತ್ತಿರ, ಖಾನಾಪೂರ ರಸ್ತೆ
ಬೆಳಗಾವಿ – ೫೯೦ ೦೦೮

# ಬ್ರಹ್ಮಚರ್ಯ

ನಿಗ್ರಹದ
ಎದೆ ಗೂಡಲ್ಲಿ
ಕುದಿಯುವ ಆಕಾಂಕ್ಷೆ
ಹತಾಶೆಗೂ
ದಾರಿ ದಯಪಾಲಿಸಬಲ್ಲದು.

ಮನುಷ್ಯ ಸಹಜ ತೃಷೆಗೆ
ಅಪರಿಮಿತ ನೈತಿಕತೆಯ ಬೇಲಿ
ನಿರ್ಮಿಸಿದವರು
ಅದೇ ಬೇಲಿ ತಂತಿಯ
ಮುಳ್ಳಿಗೆ
ಮೈ ಒಡ್ಡಲೂಬಹುದು.

**ಎಚ್. ಕೆ. ಶರತ್**
ಇ/ಮ ಜೆ. ಆರ್. ಕೆಂಚೇಗೌಡ, ನಂ. ೩೭
ಡೆಂಟಲ್ ಕಾಲೇಜು ಹಿಂಭಾಗ, ವಿವೇಕಾನಂದ ರಸ್ತೆ
ವಿದ್ಯಾನಗರ ಹಾಸನ – ೫೭೩ ೨೦೧

ನಾನು ಓದಿದ ಪುಸ್ತಕ

# ವೈಚಾರಿಕ ಕವನಗಳು

‘ಮೂರು ಹೆಣ್ಣಿನ ನಂತರ ಗಂಡಾದರೆ ಮುತ್ತು, ಅದೇ ಮೂರು ಗಂಡಿನ ನಂತರ ಹೆಣ್ಣಾದರೆ ಕುತ್ತು’ – ಹೀಗೆ ಹೇಳಿದ ಜ್ಯೋತಿಷಿಗಳು ಭಯ ಹುಟ್ಟಿಸಿ ಹೊಸ ಗಡಿಗೆ ಒಡೆದರೆ ದೋಷ ಪರಿಹಾರವಾಗುವುದೆಂಬ ಅತಾರ್ಕಿಕ ಸಂಗತಿಯನ್ನು ‘ತ್ರಿಕ ದೋಷ’ ಕವಿತೆಯಲ್ಲಿ ಸಾಧಾರಣ ಆಡುಮಾತುಗಳಲ್ಲಿ ಪ್ರಸ್ತುತಪಡಿಸಲಾಗಿದೆ. ಹೆಣ್ಣಾದ ನಂತರ ಗಂಡು ಹುಟ್ಟಿದರೇನು ? ಗಂಡಾದ ನಂತರ ಹೆಣ್ಣು ಹುಟ್ಟಿದರೇನು ? ನಿಸರ್ಗ ನಿಯಮ ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. ಜನರ ಭಯ, ಅಜ್ಞಾನವೇ ಜ್ಯೋತಿಷಿಗಳ ಬಂಡವಾಳ. ಹೆಣ್ಣಾದರೇನು ? ಗಂಡಾದರೇನು ? ಕುಟುಂಬಕ್ಕೆ ಒಂದೇ ಮಗು ಸಾಕೆನ್ನುವ ಇಂದಿನ ದಿನಮಾನಗಳಲ್ಲಿ ಇವೆಲ್ಲ ಅಪ್ರಸ್ತುತವಾಗಿ ನಿಲ್ಲುವವು.

**ಅಲ್ಲಮಪ್ರಭು ಬೆಟ್ಟದೂರು**




ಲೇಖಕರು : **ಎಸ್. ಮಂಜುನಾಥ**
ಪುಟಗಳು : ೮೪
ಬೆಲೆ : ರೂ ೬೦/–
ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ೧೧, ಕ್ರೆಸೆಂಟ್ ರಸ್ತೆ
ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – ೫೬೦ ೦೦೧

ಪ್ರಸ್ತುತ ಸಂಕಲನದಲ್ಲಿ ಮಂಜುನಾಥರು ಸಮಾಜದಲ್ಲಿ ಹಾಸುಹೊಕ್ಕಾಗಿರುವ ಎಲ್ಲ ಬಗೆಯ ಕಂದಾಚಾರಗಳನ್ನು ವಿಮರ್ಶಾತ್ಮಕವಾಗಿ ಮತ್ತು ವಿಶ್ಲೇಷಣಾತ್ಮಕವಾಗಿ, ತುಸು ಹಾಸ್ಯ ಧಾಟಿಯಲ್ಲಿ ಪ್ರಸ್ತುತಪಡಿಸಿರುವುದು ಅಪರೂಪವಾಗಿದೆ. ಮೊದಲ ಕವಿತೆ ‘ಅದೃಷ್ಟ–ಅರಿಷ್ಟ’ದಲ್ಲಿ ವಿಧಿಲಿಖಿತವನ್ನು ನಿರಾಕರಿಸುತ್ತ ಮಾಡುವ ಕೆಲಸವನ್ನು ಪ್ರಾಮಾಣಿಕವಾಗಿ, ದೃಢವಿಶ್ವಾಸದಿಂದ ನಿಭಾಯಿಸಲು ಓದುಗರಿಗೆ ಕರೆ ನೀಡುತ್ತಾರೆ. ಎಲ್ಲ ಸಂಖ್ಯೆಗಳೂ ಅಷ್ಟೇ ಮಹತ್ವದವುಗಳು. ‘೩’ ಮತ್ತು ‘೧೩’ ಅಶುಭವೆಂದು, ‘೭’ ಮತ್ತು ‘೯’ ಶುಭವೆಂದು ಸಂಪ್ರದಾಯಸ್ಥರು ಹೇಳುತ್ತಾರೆ. ಈ ಬಗ್ಗೆ ಕವಿಯ ಪ್ರತಿಕ್ರಿಯೆ ಹೀಗಿದೆ :

**ಸಂಖ್ಯೆಗಳಲ್ಲಿ**
**ಗಾಢಾರ್ಥ, ಗೂಢಾರ್ಥವ**
**ಗ್ರಹಿಸುವ ಬುದ್ಧಿವಂತ, ಲದ್ದಿವಂತ !**

ಆರ್ಯಭಟ, ಭಾಸ್ಕರಾಚಾರ್ಯ, ಶ್ರೀನಿವಾಸ ರಾಮಾನುಜನ್ ಮುಂತಾದ ಭಾರತೀಯ ಗಣಿತಜ್ಞರು ನೀಡಿರುವ ಕೊಡುಗೆಗಳನ್ನು ಜನತೆಗೆ ಕೊಂಡೊಯ್ಯುವ ಬದಲು ಮೌಢ್ಯವನ್ನು ಪ್ರಚಾರ ಮಾಡುತ್ತಿರುವುದು ನಾಚಿಕೆಗೇಡಿನ ಸಂಗತಿಯಾಗಿದೆ.

ಮಕ್ಕಳು ಹುಟ್ಟಿದ ಕೂಡಲೆ ಜಾತಕ ಬರೆಸುತ್ತಾರೆ. ‘ಜಾತಕ ಚೌಕು’ ಎಂಬ ಕವಿತೆಯಲ್ಲಿ ಇದನ್ನು ನಿರ್ಭಿಡೆಯಿಂದ ಖಂಡಿಸಲಾಗಿದೆ. ಗ್ರಹಗಳು ತಮ್ಮ ಪಾಡಿಗೆ ತಾವಿರುತ್ತವೆ. ನಮ್ಮ ಪಾಡಿಗೆ ನಾವಿರಬೇಕು. ಮೂಲಾ ನಕ್ಷತ್ರದಲ್ಲಿ ಹುಟ್ಟಿದರೆ ಮನೆತನಕ್ಕೆ ಕೇಡಾಗುತ್ತದೆಂದು ಸಂಪ್ರದಾಯವಾದಿಗಳು ಹೇಳುತ್ತಾರೆ. ಪ್ರಖ್ಯಾತ ಸಂಗೀತಗಾರ ಮಲ್ಲಿಕಾರ್ಜುನ ಮನ್ಸೂರ್ ಮೂಲಾ ನಕ್ಷತ್ರದಲ್ಲಿ ಹುಟ್ಟಿದವರು. ಮನೆತನಕ್ಕೆ, ದೇಶಕ್ಕೆ ಗೌರವ ತಂದವರು. ಮಂತ್ರಕ್ಕೆ ಅದ್ಭುತ ಶಕ್ತಿಯಿದೆಯೆಂದು ಭಾವಿಸಲಾಗಿದೆ. ಮಂತ್ರಕ್ಕೆ ಕಾಯಿ ಉದುರುವದೇ ? ಕಲ್ಲು ತೆಗೆದುಕೊಂಡು ಹೆಟ್ಟಿದರೆ, ಇಲ್ಲವೇ ಗಿಡವೇರಿ ಹರಿದರೆ ಮಾವಿನಕಾಯಿ ಸಿಗುತ್ತದೆ. ‘ಗುನು ಗುನು ಮಂತ್ರ’ ಕವಿತೆಯಲ್ಲಿ, ಬಾಯಿ ಪಠಿಸುವ ಮಂತ್ರದ ಕುರಿತು ತಮ್ಮ ಹರಿತವಾದ ವಿಚಾರ ಸರಣಿಯನ್ನು ಓದುಗರ ಮುಂದೆ ತೆರೆದಿಟ್ಟಿದ್ದಾರೆ. ಸತ್ತಮೇಲೆ ವ್ಯಕ್ತಿ ಸ್ವರ್ಗ ಸೇರುವನೇ ? ನರಕ ಸೇರುವನೇ ? ಪುನರ್ಜನ್ಮ ಹೊಂದುವನೇ ? ಭೂತವಾಗುವನೇ ? ಇತ್ಯಾದಿ ಪರಿಕಲ್ಪನೆಗಳಿರುವದನ್ನು ಹೇಳುತ್ತ,

**ಈ ಜಗತ್ತು – ಜೀವನ**
**ನಾನು ನೀನಷ್ಟೇ ಸತ್ಯ**
**ಈ ನಗ್ನಸತ್ಯಗಳ ನಡುವೆ**
**ಯಾಕ್ಬೇಕು ಸತ್ತ ಮೇಲಿನ ಗೊಡವೆ** ? ಎಂದು ಪ್ರಶ್ನಿಸುತ್ತಾರೆ.

ಜನರನ್ನು ಭವಿಷ್ಯ ಹೇಳುವವರು ರಾಹುಕಾಲ, ಗುಳಿಕಾಲವೆಂದು ಅಂಜಿಸುತ್ತಾರೆ. ವಾಸ್ತವದಲ್ಲಿ ರಾಹುವೇ ಇಲ್ಲ, ಇನ್ನು ರಾಹುಕಾಲವೆಲ್ಲಿಂದ ಬಂತು ? ಎಂದು ಮಂಜುನಾಥ ‘ರಾಹು ಕಾಲ’ ಎನ್ನುವ ಕವಿತೆಯಲ್ಲಿ ಪ್ರಶ್ನಿಸುತ್ತಾರೆ. ಆಧುನಿಕ ಕಾಲದಲ್ಲಿ ವಾಸ್ತುವಿನ ಹೆಸರಿನಲ್ಲಿ ಅಜ್ಞಾನ ಬಿತ್ತುವ ಪರಿಯನ್ನು ‘ಮೌಢ್ಯ ವಾಸ್ತು’ ಎನ್ನುವ ಕವಿತೆಯಲ್ಲಿ ಬಟಾಬಯಲುಗೊಳಿಸಿದ್ದಾರೆ. ನೆಲವನ್ನು ತೋಡಿ ಗಟ್ಟಿಯಾಗಿದೆಯೇ ? ಇಲ್ಲವೇ ? ಎಂದು ಪರಿಶೀಲಿಸುವುದು ಸರಿ. ಗಾಳಿ ಬೀಸುವ ದಿಕ್ಕಿಗೆ ಕಿಟಕಿ, ಜಾಲಂಧ್ರ ಇರಬೇಕು. ಎಲ್ಲ ಕಟ್ಟಡಗಳೂ ಒಂದೇ ದಿಕ್ಕಿಗೆ ಇರಲು ಸಾಧ್ಯವಾಗುವುದಿಲ್ಲ. ವಾಸ್ತು ಪಂಡಿತರು ಹೇಗಿದ್ದಾರೆಂದರೆ ಭಾರತದ ವಾಸ್ತುವೇ ಸರಿಯಿಲ್ಲವೆನ್ನುತ್ತಾರೆ. ಭಾರತದ ವಾಸ್ತು ಸರಿಯಿಲ್ಲದ್ದರಿಂದ ಬಾಂಬ್ ಸ್ಫೋಟ, ಆಂತರಿಕ ಜಗಳ ಆಗುತ್ತದೆ ಎನ್ನುತ್ತಾರೆ ! ಕೃಷಿ, ವ್ಯಾಪಾರ, ವಿವಾಹ, ಮುಂತಾದ ಚಟುವಟಿಕೆ ನಡೆಯುವಾಗ ಶುಭ ಮುಹೂರ್ತ ನೋಡಬೇಕಂತೆ, ಆದರೆ ಶರಣರು ‘ದಿನವಿಂದೇ ದುರ್ಲಿಖಿತವಂ ತೊಡೆವಂಗೆ’ ಎಂದು ಅವರ ದಿಟ್ಟ ನಿಲುವನ್ನು ಪ್ರಕಟಿಸಿದ್ದಾರೆ.

ಕೆಲವು ಜನ್ಮ ನಕ್ಷತ್ರಗಳು ದೋಷಪೂರಿತವಂತೆ, ಆ ಗಳಿಗೆಯಲ್ಲಿ ಹುಟ್ಟಿದ ಮಗು ಅರಿಷ್ಟವಂತೆ. ದೋಷ ನಿವಾರಣೆಗೆ ಬಂಗಾರ, ಬೆಳ್ಳಿ, ಪಾತ್ರೆ, ಪಡಗ ದಾನ ಮಾಡಿದರೆ ಎಲ್ಲ ಸರಿಹೋಗುತ್ತದಂತೆ. ಪುರೋಹಿತ ಶಾಹಿಯ ಈ ಬಗೆಯ ಶೋಷಣೆ ನಿರಂತರವಾಗಿ ನಡೆದುಕೊಂಡು ಬಂದಿರುವ ಪರಿಯನ್ನು ‘ಜನ್ಮ ನಕ್ಷತ್ರ’ದಲ್ಲಿ ಕವಿ ವಿವರಿಸಿದ್ದಾರೆ. ‘ತರಹೆವಾರಿ ಜಾತಿಗ್ರಹಗಳು’ ಕವಿತೆಯಲ್ಲಿ ಯಾವ ರೀತಿ ಪುರೋಹಿತರು ಗ್ರಹಗಳಿಗೂ ಜಾತಿ ವ್ಯವಸ್ಥೆಯನ್ನು ಜಾರಿಗೊಳಿಸಿದ್ದಾರೆ ಎನ್ನುವದನ್ನು ಮನಗಾಣಬಹುದು. ಅವರ ತಲೆಯಲ್ಲಿ ಹೊಕ್ಕ ಜಾತಿ ಪರಿಕಲ್ಪನೆ

ತೆಗೆಯುವುದಾದರೂ ಹೇಗೆ ? ಜನರ ಜೀವನ ಮಟ್ಟ ಏರುವುದು, ವೈಜ್ಞಾನಿಕವಾಗಿ, ವೈಚಾರಿಕವಾಗಿ ಜನ ಚಿಂತನೆಗೆ ತೊಡಗಿದಾಗ, ಮಾನವನೊಂದೇ ಎಂಬ ಪರಿಕಲ್ಪನೆ ಮೂಡಿದಾಗ ಮಾತ್ರ ಸಾಧ್ಯ.

'ಮೂರು ಹೆಣ್ಣಿನ ನಂತರ ಗಂಡಾದರೆ ಮುತ್ತು, ಅದೇ ಮೂರು ಗಂಡಿನ ನಂತರ ಹೆಣ್ಣಾದರೆ ಕುತ್ತು' – ಹೀಗೆ ಹೇಳಿದ ಜ್ಯೋತಿಷಿಗಳು ಭಯ ಹುಟ್ಟಿಸಿ ಹೊಸ ಗಡಿಗೆ ಒಡೆದರೆ ದೋಷ ಪರಿಹಾರವಾಗುವುದೆಂಬ ಅತಾರ್ಕಿಕ ಸಂಗತಿಯನ್ನು 'ತ್ರಿಕ ದೋಷ' ಕವಿತೆಯಲ್ಲಿ ಸಾಧಾರಣ ಆಡುಮಾತುಗಳಲ್ಲಿ ಪ್ರಸ್ತುತಪಡಿಸಲಾಗಿದೆ. ಹೆಣ್ಣಾದ ನಂತರ ಗಂಡು ಹುಟ್ಟಿದರೇನು ? ಗಂಡಾದ ನಂತರ ಹೆಣ್ಣು ಹುಟ್ಟಿದರೇನು ? ನಿಸರ್ಗ ನಿಯಮ ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. ಜನರ ಭಯ, ಅಜ್ಞಾನವೇ ಜ್ಯೋತಿಷಿಗಳ ಬಂಡವಾಳ. ಹೆಣ್ಣಾದರೇನು ? ಗಂಡಾದರೇನು ? ಕುಟುಂಬಕ್ಕೆ ಒಂದೇ ಮಗು ಸಾಕೆನ್ನುವ ಇಂದಿನ ದಿನಮಾನಗಳಲ್ಲಿ ಇವೆಲ್ಲ ಅಪ್ರಸ್ತುತವಾಗಿ ನಿಲ್ಲುವವು.

ಚಾರ್ವಾಕವಾದ ಪ್ರಾಚೀನ ವೈಜ್ಞಾನಿಕ ಭೌತವಾದ. ಸ್ವರ್ಗ, ನರಕ, ಪರಲೋಕ, ಪುನರ್ಜನ್ಮ, ದೇವರನ್ನೊಪ್ಪದ ವಾದ. ಅದನ್ನು ಲೋಕಾಯತವೆಂತಲೂ ಕರೆಯುತ್ತಾರೆ. ಚಾರುವಾಕ್ ಅಂದರೆ ಸೊಗಸಾಗಿ ಮಾತಾಡುವವರು, ಚೆನ್ನಾಗಿ ವೈಜ್ಞಾನಿಕವಾಗಿ ವಾದ ಹೂಡುವವರೆಂದರ್ಥ. ಅಂಥ ವಾದವನ್ನು ನಾಶಮಾಡಿದ್ದರಿಂದ ಭಾರತ ಕರ್ಮ ಸಿದ್ಧಾಂತಕ್ಕೆ ಜೋತು ಬಿದ್ದು, ವಿಧಿವಾದ, ಪರಲೋಕಗಳಾದ ಸ್ವರ್ಗ, ನರಕಗಳ ಪರಿಕಲ್ಪನೆ ಹೊಂದಿ, ಕೋಟಿ ರೂ.ಗಳನ್ನು, ಕೋಟಿ ದೇವರನ್ನು ಪೂಜಿಸಿ ಎಲ್ಲಿದ್ದಾರೋ ಅಲ್ಲಿಯೇ ಇದ್ದಾರೆ ಭಾರತೀಯರು. ಭಾರತೀಯ ಭವ್ಯ ಪರಂಪರೆಯನ್ನು ಅನಾವರಣಗೊಳಿಸುವ, ಇಂದಿನ ವೈಚಾರಿಕ ಪೀಳಿಗೆಗೆ ಯೋಗ್ಯ ಮಾರ್ಗದರ್ಶನ ನೀಡುವ 'ಚಾರ್ವಾಕವಾದ' ಎನ್ನುವ ಕವಿತೆ ರಚಿಸಿರುವುದು ಅತ್ಯಂತ ಪ್ರಸ್ತುತವಾಗಿದೆ.

ಮಾಟ–ಮಂತ್ರಕ್ಕೆ, ತೆಗೆದಿರಿಸುವುದಕ್ಕೆ, ಅತಿಥಿಗಳಿಗೆ, ನವ ವಿವಾಹಿತರ ಕೈಗಳಿಗೆ, ದೆವ್ವ ಬಿಡಿಸಲು ಲಿಂಬೇಹಣ್ಣು ಬೇಕು. ಖರೇ ಅಂದರೆ 'ಸಿ' ವಿಟಮಿನ್ ಪುಷ್ಕಳವಾಗಿರುವ ಲಿಂಬೆಹಣ್ಣು ಚಿತ್ರಾನ್ನ, ಪಲಾವ್, ವಗ್ಗರಣೆ, ಶರಬತ್, ಕಬ್ಬಿನ ಹಾಲಿಗೆ ಹಿಂಡಿದರೆ ಅದರ ಸೊಗಸೇ ಬೇರೆ. ಮೂಢನಂಬಿಕೆಯಿಂದ ವೈಜ್ಞಾನಿಕತೆಯ ಕಡೆಗೆ 'ನಿಂಬೆಹಣ್ಣು' ಕವಿತೆಯಲ್ಲಿ ಕರೆದೊಯ್ಯುತ್ತಾರೆ ಮಂಜುನಾಥ. ಇತ್ತೀಚೆಗೆ ಇಂತಿಂಥ ರಾಶಿಯವರು ಇಂತಿಂಥ ಬಣ್ಣದ ಹರಳು ಬಳಸಬೇಕೆಂದು ಹೇಳುವವರು ಹುಟ್ಟಿಕೊಂಡು ಹರಳುಗಳ, ವಜ್ರಗಳ ವ್ಯಾಪಾರ ಜೋರಾಗಿದೆ. 'ರಾಶಿಯ ಹರಳು' ಕವಿತೆಯಲ್ಲಿ ಜ್ಯೋತಿಷಿಯ ವ್ಯಾಪಾರಿ ಬುದ್ಧಿಯನ್ನು ಗುರುತಿಸಲಾಗಿದೆ. 'ಹಸ್ತ ಪುರಾಣ'ದಲ್ಲಿ ಸಹಜವಾಗಿ ತಾಯ ಗರ್ಭದಲ್ಲಿರುವಾಗ ಕೈಮಡಚಿ ಇರುವುದರಿಂದ ರೇಖೆಗಳು ಮೂಡುತ್ತವೆ. ಅದನ್ನೇ ಬಂಡವಾಳ ಮಾಡಿಕೊಂಡು ಭವಿಷ್ಯಕಾರರು ಬದುಕುತ್ತಾರೆ. ಜನರನ್ನು ಮೌಢ್ಯಕ್ಕೆ ತಳ್ಳುತ್ತಾರೆ. ಅಮಾವಾಸ್ಯೆಯ ರಾತ್ರಿಯೂ ಮಾಟ ಮಂತ್ರಗಾರರಿಗೆ ಹೇಗೆ ಶೋಷಣೆಯ ಸಾಧನವಾಗಿದೆ ಎಂದು 'ಅಮಾವಾಸ್ಯೆಯ ರಾತ್ರಿ' ಕವನದಲ್ಲಿ ಮನೋಜ್ಞವಾಗಿ ಚಿತ್ರಿಸಲಾಗಿದೆ.

ಹಾವು ಹಾಲು ಕುಡಿಯುವುದಿಲ್ಲವೆಂದರೂ ಜನ ಕೇಳುವುದಿಲ್ಲ. ಹುಳು ಹುಪ್ಪಡಿ, ಇಲಿ, ಕಪ್ಪೆ ಮುಂತಾದವು ಹಾವಿನ ಆಹಾರ. ಪುಂಗಿಯ ನಾದವೂ ಅದಕ್ಕೆ ಕೇಳುವುದಿಲ್ಲ. ಏಳು ಹೆಡೆಯ ಸರ್ಪ ಮನುಷ್ಯನ ಕಲ್ಪನೆಯೆಂಬುದನ್ನು 'ನಮ್ಮ ನಾಗಪ್ಪ' ಪದ್ಯದಲ್ಲಿ ಹೇಳಲಾಗಿದೆ. ಹಾವಿನ ಕುರಿತಾದ ನೈಜವಾದ ವೈಜ್ಞಾನಿಕ ಮಾಹಿತಿಯನ್ನು ಈ ಕವಿತೆಯಲ್ಲಿ ಉಣಬಡಿಸಲಾಗಿದೆ. 'ಹಲ್ಲಿ ಶಕುನ'ದಲ್ಲಿ ದೇಹದ ಒಂದೊಂದು ಭಾಗದ ಮೇಲೆ ಹಲ್ಲಿ ಬಿದ್ದರೆ ಒಂದೊಂದು ಬಗೆಯ ಫಲ, ದೋಷಗಳು. ಹಲ್ಲಿ ಶಕುನವಿರುವಂತೆ ಜಿರಲೆ ಶಾಸ್ತ್ರ, ಸೊಳ್ಳೆ ಶಾಸ್ತ್ರ, ತಿಗಣಿ ಶಾಸ್ತ್ರಗಳಿರಬೇಕೇನೊ. ನಮ್ಮ ಜನ ಸ್ವಂತ ಬುದ್ಧಿ ಉಪಯೋಗಿಸುವವರೆಗೆ ಇದೇ ಗತಿ ಎಂದು ಕವಿ ಚಿಂತಿಸುತ್ತಾರೆ.

ನಿತ್ಯಾನಂದ, ಅಸಾರಾಮ್ ಬಾಪು ಮುಂತಾದವರು ದೇವಮಾನವರೆಂದು ಕರೆಸಿಕೊಂಡು ಮೆರೆಯಲಿಕ್ಕೆ ಜನರ ಮೌಢ್ಯವೇ ಕಾರಣ. 'ದೇವ ಮಾನವರು ಬಂದ್ರು' ಕವಿತೆಯಲ್ಲಿ 'ದೇವ ಮಾನವರು ಬಂದ್ರು / ಎಳೆದಾಡಿ ನಾಲ್ಕು ಬಿಡಿ ನಾಲ್ಕು ಬಿಡಿ !' ಎನ್ನುವುದು ಇಂದಿನ ಸಂದರ್ಭದಲ್ಲಿ ಅತಿಯಾದ ಮಾತುಗಳೇನಲ್ಲ. 'ಜ್ಯೋತಿರಜ್ಞಾನ'ದಲ್ಲಿ ಜ್ಯೋತಿಷ್ಯ ಮತ್ತು ವಿಜ್ಞಾನವನ್ನು ಮುಖಾಮುಖಿ ಮಾಡಿ ಖಚಿತ ಜ್ಞಾನವುಳ್ಳ ವಿಜ್ಞಾನವೇ ಶ್ರೇಷ್ಠವೆಂದು ಪ್ರತಿಪಾದಿಸುತ್ತಾರೆ ಮಂಜುನಾಥ. ಜ್ಯೋತಿಷ್ಯವನ್ನು ಶಾಸ್ತ್ರವೆನ್ನುತ್ತಾರೆ !? ಶಾಸ್ತ್ರದಲ್ಲಿ ಖಚಿತತೆ ಇರುತ್ತದೆ. ಆದರೆ ೨೦೧೨ ಪ್ರಳಯ ವಾಗುತ್ತದೆಂದು ಬಹುಪಾಲು ಜ್ಯೋತಿಷಿಗಳು ಭವಿಷ್ಯ ನುಡಿದು ಬೊಬ್ಬೆ ಹಾಕಿದ್ದನ್ನು ಇಲ್ಲಿ ಸ್ಮರಿಸಬಹುದು. ಅಷ್ಟಕ್ಕೂ ಪ್ರಳಯ ಸಂಭವಿಸಿತೇ ?

'ಹರಕೆಯ ಆಮಿಷ' ಎನ್ನುವ ಕವಿತೆಯಲ್ಲಿ, ಭಕ್ತ ಸಮೂಹವು ಹೇಗೆ ದೇವರಿಗೆ ವಿಧವಿಧವಾದ ಆಮಿಷಗಳನ್ನು ಒಡ್ಡುತ್ತದೆ ಎಂದು ಸೋದಾಹರಣವಾಗಿ ನಿರೂಪಿಸಲಾಗಿದೆ. ಲಾಭವಾದರೆ ಆಗಲಿ, ಇಲ್ಲದಿದ್ದರೆ ದೇವರಿಗೆ ಬಿಟ್ಟ ಹರಕೆಯ ಕುರಿ ತಿಂದರಾಯ್ತು. ದೇವರಿಗೆ ನೈವೇದ್ಯ ಅರ್ಪಿಸುವುದು, ದೇವರ ಹೆಸರಿನಲ್ಲಿ ಭೂರಿ ಭೋಜನ ಮಾಡುವುದು. ದೇವರಿಗೆ ಸೀರೆ, ವಸ್ತ್ರ ಏರಿಸುವುದು ತಾವೇ ಉಟ್ಟು ಹರಿಯುವುದು ವಾಸ್ತವ. ನಮ್ಮ ಜನರು ಹೇಳುವುದು ಅಧ್ಯಾತ್ಮ, ಆದರೆ ಐಹಿಕ ಸುಖದಲ್ಲಿ ತೇಲಾಡು ತ್ತಾರೆಂಬುದನ್ನು ಮಂಜುನಾಥ ಗುರುತಿಸುತ್ತಾರೆ. 'ಜಾತಿಗೊಂದು ಸ್ಮಶಾನ'ದಲ್ಲಿ ಸತ್ತರೂ ಜಾತಿ ಬಿಡದ ಪರಿ ನಮ್ಮಲ್ಲಿ ಗುರುತಿಸಿ, ಇದಕ್ಕೆ ವೈಚಾರಿಕ ಛಡಿ ಏಟಿನ ಮದ್ದೇ ಸರಿಯೆನ್ನುತ್ತಾರೆ.

'ಮತಾಂತರ – ಪಕ್ಷಾಂತರ'ದಲ್ಲಿ ಮತಾಂತರ ವ್ಯಕ್ತಿಯ ತೀರಾ ವೈಯಕ್ತಿಕ ವಿಷಯ. ಪಕ್ಷಾಂತರ ಸಾಮಾಜಿಕ, ರಾಜಕೀಯ ವಿಷಯವೆನ್ನುತ್ತಾರೆ. ಸ್ವಯಂಪ್ರೇರಣೆಯಿಂದ ಮತಾಂತರಗೊಳ್ಳಬಹುದು. ಅದನ್ನೂ ಮೂಲಭೂತವಾದಿಗಳು ತಡೆಯುತ್ತಿದ್ದಾರೆ. ಅಸ್ಪೃಶ್ಯತೆಯನ್ನು ತಡೆಯುತ್ತಿಲ್ಲ. ಅಸಮಾನತೆಯನ್ನು ವಿರೋಧಿಸುತ್ತಿಲ್ಲ. ಅಲ್ಪಸಂಖ್ಯಾತರನ್ನು ಅನುಮಾನದಿಂದ ನೋಡುತ್ತಾರೆ. ದಲಿತರ ಓಣಿಗೆ ಹೋಗಿ ಪಾದಪೂಜೆ ಮಾಡಿಸಿಕೊಂಡು ಬರುವುದನ್ನೇ ಕ್ರಾಂತಿಯೆಂದು ಭಾವಿಸುವವರಿದ್ದಾರೆ ! ದಲಿತ ಸ್ವಾಮಿಗಳು ಬ್ರಾಹ್ಮಣ ಕೇರಿಗೆ ಹೋಗಿ ಪೂಜೆ ಮಾಡಿಸಿಕೊಂಡು ಬಂದರು. ಸಹಭೋಜನವನ್ನು ವಿರೋಧಿಸುವ ಪೇಜಾವರ ಸ್ವಾಮಿಗಳು, ಮಡೆಸ್ನಾನವನ್ನು ಬೆಂಬಲಿಸುತ್ತಾರೆ. ಇಂಥ ಸನ್ನಿವೇಶದಲ್ಲಿ ಸ್ವಾಭಿಮಾನಿಗಳು ಮತಾಂತರ ಮಾಡುತ್ತಾರೆ. ಸಮಾನತೆಯಿಲ್ಲದಿರುವುದೇ ಮತಾಂತರಕ್ಕೆ ಕಾರಣ.

'ನಾವೇ ಸೃಷ್ಟಿಸಿದ ದೇವರು' ಕವಿತೆಯಲ್ಲಿ ದೇವರು ಮನುಷ್ಯನ ಸೃಷ್ಟಿ ಎನ್ನಲಾಗಿದೆ. ದೇವರು ಮನುಷ್ಯರನ್ನು ಸೃಷ್ಟಿಸಿದ್ದಾನೆಂಬುದು ಲೋಕ ರೂಢಿ. ಜನಸಾಮಾನ್ಯರಿಗೆ ಹೊಟ್ಟೆ ತುಂಬಿಸಿಕೊಳ್ಳುವುದೇ ಕಷ್ಟವಾಗಿರುವಾಗ ದೇವರು, ಧರ್ಮದ ಬಗ್ಗೆ ಆಳವಾದ ಚಿಂತನೆ ಅವರಿಂದ ಸಾಧ್ಯವಿಲ್ಲ. ತಮಗಿಂತ ಮೇಲಿನವರನ್ನು ಈ ವಿಷಯದಲ್ಲಿ ಅನುಸರಿಸುತ್ತಾರೆ, ಅಷ್ಟೆ. 'ಜೀವನ ಜಯಶಾಲಿ'ಯಲ್ಲಿ ನಮ್ಮ ಸಂಪ್ರದಾಯವನ್ನು ಪ್ರಶ್ನಿಸದೆ ಪರಿಪಾಲಿಸುವವನ್ನು ಧರ್ಮವಂತನೆಂದು ಗುರುತಿಸಲಾಗುತ್ತದೆ. ಪ್ರಶ್ನಿಸುವ ವರನ್ನು ಅಪಮಾನಗೊಳಿಸಲಾಗುತ್ತದೆ.

**ಪ್ರಶ್ನಿಸಿ–ತರ್ಕಿಸಿ**
**ವೈಚಾರಿಕ ಪ್ರಜ್ಞೆಯಲಿ**
**ಮನಸೊಪ್ಪಿದ ಋಜುಮಾರ್ಗದಲಿ**
**ಜೀವನ ನಡೆಸುವಾತನೇ**
**ನಿಜವಾದ ಜೀವನ ಜಯಶಾಲಿ !**

ಇಡೀ ಸಂಕಲನದ ಹಿಂದೆ ಕೆಲಸ ಮಾಡಿರುವ ಮನೋಧರ್ಮ ಯಾವುದು ಎಂಬುದು 'ವೈಜ್ಞಾನಿಕತೆ' ಎಂಬ ಕಿರುಗವಿತೆಯಲ್ಲಿದೆ. ವೈಜ್ಞಾನಿಕ, ವೈಚಾರಿಕ ಕೆಲಸ ಮಾಡುವದು ಸರಳ ಕೆಲಸವಲ್ಲ. ಸತ್ಯ ಶೋಧನೆಗೆ ಪ್ರಚೋದಿಸಿದ ಸಾಕ್ರೆಟಿಸನಿಗೆ ವಿಷ ಕುಡಿಸಲಾಯ್ತು.



ಯಂತ್ರೋಪಕರಣಗಳ ಶೋಧಕ ಆರ್ಕಿಮಿಡಿಸ್ ಖಡ್ಗಛೇದನಕ್ಕೊಳಗಾಗಬೇಕಾಯ್ತು. ಕೋಪರ್ನಿಕಸ್ ವಾದವನ್ನು ಪ್ರಚುರಪಡಿಸಿದ ಬ್ರೂನೋನನ್ನು ಜೀವಂತವಾಗಿ ಸುಟ್ಟ ದಾರುಣ ಘಟನೆಗಳನ್ನು 'ಅಜರಾಮರರು' ಎನ್ನುವ ಕವನದಲ್ಲಿ ನೋವಿನಿಂದ ದಾಖಲಿಸಲಾಗಿದೆ. ಸಿರಿಗೆರೆಯ ಹಿಂದಿನ ಸ್ವಾಮಿಗಳ ಬಗ್ಗೆ 'ಚುನಾವಣಾ ಜಗದ್ಗುರು' ಎಂಬ ಕಾದಂಬರಿಯನ್ನು ಅನೇಕ ಲೇಖಕರು ಕೂಡಿ ಬರೆದು 'ಗರಗಸ' ಹೆಸರಿನಲ್ಲಿ ಪ್ರಕಟಿಸಲಾಯ್ತು. ಖ್ಯಾತ ಕಾದಂಬರಿಕಾರ ಬಸವರಾಜ ಕಟ್ಟೀಮನಿಯವರನ್ನು, ಈ ಹಿನ್ನೆಲೆಯಲ್ಲಿ ಗುಂಡಿಟ್ಟು ಕೊಲ್ಲಲು ಪ್ರಯತ್ನಿಸಲಾಯ್ತು. ರಾಜೀವ್ ಗಾಂಧಿ ಸರಕಾರವನ್ನು ವಿಡಂಬಿಸುವ ನಾಟಕವಾಡಿದ್ದಕ್ಕಾಗಿ ಸಫ್ದರ್ ಹಶ್ಮಿಯವರನ್ನು ಹಾಡುಹಗಲೇ ಕೊಲ್ಲಲಾಯ್ತು. ಕುದುರೆ ಮೋತಿ ಸ್ವಾಮಿಯ ಬಗ್ಗೆ ಹೋರಾಟ ಮಾಡಿದಾಗ ನನ್ನನ್ನು ಕೊಲ್ಲುವದಾಗಿ ಬೆದರಿಕೆ ಪತ್ರಗಳು ಬಂದವು. 'ಆಯ್ದ ಕವನಗಳು' ಸಂಕಲನ ಡಾ॥ ಬಸವರಾಜ ಸಬರದ ಸಂಪಾದಿಸಿದ್ದರು. ಅದರಲ್ಲಿ ನನ್ನ ಆಯ್ದ ಕವಿತೆ 'ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು' ಪ್ರಕಟವಾಗಿತ್ತು. ಬಾಬ್ರಿ ಮಸೀದಿ ಕೆಡವಿದ ಹಿನ್ನೆಲೆಯಲ್ಲಿ ಬರೆದ ಕವಿತೆ. ಆಗಲೂ ಬೆದರಿಕೆಯ ಪತ್ರಗಳು ಬಂದವು. 'ಬಸವ ಮಾರ್ಗ'ದ ಸಂಪಾದಕ, ಪತ್ರಕರ್ತ, ವೈಚಾರಿಕ ಲೇಖಕ ಲಿಂಗಣ್ಣ ಸತ್ಯಂಪೇಟೆಯವರ ಸಂಶಯಾಸ್ಪದ ಸಾವು, ನರೇಂದ್ರ ದಾಭೋಲ್ಕರ್, ಗೋವಿಂದ ಪಾನ್ಸರೆ ಮತ್ತು ಡಾ॥ ಎಂ. ಎಂ. ಕಲಬುರ್ಗಿ ಅವರ ಕಗ್ಗೊಲೆಗಳು, ಕೋಮುವಾದಿಗಳ ದೌರ್ಜನ್ಯಕ್ಕೆ ಜ್ವಲಂತ ಸಾಕ್ಷಿಯಾಗಿವೆ ! ಮಂಜುನಾಥರು ಹೇಳಿದಂತೆ ದೈಹಿಕವಾಗಿ ಈ ಮಹನೀಯರು ಇಲ್ಲದಿದ್ದರೂ ಜನಮಾನಸದಲ್ಲಿ ಮಾತ್ರ ಯಾವತ್ತಿಗೂ ಅವರು ಅಜರಾಮರರು.

ಎಸ್. ಮಂಜುನಾಥ ಅವರ 'ವೈಚಾರಿಕ ಕವನಗಳು' ಕೃತಿ ಮೂರು ಮುದ್ರಣಗಳನ್ನು ಕಂಡಿದೆ. ವೈಜ್ಞಾನಿಕ, ವೈಚಾರಿಕ ವಿಷಯಗಳನ್ನು ಕಾವ್ಯ ಮಾಡಲು ಹೊರಡುವಾಗ ಕಾವ್ಯಾಂಶದ ಪ್ರಶ್ನೆ ಉದ್ಭವವಾಗುತ್ತದೆ. ಕೇಶಿರಾಜ ಮತ್ತಿತರ ವ್ಯಾಕರಣಕಾರರು ವ್ಯಾಕರಣವನ್ನು ಪದ್ಯದಲ್ಲೇಕೆ ಬರೆದರು ? ಗದ್ಯದಲ್ಲಿ ಬರೆಯಬಹುದಾಗಿತ್ತಲ್ಲ ? ಅದಕ್ಕೆ ಉತ್ತರ ಹೇಳುವದು ಕಷ್ಟ. ಹಳೆಗನ್ನಡ, ನಡುಗನ್ನಡದ ಬಹುತೇಕ ಸಾಹಿತ್ಯ ಪದ್ಯ ಸಾಹಿತ್ಯವೆ. ಹೀಗಾಗಿ ಅವರು ವ್ಯಾಕರಣವನ್ನು ಪದ್ಯದಲ್ಲಿ ಬರೆದಿರಬಹುದು. ಪದ್ಯದಲ್ಲಿ ಹೇಳಿದ್ದು ನೆನಪಿನಲ್ಲಿ ಉಳಿಯಬಹುದು ಎಂಬುದೂ ಒಂದು ಕಾರಣವಾಗಿರಬಹುದು. ಅದೇನೇ ಇರಲಿ, ಇನ್ನೂ ತರುಣರಾಗಿರುವ ಮಂಜುನಾಥ ಅವರಿಂದ ಇನ್ನೂ ಉತ್ತಮ ಕೃತಿಗಳು, ವೈಚಾರಿಕ ಕೃತಿಗಳು ಬರಲಿ.

**ಅಲ್ಲಮಪ್ರಭು ಬೆಟ್ಟದೂರು**
ನಿವೃತ್ತ ಪ್ರಿನ್ಸಿಪಾಲ್, 'ಅಮರಚೇತನ', ಕಲ್ಯಾಣನಗರ
ಕಿನ್ನಾಳ ರಸ್ತೆ, ಕೊಪ್ಪಳ – ೫೮೩ ೨೩೧

# ಮಂಜಿನೆಡೆಯ ಚಿತ್ರಗಳು

## (ಅನುಭವ ಕಥನ)




ಲೇಖಕರು : **ಪರಂಜ್ಯೋತಿ**
ಪುಟ : ೨೩೨ ಬೆಲೆ : ೧೫೦
ಪ್ರಕಾಶಕರು
**ಇಂಚರ ಪ್ರಕಾಶನ**, ಬೆಂಗಳೂರು – ೫೬೦ ೦೫೮

**ಒ**ಟ್ಟು ೫೦ ವರ್ಷಗಳ ತಮ್ಮ ಸಾಹಿತ್ಯ / ಪತ್ರಿಕೋದ್ಯಮ ಒಡನಾಟದ ಅವಧಿಯಲ್ಲಿ ಊಟಿ, ಮದ್ರಾಸು, ಮಂಗಳೂರು, ಪುತ್ತೂರು ಮತ್ತು ಬೆಂಗಳೂರುಗಳಲ್ಲಿ ಲೆಕ್ಕವಿಲ್ಲದಷ್ಟು ಸಂಸ್ಥೆಗಳಲ್ಲಿ ಆನೆ ನಡೆದಿದ್ದೆ ದಾರಿ ಎನ್ನುವಂತೆ ಮನಬಂದಂತೆ, ಕೆಲಸ ಮಾಡುತ್ತಾ ಬದುಕಿನ ಬಗ್ಗೆ ಹಿಂದೆ ಮುಂದೆ ಆಲೋಚನೆ ಮಾಡದೆ ಎಷ್ಟೋ ಕೆಲಸಗಳನ್ನು ಲೀಲಾಜಾಲವಾಗಿ ಬಿಟ್ಟು ಮುಂದಕ್ಕೆ ಹೋಗಿದ್ದಾರೆ.

ಈಗ ಅವರ ಅನುಭವ ಕಥನ 'ಮಂಜಿನೆಡೆಯ ಚಿತ್ರಗಳು'ದಲ್ಲಿ ಮುಖ್ಯವಾಗಿ ಏನಿದೆ ಎಂಬುದನ್ನು ಸ್ವಲ್ಪ ಇಣಿಕಿ ನೋಡೋಣ : ಇಲ್ಲಿ ಒಟ್ಟು ೨೧ ಚಿತ್ರಣಗಳಿದ್ದು ನಾನು ಅವುಗಳನ್ನು 'ದೃಶ್ಯ ಚಿತ್ರಣ'ಗಳೆಂದೇ ಕರೆಯುತ್ತೇನೆ. ಕಾರಣ ಎಲ್ಲ ಚಿತ್ರಗಳನ್ನು ಅವರು ತಮ್ಮ ಹೃದಯಲ್ಲಿ ತುಂಬಿಕೊಂಡಂತೆ ಚಿತ್ರಿಸಿರುವುದು ಕಂಡುಬರುತ್ತದೆ. ಬಹುಶಃ ಅವರು ಪ್ರತಿಯೊಂದನ್ನು ಬಹಳ ಒಪ್ಪಓರಣವಾಗಿ ಬರೆದಿಟ್ಟುಕೊಂಡಂತೆ ಚಿತ್ರಿಸಿರುವುದು ಕಂಡುಬರುತ್ತದೆ. ಅವರ ನೆನಪಿನ ಶಕ್ತಿ ಎಷ್ಟು ತೀವ್ರವಾಗಿದೆ ಎಂದರೆ, ಅವರ ಮನೆಯ ವರಾಂಡಾದಲ್ಲಿ ಎಲ್ಲಾ ಕಾಲದಲ್ಲೂ ಚಳಿಗೆ ಬೆಂಕಿತೊಟ್ಟಿ / ಅಗ್ಗಿಷ್ಟಿಕೆ ಉರಿಯುತ್ತಿದ್ದು, ಅದರ ಸುತ್ತಲೂ ಒಂದು ಒಡ್ಡೋಲಗವೇ ನಡೆಯುತ್ತಿರುತ್ತದೆ. ಇಲ್ಲಿ ನಡೆಯುವ ಪ್ರತಿಯೊಂದು ವಿಷಯವನ್ನು ಲೇಖಕರು ಯಾವ ರೀತಿ ವಿವರಿಸುತ್ತಾರೆಂದರೆ, ನಂತರದ ಅಧ್ಯಾಯಗಳಲ್ಲೂ ಈ ಒಡ್ಡೋಲಗ ಕಾಣಿಸಿಕೊಂಡಿದ್ದರೆ ಚೆನ್ನಾಗಿತ್ತಲ್ಲ ಎನ್ನಿಸುತ್ತದೆ. ಅವರು ನೀಡುವ ವಿವರಗಳು ಈ ಕ್ಷಣದಲ್ಲೆ ನಡೆದಂತೆ, ಕಣ್ಣಿಗೆ ಕಟ್ಟಿದಂತೆ, ನೀವೂ ಅಲ್ಲಿರುವಂತೆ ಭಾಸವಾಗುತ್ತದೆ. ಅವರು ಬಳಸುವ ಕನ್ನಡ ಭಾಷೆಯೂ ಸೊಗಸಾಗಿದ್ದು, ಅಲ್ಲಲ್ಲಿ ಬರುವ ನವಿರಾದ ಹಾಸ್ಯ ಓದುಗರನ್ನು ನಕ್ಕು ನಗಿಸುತ್ತದೆ. ಅಮ್ಮಿಗಲ್, ಹುಲಿವೇಷದ ಪುಟ್ಟ, ಸಾವಿನ ದವಡೆಯಲ್ಲಿ, 'ಬೂಸಿ' ಬೆಟ್ಟ, ಸಜ್ಜೆ ಮನೆಗೆ ಹುಲಿ ಹೊಕ್ಕಿದ್ದು, ಮೋಟಾರ್ ಪುರಾಣ ಇತ್ಯಾದಿ ಹೆಸರುಗಳ ಚಿತ್ರಣಗಳಿವೆ.

ಪರಂಜ್ಯೋತಿಯವರು ಊಟಿ/ಭವಾನಿ ಅಣೆಕಟ್ಟೆ ಯೋಜನೆಗಳಲ್ಲಿ ಕೆಲಸ ಮಾಡುತ್ತಿದ್ದಾಗ ಪತ್ರಿಕೆಗಳ ಜೊತೆಗೆ ಸಂಬಂಧ ಬೆಳೆಸಿಕೊಂಡು ಪತ್ರಿಕೆಗಳ ಏಜಂಟಾಗಿ, ಕತೆ ಕವನ ನಾಟಕಗಳನ್ನು ಬರೆದು ಆಡುತ್ತ, ಆಡಿಸುತ್ತಾ ಅಲ್ಲಿಂದ ಹೊರಕ್ಕೆ ಬಂದು ಇಡೀ ಜೀವನವನ್ನು ಕನ್ನಡ ಪತ್ರಿಕೆಗಳೊಂದಿಗೆ ಬೆಸೆದುಕೊಂಡವರು. ಈ ದೀರ್ಘ ಕಾಲದ ಅವಧಿಯಲ್ಲಿ ತಮ್ಮದೇ ಆದ ಇಂಚರ ಪ್ರಕಾಶನವನ್ನು ಸ್ಥಾಪಿಸಿಕೊಂಡು ಕನ್ನಡ ಪುಸ್ತಕಗಳ ಸೇವೆಯಲ್ಲಿ ತೊಡಗಿಕೊಂಡು ೩ ಕಥಾಸಂಕಲನಗಳು, ೨ ಪ್ರಬಂಧಗಳು, ೩ ಕಾದಂಬರಿಗಳು, ೧ ಪ್ರವಾಸ ಕಥನ, ೨ ನೀಳ್ಗತೆಗಳು, ೨ ವಿಮರ್ಶೆಗಳು ಮತ್ತು ೮ ಮಕ್ಕಳ ಕಥೆಗಳನ್ನು (೧ರಲ್ಲಿ ೫೦೦೦ ಕಥೆಗಳು) ಪ್ರಕಟಿಸಿದ್ದಾರೆ. ಇನ್ನು ಪತ್ರಿಕೆಗಳಲ್ಲಿ ಅನುವಾದಿಸಿದ, ಬರೆದ ಲೇಖನಗಳೆಷ್ಟೋ ? ಲೆಕ್ಕವಿಲ್ಲ.

ಒಟ್ಟಿನಲ್ಲಿ 'ಮಂಜಿನೆಡೆಯ ಚಿತ್ರಗಳು' ಬಹಳ ಸ್ವಾರಸ್ಯಕರವಾದ ಕೃತಿ ಎನ್ನುವುದರಲ್ಲಿ ಎರಡು ಮಾತಿಲ್ಲ. ಆತ್ಮಕತೆ/ಅನುಭವ ಕಥನ/ಜೀವನ ಚರಿತ್ರೆಗಳನ್ನು ಬರೆಯುವವರು ಒಮ್ಮೆ ಓದಬೇಕಾದ ಪುಸ್ತಕ ಇದು. ಇಷ್ಟೆಲ್ಲ ಸ್ವಾರಸ್ಯಕರವಾಗಿರುವ ಈ ಕೃತಿಯಲ್ಲಿ ಅವರ ೨೫ ವರ್ಷಗಳ ಬೆಂಗಳೂರಿನ ಅನುಭವಗಳೇನೂ ಇಲ್ಲ. ಇದನ್ನೆಲ್ಲ ಮತ್ತೊಮ್ಮೆ ಅವಕಾಶ ಸಿಕ್ಕಾಗ ಬರೆಯುತ್ತೇನೆ ಎಂದು ೨೦೧೧ರಲ್ಲಿ ಓದುಗರಿಗೆ ಭರವಸೆ ನೀಡಿ ಕೈ ಬಿಟ್ಟಿದ್ದಾರೆ, ಬಿಟ್ಟುಬಿಟ್ಟಿದ್ದಾರೋ ? ಅಥವಾ ಈಗ ಅದೇ ಕೆಲಸದಲ್ಲಿ ತೊಡಗಿದ್ದಾರೋ ಗೊತ್ತಿಲ್ಲ ! ಈಗಿನ ಕಾಲದಲ್ಲಿ ಸ್ನಾತಕೋತ್ತರ ಮತ್ತು ಪಿಎಚ್.ಡಿ. ಡಿಗ್ರಿಗಳನ್ನು ಗಳಿಸಿಕೊಂಡ ಎಷ್ಟೋ ಮಹಾನುಭಾವರು ಕನ್ನಡ ಪತ್ರಿಕೆ, ಪುಸ್ತಕಗಳನ್ನು ಓದುವ ಹವ್ಯಾಸ ಇಟ್ಟುಕೊಂಡಿಲ್ಲ. ಆ ಕಾಲದಲ್ಲಿ ಪರಂಜ್ಯೋತಿಯವರು ಕೇವಲ ಹೈಸ್ಕೂಲ್‌ವರೆಗೂ ವಿದ್ಯಾಭ್ಯಾಸ ಮಾಡಿ ಕನ್ನಡಕ್ಕೆ ಮಾಡಿರುವ ಸೇವೆ ಶ್ಲಾಘನೀಯ. ನಿಜವಾಗಿಯೂ ಅವರು ಕನ್ನಡದ ಪರಂಜ್ಯೋತಿಯೇ ಸರಿ.

**ಡಾ॥ ಎಂ. ವೆಂಕಟಸ್ವಾಮಿ**
ಭೂವಿಜ್ಞಾನಿ, ನಂ. ೫೧೯, ೩೯ನೇ ಬ್ಲಾಕ್
ಸಿಪಿಡಬ್ಲ್ಯೂಡಿ ಕ್ವಾರ್ಟರ್ಸ್
ಎಚ್.ಎಸ್.ಆರ್. ಲೇಔಟ್, ಬೆಂಗಳೂರು – ೫೬೦ ೧೦೨









# ಭರವಸೆಯ ಯುವ ಪ್ರತಿಭೆ ಶಿವಾನಂದ ಬಸವಂತಪ್ಪ





ಮೂಲತಃ ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನವರಾದ ಶಿವಾನಂದ ಬಸವಂತಪ್ಪ ಬಾಲ್ಯದಿಂದಲೇ ಚಿತ್ರಕಲೆಯನ್ನು ಮೈಗೂಡಿಸಿಕೊಂಡು ಧಾರವಾಡ, ದಾವಣಗೆರೆ, ಕಲಬುರ್ಗಿ ಮತ್ತು ಬೆಂಗಳೂರಿನಲ್ಲೂ ಚಿತ್ರಕಲಾ ಅಭ್ಯಾಸದಲ್ಲಿ ತೊಡಗಿಕೊಂಡು ಖ್ಯಾತ ಕಲಾವಿದರೆಂದು ಹೆಸರು ಮಾಡಿದ್ದಾರೆ. ಕರ್ನಾಟಕದ ಶ್ರೇಷ್ಠ ಕಲಾವಿದರ ಮಾರ್ಗದರ್ಶನದಲ್ಲಿ ಬೆಳೆದುಬಂದಿರುವ ಬಸವಂತಪ್ಪನವರು ರಾಜ್ಯ ಮತ್ತು ರಾಷ್ಟ್ರೀಯ ಲಲಿತ ಕಲಾ ಅಕಾಡೆಮಿಯ ಪ್ರಶಸ್ತಿ, ಕ್ಯಾಮ್ಲಿನ ಆರ್ಟ್ ಫೌಂಡೇಷನ್ ಆಯೋಜಿಸುವ ಯೂರೋ ಆರ್ಟ್ ಟೂರ್ ಪ್ರಶಸ್ತಿಗಳಿಗೆ ಭಾಜನರು. ಬೆಂಗಳೂರಿನ ರಾಷ್ಟ್ರೀಯ ಆಧುನಿಕ ಕಲಾ ಗ್ಯಾಲರಿಯಲ್ಲಿ ಕಾರ್ಯಕ್ರಮ ಮತ್ತು ಪ್ರದರ್ಶನ ಅಧಿಕಾರಿಯಾಗಿ ಸೇವೆ ಸಲ್ಲಿಸಿ ನಿವೃತ್ತಿ ಪಡೆದು ಈಗ ತಮ್ಮದೇ ಆದ ಆರ್ಟ್ ಗ್ಯಾಲರಿ ಮತ್ತು ಕಲಾ ಕಾಲೇಜನ್ನು ನಡೆಸುತ್ತಿದ್ದಾರೆ ಈ ಪ್ರತಿಭಾವಂತ ಕಲಾವಿದ.

ನಮ್ಮ ದೇಶದ ಸಂಸ್ಕೃತಿ, ಜೀವನ ಮತ್ತು ಆಚರಣೆಗಳೇ ಇವರ ಕಲಾ ಸೃಷ್ಟಿಗೆ ಪ್ರೇರಣೆ.





Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

